# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಮೋನಪ್ಪ, ಶ್ರೀಹರಿ, ಹರಿಣಿ, ರಾಂಚಂದ್ರ ಕೊಪ್ಪಲು
ಎನ್. ಆರ್. ಬೊಮ್ನಳ್ಳಿ, ಆದರ್ಶ ಪೈ, ಜಿ. ಎಂ. ಬೊಮ್ನಳ್ಳಿ, ಬಿ. ವಿಲ್ಸನ್

ಮುಖಚಿತ್ರ : ದೇವರಾಜ ಸ್ವಾಮಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

"ನಿಮ್ಮ ಜೀವನದಲ್ಲಿ ಸುಖವೆಂದು ಯಾವುದನ್ನು ಬಗೆಯುತ್ತೀರಿ'' ಎಂದು ಶಹನಾಯ್ ಪಟು ಬಿಸ್ಮಿಲ್ಲಾ ಖಾನ್ ಅವರನ್ನು ಒಮ್ಮೆ ಕೇಳಲಾಗಿತ್ತು. ಅದಕ್ಕೆ ಅವರ ಉತ್ತರ : ''ವಾರಾಣಸಿಯಲ್ಲಿರುವುದು, ಇಲ್ಲಿ ದೋಣಿಯಲ್ಲಿ ಕುಳಿತು ಗಂಗೆಯಲ್ಲಿ ವಿಹರಿಸುವುದು, ಹಾಗೆ ಮಾಡುತ್ತಿರುವಾಗ ಸಿದ್ದೇಶ್ವರಿಯವರ ಮಧುರಗಾನವನ್ನು ಕೇಳುತ್ತಾ ಆನಂದಿಸುವುದು''. ಅಂತಹ ಊರಿನಲ್ಲಿ ಇಷ್ಟು ಪ್ರಕ್ಷುಬ್ಧ ವಾತಾವರಣ ಮೂಡಿತಲ್ಲಾ ಎಂದು ಅವರು ಮತ್ತು ಇಡೀ ದೇಶ ಪರಿತಪಿಸುತ್ತಿದೆ. ಅಲ್ಲಿ ನಡೆದ ಭೀಕರ ಕೃತ್ಯವನ್ನು ಖಂಡಿಸಲು ಸಾಕಷ್ಟು ಬಲವಾದ ಪದಗಳು ದೊರೆಯುವುದಿಲ್ಲ. ದೇವಸ್ಥಾನದಲ್ಲಿ ಪೂಜೆ ಸಲ್ಲಿಸಲು ತೆರಳಿದ್ದವರ ಮೇಲೆ ಬಾಂಬು ಸಿಡಿಸಿ ಕೊಲ್ಲುವುದು, ಪೂಜಾಸ್ಥಳವೊಂದನ್ನು ಹಲ್ಲೆಗೆ ಗುರಿಮಾಡುವುದು, ಅದರಿಂದ ಏನನ್ನೋ ಸಾಧಿಸಿರುವಂತೆ ಬಗೆಯುವುದು, ಇವೆಲ್ಲಾ ಕಡುಪಾತಕಿಗಳಿಗೆ ಮಾತ್ರ ಸಾಧ್ಯ. ಅವರಿಗೆ ಬೇಕಾದ್ದು ಕೋಮುಗಲಭೆ, ಜನರ ಕಷ್ಟನಷ್ಟಗಳು, ಪರಸ್ಪರ ದ್ವೇಷದ ಭಾವನೆ ಮತ್ತು ಆಂತರಿಕ ತುಮುಲದ ವಾತಾವರಣ. ವಾರಾಣಸಿಯ ನಾಗರಿಕರು ಭಯೋತ್ಪಾದಕ ಕೃತ್ಯವನ್ನು ಕಟುವಾಗಿ ನಿಂದಿಸಿದ್ದಾರೆ ಮತ್ತು ಕೋಮುಗಲಭೆಗೆ ಅವಕಾಶವಿಲ್ಲದಂತೆ ಒಂದಾಗಿ ಪ್ರತಿಭಟಿಸಿದ್ದಾರೆ. ಇದು ಇಡೀ ದೇಶಕ್ಕೆ ಒಂದು ಮಾದರಿ ಹಾಗೂ ಹೆಮ್ಮೆಯ ವಿಷಯ. ನೆರೆರಾಜ್ಯದ ಅಧ್ಯಕ್ಷ ಮತ್ತು ಸೇನೆಯ ದಂಡನಾಯಕ ತನ್ನ ದೇಶವನ್ನು ಭಯೋತ್ಪಾದಕರು ಬಳಸಲು ಬಿಡುವುದಿಲ್ಲವೆಂದು ಹೇಳುತ್ತಲೇ ಇರುವುದು ರೂಢಿ. ಅಮೆರಿಕಾದ ಅಧ್ಯಕ್ಷ ಸಹ ಇದನ್ನು ಆಗುಮಾಡಲು ಬದ್ಧನೆಂದು ಸಾರುವುದನ್ನು ಕೇಳಿ ಕೇಳಿ ಸಾಕಾಗಿದೆ. ನೆರೆರಾಜ್ಯದ ಸಹಾಯ ಮತ್ತು ಮಧ್ಯಪ್ರವೇಶ ಇಲ್ಲದೆಯೂ ಭಯೋತ್ಪಾದಕರು ತಮ್ಮ ದುಷ್ಟ ಸಾಹಸಕ್ಕೆ ಕೈಹಾಕುವುದು ಸಾಧ್ಯ; ಆದರೆ ತರಬೇತಿ ಶಿಬಿರಗಳಿರುವುದು ದಂಡಕಾರಣ್ಯದಲ್ಲಿ ಅಲ್ಲ, ಹರಪ್ಪ - ಮೊಹೆಂಜೊದಾರೊ ಸನಿಹದಲ್ಲಿ. ಆ ಪುರಾತನ ನಾಗರಿಕತೆಯ ಅವಶೇಷಗಳು ಈ ಹೇಯಕೃತ್ಯವನ್ನು ನೋಡಬೇಕಾಗಿಬಂದಿರುವುದು ಒಂದು ದುರಂತ. ವಾರಾಣಸಿಯ ಪೂಜಾಸ್ಥಳವನ್ನು ಹೊಲಸುಗೆಡವಿದ ದುರುಳರನ್ನು ಖಂಡಿಸಲಿಲ್ಲವೆಂಬ ಆಪಾದನೆಯನ್ನು ಹೊರಿಸುವ ರಾಜಕೀಯ ಪಕ್ಷವೊಂದು ನಮ್ಮ ದೇಶವನ್ನು ಆಳಿದೆ; ಹಾಗೆ ಆಳುತ್ತಿದ್ದ ವರ್ಷಗಳಲ್ಲಿ ಭಯೋತ್ಪಾದಕ ಕೃತ್ಯಗಳು ನಡೆಯಲೇ ಇಲ್ಲವೇನೋ ಎಂಬಂತೆ ಸೋಗು ಹಾಕುವ ಅಡ್ವಾನಿ ಬಳಗದ ಬಾಲಿಶತ್ವ ಮತ್ತು ಬೇಜವಾಬ್ದಾರಿತನಕ್ಕೆ ಮರುಗಬೇಕಾಗಿದೆ. ಪತ್ರಿಕಾ ಹೇಳಿಕೆಯನ್ನು ನೀಡಿ ವಾರಾಣಸಿ ದುರ್ಘಟನೆಯನ್ನು ಖಂಡಿಸದಿದ್ದವರೆಲ್ಲಾ ಭಯೋತ್ಪಾದಕ ಕೃತ್ಯದ ಸಮರ್ಥಕರೆಂದು ಸಾರುವುದು ಭಯೋತ್ಪಾದನಾ ಕೃತ್ಯದಷ್ಟೇ ಹೀನವಾದದ್ದು. ಅದನ್ನು ಯಾರು ತಾನೆ ಖಂಡಿಸದಿರುತ್ತಾರೆ ? 'ಹೊಸತು' ಪತ್ರಿಕೆಯ ಬಳಗ ಹಾಗೂ ಓದುಗರು ಅದನ್ನು ಪ್ರತ್ಯೇಕವಾಗಿ ಖಂಡಿಸಿದರೆ ಮಾತ್ರ ದೇಶದ ಹಿತಕಾರಿಗಳೆಂಬ ಅರ್ಹತಾಪತ್ರವನ್ನು ಪಡೆಯುತ್ತಾರೆಂದು ಯಾರಾದರೂ ಭಾವಿಸಿದ್ದರೆ ಅದು ಸರ್ವಥಾ ಅನುಚಿತವಾದ ನಿಲುವಾಗುತ್ತದೆ. ದೇಶದ ಎಲ್ಲ ವಿಭಾಗಗಳಿಗೂ ಇದು ಅನ್ವಯಿಸುತ್ತದೆ. ಭಯೋತ್ಪಾದಕರನ್ನು ಹಿಡಿದು ಶಿಕ್ಷಿಸಬೇಕೆಂಬುದು ಸಾರ್ವತ್ರಿಕ ಆಶಯ.

ಭಾರತೀಯ ಜನತಾ ಪಕ್ಷವು ಅಧಿಕಾರದಲ್ಲಿದ್ದಾಗಲೂ ಇಂತಹ ಘೋರ ಅಪರಾಧಗಳು ಜರುಗಿದ್ದವು. ಆದರೆ ದೇಶದಲ್ಲಿ ಯಾರೂ ಅದಕ್ಕೆ ಕೇವಲ ವಾಜಪೇಯಿ ಸರ್ಕಾರದ ಧೋರಣೆ ಹಾಗೂ ಸನ್ನದ್ಧತೆಯಿಲ್ಲದ ಅಜಾಗರೂಕತೆ ಕಾರಣವೆಂದು ಹೇಳಿ ತಮ್ಮನ್ನು ಸರ್ಕಾರದಿಂದ ಭಿನ್ನೈಸಿಕೊಳ್ಳಲಿಲ್ಲ. ಅಡ್ವಾನಿಯವರ ತಲೆಯೊಳಗೆ ಸ್ಮೃತಿಗೆ ಕಾರಣವಾಗುವ ಮಿದುಳಿನ ಭಾಗದಲ್ಲಿ ಏನೋ ಊನವಾಗಿದೆಯಾದ್ದರಿಂದ ಇದನ್ನೆಲ್ಲಾ ಅವರು ಮರೆತವರಂತೆ ನಟಿಸುತ್ತಾರೆ. ದೇಶದ ಜನದ ಮಿದುಳಿನಲ್ಲೂ ಅದೇ ಕೊರತೆ ಇದೆಯೆಂದು ಅವರು ಭ್ರಮಿಸಿದ್ದಾರೆ. ''ಅಲ್ಪಸಂಖ್ಯಾತರನ್ನು ಓಲೈಸುವ ನೀತಿಯಿಂದಾಗಿ ವಾರಾಣಸಿಯಲ್ಲಿ ಭಯೋತ್ಪಾದಕರು ವಿಜೃಂಭಿಸಿದ್ದಾರೆ'' ಎಂದು ಅಡ್ವಾನಿ ಮತ್ತು ರಾಜನಾಥ ಸಿಂಗ್ ಹೇಳಿದ್ದಾರೆಂದರೆ ದೇಶವನ್ನು ಇಬ್ಭಾಗ ಮಾಡಲು ಅವರು ಹೇಗೆ ಹವಣಿಸುತ್ತಾರೆಂಬುದು ಸ್ಪಷ್ಟವಾಗುತ್ತದೆ. ಮಸೀದಿ ಒಡೆದು ಅಧಿಕಾರಕ್ಕೆ ಬರುವುದು, ಇಟ್ಟಿಗೆ ಸಂಸ್ಕೃತಿಯ ಪ್ರಚಾರಕರಾಗುವುದು, ಜಹೀರಾಳಂಥವರನ್ನು ಬೆದರಿಸಿ ನ್ಯಾಯಾಲಯದಲ್ಲಿ ಸುಳ್ಳು ಹೇಳಿಕೆಗಳನ್ನು ಕೊಡುವಂತೆ ಮಾಡುವುದು, ಇವೆಲ್ಲಾ ಅವರಿಗೆ ಕರಗತವಾಗಿದೆ. ಹಿಂದುಗಳು ಮತ್ತು ಕ್ರಿಶ್ಚಿಯನ್ನರು ಒಟ್ಟಾಗಿ ಮುಸಲ್ಮಾನರನ್ನು ಹಾದಿಗೆ ತರಬೇಕೆಂಬ ಇಂಗಿತವನ್ನು ಪ್ರವೀಣ ತೋಗಡಿಯ ವ್ಯಕ್ತಪಡಿಸಿರುವುದುಂಟು. ಎಲ್ಲ ಮುಸಲ್ಮಾನರೂ ಭಯೋತ್ಪಾದಕರೆಂದು ಚಿತ್ರಣಗೊಂಡರೆ ತಾವು ಚುನಾವಣೆಗಳಲ್ಲಿ ಗೆಲ್ಲಬಹುದೆಂಬ ಭರವಸೆ ಅಡ್ವಾನಿಯವರಲ್ಲಿದೆ. ಅವರು ಗೆಲ್ಲಬಹುದು, ಆದರೆ ದೇಶವು ಛಿದ್ರಗೊಳ್ಳುತ್ತದೆ. ವೋಟು ರಾಜಕೀಯವೆಂದು ಕಾಂಗ್ರೆಸ್ಸಿನ ನೀತಿಯನ್ನು ಜರಿಯುತ್ತಾ ತಾವೇ ಆ ರಾಜಕೀಯ ಮಾಡಹೊರಟಿರುವುದು ನಮ್ಮ

೧೧ನೇ ಪುಟಕ್ಕೆ




ಸಂಪುಟ-೭ ಸಂಚಿಕೆ-೯ ಏಪ್ರಿಲ್ ೨೦೦೬

ಸಂಪಾದಕ

ಜಿ. ರಾಮಕೃಷ್ಣ

ಸಹಸಂಪಾದಕರು

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

ವ್ಯವಸ್ಥಾಪಕ

ಎ. ಆರ್. ಉಡುಪ

ಮುದ್ರಕ-ಪ್ರಕಾಶಕ

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

ಮುದ್ರಣ

ನವಕರ್ನಾಟಕ ಪ್ರಿಂಟರ್ಸ್
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

ಹೊಸತು ಕಚೇರಿಯ ವಿಳಾಸ




ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೭೮೦೪, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : nkp@bgl.vsnl.net.in
website : www.navakarnatakabooks.com

ಆಹ್ವಾನಿತ ಸಂಪಾದಕೀಯ

# ಕೇಂದ್ರ ಬಜೆಟ್ - ೨೦೦೬

ದೇಶದ ಸಮಗ್ರ ಉತ್ಪನ್ನದಲ್ಲಿ (Gross domestic products) ಕಳೆದ ಎರಡು ಮೂರು ವರ್ಷಗಳಲ್ಲಾಗಿರುವ ಗಮನಾರ್ಹ ಏರಿಕೆಯ ಫಲವಾಗಿ ಕೇಂದ್ರ ಸರ್ಕಾರದ ಪ್ರಸಕ್ತ ವರ್ಷದ ಆದಾಯ ನಿರೀಕ್ಷೆಗಿಂತ ಹೆಚ್ಚಾಗಿದ್ದುದರಿಂದ ವಿತ್ತಮಂತ್ರಿ ಶ್ರೀ ಚಿದಂಬರಂರವರು ೨೦೦೬-೦೭ರ ಬಜೆಟ್ಟನ್ನು ಅಷ್ಟೇನೂ ತೊಂದರೆಯಿಲ್ಲದೆ ಮಂಡಿಸುವಂತಾಯಿತು. ಅವರು ಹೊಸ ತೆರಿಗೆಗಳನ್ನು ವಿಧಿಸದಿದ್ದರೂ ಸರ್ಕಾರದ ಒಟ್ಟು ವೆಚ್ಚವನ್ನು ಹೆಚ್ಚಿಸಲು ವಿಪರೀತ ಸಾಲವನ್ನಾಗಲಿ ಅಥವಾ ಬಜೆಟ್ ಕೊರತೆಯನ್ನು (fiscal deficit) ಮಿತಿಮೀರಿ ಹೆಚ್ಚಿಸುವುದಾಗಲಿ ಮಾಡಬೇಕಾಗಲಿಲ್ಲ. ಪರಿಣಾಮವಾಗಿ ಬರುವ ವರ್ಷದ ಅಂದಾಜುಪತ್ರಕ್ಕೆ ಒಳ್ಳೆಯ ಪ್ರತಿಕ್ರಿಯೆ ಸಿಕ್ಕಿದಂತಾಗಿದೆ. ಆದರೆ ದೇಶದ ಪ್ರಗತಿಯಿಂದ ಉಂಟಾಗಿರುವ ಅವಕಾಶಗಳನ್ನು ಉಪಯೋಗಿಸಿಕೊಂಡು ಸಾಧಿಸಬಹುದಾಗಿದ್ದುದೆಲ್ಲವನ್ನೂ ಮಾಡಿದ್ದಾರೆಯೇ ಎಂಬ ಪ್ರಶ್ನೆ ಉಳಿಯುತ್ತದೆ. ಪ್ರಧಾನಿ ಮನಮೋಹನ ಸಿಂಗ್‌ರವರು ಹೇಳಿರುವಂತೆ ದೇಶದ ಒಟ್ಟು ಉತ್ಪಾದನೆಯ ದರ ವಾರ್ಷಿಕವಾಗಿ ಸರಾಸರಿ ಶೇಕಡ ೧೦ರಷ್ಟಾಗುವಂತೆ, ಮತ್ತು ಸಾಮಾನ್ಯ ಜನರ ಜೀವನಕ್ಕೆ ಬೇಕಾಗಿರುವ ಮೂಲಭೂತ ಸೌಕರ್ಯಗಳನ್ನು ತ್ವರಿತವಾಗಿ ಒದಗಿಸಲು ಬೇಕಾಗುವ ಕಾರ್ಯಗಳನ್ನೆಲ್ಲಾ ಶ್ರೀ ಚಿದಂಬರಂರವರು ಕೈಗೆತ್ತಿಕೊಂಡಿದ್ದಾರೆಯೆ ಎಂದು ಕೇಳುವುದು ಅನಿವಾರ್ಯವಾಗುತ್ತದೆ. ಏಕೆಂದರೆ ಸ್ವಾತಂತ್ರ್ಯಾನಂತರ ಅನೇಕ ಕ್ಷೇತ್ರಗಳಲ್ಲಿ ದೇಶ ಸಾಕಷ್ಟು ಮುಂದುವರೆದಿದ್ದರೂ ಜನಸಂಖ್ಯೆಗೆ ಅನುಗುಣವಾಗಿ ಉದ್ಯೋಗಾವಕಾಶಗಳಾಗಲಿ ಜನಾನುಕೂಲಗಳಾಗಲಿ ಬೆಳೆದಿಲ್ಲವೆಂಬುದು ನಿರ್ವಿವಾದ. ಇದಕ್ಕೆ ಕಾರಣವೇನು ? ಬಜೆಟ್‌ನಲ್ಲಿ ಅವರು ಸೂಚಿಸಿರುವುದಕ್ಕಿಂತ ಹೆಚ್ಚಾಗಿ ಏನೇನನ್ನು ಮಾಡಲು ಅವರಿಗೆ ಸಾಧ್ಯವಿತ್ತು ಎಂಬುದನ್ನು ವಿವೇಚಿಸುವುದು ಸೂಕ್ತ.

ಈ ಪ್ರಶ್ನೆಗಳಿಗೆ ಉತ್ತರ ದೊರಕಬೇಕಾದರೆ ಹೊಸವರ್ಷದ ಬಜೆಟ್‌ನಲ್ಲಿ ತೋರಿಸಿರುವ ಆದಾಯಕ್ಕಿಂತ ಮೊದಲು ಸರ್ಕಾರ ಉದ್ದೇಶಿಸಿರುವ ವೆಚ್ಚಗಳೇನು, ಯಾವ ಯಾವ ಕಾರ್ಯಗಳಿಗೆ ಎಷ್ಟು ಮೀಸಲಾಗಿದೆ, ಇವುಗಳಲ್ಲಿ ಹೂಡಿಕೆ ಎಷ್ಟು, ಇತರ ಖರ್ಚುಗಳೇನು, ಫಲಾನುಭವಿಗಳು ಯಾರು ಮುಂತಾದ ಮುಖ್ಯ ವಿಷಯಗಳನ್ನು ಪರಿಶೀಲಿಸಬೇಕಾಗುತ್ತದೆ. ಹಾಗೆಯೇ ಈ ವೆಚ್ಚಗಳು ಸರ್ಕಾರದ ರಾಷ್ಟ್ರೀಯ ಸಾಮಾನ್ಯ ಕನಿಷ್ಠ ಕಾರ್ಯಕ್ರಮಕ್ಕೆ ಅನುಗುಣವಾಗಿದೆಯೇ ಎಂಬುದನ್ನೂ ವಿಮರ್ಶಿಸಬೇಕು.

ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿರುವ ಆದ್ಯತೆಗಳಲ್ಲಿ ಪ್ರಮುಖವಾದವು (೧) ಕೃಷಿಕ್ಷೇತ್ರಕ್ಕೆ ಒದಗಿಸಬೇಕಾದ ಸೌಕರ್ಯಗಳು (೨) 'ಭಾರತ ನಿರ್ಮಾಣ'ದ ಕಾರ್ಯಗಳು (೩) ಮೂಲಭೂತ ಸೌಕರ್ಯಗಳಲ್ಲಿ ಹೂಡಿಕೆ ಮತ್ತು (೪) ಗ್ರಾಮೀಣ ಪ್ರದೇಶದಲ್ಲಿ ಕಲ್ಪಿಸಬೇಕಾದ ಉದ್ಯೋಗಾವಕಾಶಗಳು. ಅತ್ಯವಶ್ಯಕವಾದ ಈ ಕಾರ್ಯಗಳಲ್ಲಿ ಮುಂದಿನ ಕೆಲವು ವರ್ಷಗಳಲ್ಲಿ ಸಾಧಿಸಬೇಕಾಗಿರುವ ಗುರಿಗಳನ್ನೂ ಈ ಸಾಮಾನ್ಯ ಕಾರ್ಯಕ್ರಮದಲ್ಲಿ ಸೂಚಿಸಲಾಗಿದೆ. ಇವುಗಳನ್ನು ಗಣನೆಯಲ್ಲಿಟ್ಟುಕೊಂಡು ೨೦೦೬-೦೭ರ ಬಜೆಟ್‌ನಲ್ಲಿ ಶ್ರೀ ಚಿದಂಬರಂರವರು ಈ ನಾಲ್ಕು ವಿಷಯಗಳಿಗೆ ನಿಗದಿಪಡಿಸಿರುವ ಖರ್ಚುಗಳೇನು ಎಂದು ನೋಡೋಣ.

**ಕೃಷಿ ಸೌಕರ್ಯಗಳು**

ರಾಷ್ಟ್ರೀಯ ಸಮಗ್ರ ಉತ್ಪಾದನೆಯನ್ನು ಶೇಕಡ ೮ರ ದರದಲ್ಲಿ ಏರಿಸಲು ಈಗತಾನೇ ಸಾಧ್ಯವಾಗಿದೆ. ಆದರೆ ಈ ಬೆಳವಣಿಗೆಗೆ ಕೃಷಿಕ್ಷೇತ್ರದ ಕೊಡುಗೆ ಹೇಳಿಕೊಳ್ಳುವಂತಹುದಲ್ಲ. ಕಳೆದ ವರ್ಷಗಳಲ್ಲಿ ಆ ಕ್ಷೇತ್ರದ ಪ್ರಗತಿಯಲ್ಲಾಗಿರುವ ಏರುಪೇರುಗಳನ್ನು ಗಮನಿಸಿದಾಗ ಈಗಲೂ ನಮ್ಮ ದೇಶದಲ್ಲಿ ವ್ಯವಸಾಯದ ಉತ್ಪತ್ತಿ ಅತಿವೃಷ್ಟಿ - ಅನಾವೃಷ್ಟಿಗಳನ್ನು ಅವಲಂಬಿಸಿರುವುದು ಸ್ಪಷ್ಟ. ಇಂತಹ ಬದಲಾವಣೆಗಳನ್ನು ಸಂಪೂರ್ಣವಾಗಿ ನಿವಾರಿಸುವುದು ಅಸಾಧ್ಯ. ಆದರೆ ಅವುಗಳ ವ್ಯಾಪ್ತಿಯನ್ನು ಕಡಿಮೆಮಾಡಿ ವಾರ್ಷಿಕ ಸರಾಸರಿಯ ಮಟ್ಟವನ್ನು ಕ್ರಮೇಣ ಹೆಚ್ಚಿಸಬೇಕಾದರೆ ಜಮೀನಿಗೆ ದೊರಕುವ ನೀರಾವರಿ ಸೌಲಭ್ಯಗಳನ್ನು ಹೆಚ್ಚಿಸಬೇಕು; ಜೊತೆಗೆ ಹೊಸಬೆಳೆಗಳು, ಹೊಸತಳಿಗಳು, ಅನುಸರಿಸುವ ತಾಂತ್ರಿಕ ವಿಧಾನ, ಗೊಬ್ಬರ ಮತ್ತು ಕೀಟನಾಶಕಗಳ ಉಪಯೋಗದ ರೀತಿ ಮುಂತಾದುವೆಲ್ಲಾ ಬದಲಾಗುವುದು ಅವಶ್ಯ. ಕೃಷಿಕರಿಗೆ ಉತ್ಪಾದನೆಯನ್ನು ಏರಿಸಲು ಬೇಕಾಗುವ ಸಾಲಗಳು, ಮಾರುಕಟ್ಟೆಗಳು, ಸಾರಿಗೆ ಸೌಕರ್ಯಗಳು ಇತ್ಯಾದಿಗಳನ್ನು ಕ್ರಮಬದ್ಧವಾಗಿ ಒದಗಿಸಬೇಕಾಗುತ್ತದೆ. ಆದರೆ ಸಂವಿಧಾನದ ಪ್ರಕಾರ ಇವೆಲ್ಲಾ ರಾಜ್ಯ ಸರ್ಕಾರಗಳ ವ್ಯಾಪ್ತಿಗೆ ಬರುವ ವಿಷಯಗಳು. ಕೇಂದ್ರ ಸರ್ಕಾರದ ಪಾತ್ರ ಏನಿದ್ದರೂ ರಾಜ್ಯ ಸರ್ಕಾರದ ಯೋಜನೆಗಳಿಗೆ, ಮತ್ತು ಬ್ಯಾಂಕುಗಳ ಮುಖಾಂತರ ರೈತಾಪಿ ಜನರಿಗೆ ದೊರಕುವ ಸಾಲಗಳನ್ನು ಹೆಚ್ಚಿಸುವುದು, ವ್ಯಾಪಾರ ನೀತಿಯಲ್ಲಿ ಮಾರ್ಪಾಟು, ಸಂಶೋಧನೆ, ಕೃಷಿಸಾಮಗ್ರಿಗಳ ಸಂಸ್ಕರಣೆ, ಗೋದಾಮುಗಳ ಸ್ಥಾಪನೆ ಮುಂತಾದವುಗಳಲ್ಲಿ ಸಹಕರಿಸಬಹುದು. ಜೊತೆಗೆ ಪಂಚವಾರ್ಷಿಕ ಯೋಜನೆಗಳ ಅಂಗವಾಗಿ ದೊಡ್ಡ ನೀರಾವರಿ ಅಥವಾ ವಿದ್ಯುಚ್ಛಕ್ತಿ ಸ್ಥಾವರಗಳಿಗೆ ಅನುದಾನ ಮತ್ತು ಸಾಲಗಳನ್ನು ರಾಜ್ಯ ಸರ್ಕಾರಗಳಿಗೆ ಕೊಡಬಹುದು.

ಇವೆಲ್ಲವನ್ನೂ ಗಮನದಲ್ಲಿಟ್ಟುಕೊಂಡು ಶ್ರೀ ಚಿದಂಬರಂರವರ ಬಜೆಟ್ಟನ್ನು ಪರಿಶೀಲಿಸಿದರೆ ಪ್ರಮುಖವಾಗಿ ಕಾಣುವುದು ವಾಣಿಜ್ಯ ಮತ್ತು ಸಹಕಾರ ಬ್ಯಾಂಕುಗಳ ಮುಖಾಂತರ ಬರುವ ವರ್ಷದಲ್ಲಿ ಒದಗಿಸಬೇಕೆಂದಿರುವ ಸಾಲದ ಮೊತ್ತ. ಇದರ ಪ್ರಮಾಣ ೨೦೦೪-೦೫ರಲ್ಲಿದ್ದ ರೂ. ೧೨೫,೦೦೦ಕೋಟಿಯಿಂದ ಈ ವರ್ಷದಲ್ಲಿ ರೂ ೧೪೫,೩೦೦ ಕೋಟಿಯಾಗಿತ್ತೆಂದು ಅಂದಾಜು; ಇದನ್ನು ೨೦೦೬-೦೭ರಲ್ಲಿ ರೂ. ೧೭೫,೦೦೦ ಕೋಟಿಗೆ ಹೆಚ್ಚಿಸುವುದಕ್ಕೆ NABARD ಮುಖಾಂತರ ಏರ್ಪಾಟು ಮಾಡುವ ಆಶ್ವಾಸನೆ ನೀಡಿದ್ದಾರೆ; ವ್ಯಕ್ತಿಗತವಾಗಲ್ಲದೆ ಸ್ವ-ಸಹಾಯ ಸಂಸ್ಥೆಗಳ ಮುಖಾಂತರ ಪಡೆಯಲು ಏರ್ಪಾಟು ಮಾಡುವುದಾಗಿ ತಿಳಿಸಿದ್ದಾರೆ. ಆದರೆ ಈ ಉದ್ದೇಶದಿಂದ ಸಣ್ಣ ರೈತರು ಮತ್ತು ಗೇಣಿಗೆದಾರರಿಗೆ ಅನುಕೂಲವಾಗಿ ಅವರ ಉತ್ಪಾದನೆಯಲ್ಲಿ ಗಮನಾರ್ಹ ಏರಿಕೆಯಾಗಬೇಕಾದರೆ ಕೃಷಿ ಮತ್ತು ಸಾಲನೀತಿಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳು ಅತ್ಯಗತ್ಯ. ಕೆಲವು ದಶಮಾನಗಳ ಹಿಂದೆ ರೈತರಿಗೆ ದೊರಕುವ ಸಾಲವನ್ನು ಹೆಚ್ಚಿಸಲು 'ಸಾಲಮೇಳ'ವನ್ನು ಕೇಂದ್ರ ಸರ್ಕಾರದ ಒತ್ತಡದ ಮೇಲೆ ರಾಷ್ಟ್ರೀಕೃತ ಬ್ಯಾಂಕುಗಳೆಲ್ಲಾ ಹಮ್ಮಿಕೊಂಡಿದ್ದವು. ಅವುಗಳಿಂದ ರೈತರ ಸಾಲದ ಹೊರೆ ಜಾಸ್ತಿಯಾಯಿತೇ ಹೊರತು ಅವರಿಗೇನೂ ಪ್ರಯೋಜನವಾಗಲಿಲ್ಲ, ರೈತರ ಹೆಸರಿನಲ್ಲಿ ಉಳಿದವರು ಲಾಭ ಪಡೆದರು. ಕೃಷಿಕ್ಷೇತ್ರದಲ್ಲಿ ಯಾವ ಪ್ರಗತಿಯೂ ಆಗಲಿಲ್ಲ. ಈ ಅನುಭವವನ್ನೂ ನೆನಪಿನಲ್ಲಿಟ್ಟುಕೊಂಡು ಬ್ಯಾಂಕುಗಳು ನೀಡುವ ಸಾಲಗಳೆಲ್ಲಾ ಸಂಪೂರ್ಣವಾಗಿ ರೈತರ ಕೈಸೇರುವಂತೆ ಮಾಡುವುದಲ್ಲದೆ ಅವು ಸರಿಯಾದ ಕಾಲದಲ್ಲಿ, ಆದಷ್ಟು ಕಡಿಮೆ ಬಡ್ಡಿ ಮತ್ತು ವೆಚ್ಚಗಳೊಂದಿಗೆ ತಲುಪುವಂತಾಗಬೇಕು.

ಎಲ್ಲಕ್ಕಿಂತ ಹೆಚ್ಚಾಗಿ ಗ್ರಾಮೀಣ ಕ್ಷೇತ್ರದಲ್ಲಿ ಬೇರೂರಿರುವ ಪಟ್ಟಭದ್ರ ಹಿತಾಸಕ್ತಿಗಳು ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳು ಒದಗಿಸುವ ಹಣ ಮತ್ತು ಸೌಕರ್ಯಗಳನ್ನು ತಮ್ಮ ಹತೋಟಿಗೆ ತೆಗೆದುಕೊಳ್ಳದಂತೆ ಎಲ್ಲಾ ವಿಧವಾದ ಮುಂಜಾಗ್ರತೆಗಳನ್ನು ಜಾರಿಗೆ ತಂದು ಅವುಗಳನ್ನು ನಿಖರವಾಗಿ ನಡೆಸಿಕೊಂಡು ಹೋಗುವುದು ಅತ್ಯವಶ್ಯಕ. ಅಂದರೆ ಉದ್ದೇಶವನ್ನು ಪ್ರಕಟಿಸಿದರೆ ಮಾತ್ರ ಸಾಲದು; ಅದಕ್ಕೆ ಅನುಗುಣವಾಗಿ ಸರ್ಕಾರಿ ಆಡಳಿತ, ಸ್ಥಳೀಯ ಸಂಸ್ಥೆಗಳು, ಬ್ಯಾಂಕುಗಳ ನಿರ್ದೇಶಕರು, ಖಾಸಗೀ ಸಂಸ್ಥೆಗಳು – ಇವೆಲ್ಲಾ ಪ್ರಾಮಾಣಿಕವಾಗಿ ಕೆಲಸ ಮಾಡದ ಹೊರತು ಕೃಷಿಕ್ಷೇತ್ರದ ಬೆಳವಣಿಗೆಯಲ್ಲಿ ಯಾವ ವ್ಯತ್ಯಾಸವೂ ಆಗುವುದಿಲ್ಲ. ಈಗಿರುವ ಸಂದರ್ಭದಲ್ಲಿ ಕೃಷಿಕ್ಷೇತ್ರದ ಬೆಳವಣಿಗೆಗೆ ಮುಖ್ಯವಾಗಿ ಬೇಕಾಗಿರುವುದು ಭೂಸುಧಾರಣೆ, ಗೇಣಿದಾರರಿಗೆ ಸುರಕ್ಷತೆ, ಮಾರುಕಟ್ಟೆ ಮತ್ತು ವಿಮಾ ಸೌಕರ್ಯಗಳು, ಆರ್ಥಿಕ ಮತ್ತು ಸಾಮಾಜಿಕ ಶೋಷಣೆಗಳಿಂದ ಬಿಡುಗಡೆ – ಒಟ್ಟಿನಲ್ಲಿ ಗ್ರಾಮೀಣ ಸಮಾಜ ಮತ್ತು ಕಾರ್ಯವ್ಯಾಪ್ತಿಗಳಲ್ಲಿ ಮಹತ್ತರ ಬದಲಾವಣೆಗಳಾಗಬೇಕಾಗಿದೆ. ಹಣ ಒದಗಿಸಿದರೆ ಮಾತ್ರ ಸಾಲದು.

ಹಾಗೆಯೇ ಅತಿಮುಖ್ಯವಾದ ಬದಲಾವಣೆಗಳಾಗಬೇಕಾಗಿರುವುದು ನೀರಾವರಿ ಸರಬರಾಜಿನಲ್ಲಿ. ಬಹುದೊಡ್ಡ ನೀರಾವರಿ ಯೋಜನೆಗಳ ನಿರ್ಮಾಣದ ಖರ್ಚನ್ನು ಕೇಂದ್ರ ಸರ್ಕಾರ ವಹಿಸಿಕೊಂಡರೂ ತದನಂತರದ ನಾಲೆಗಳ ಉಸ್ತುವಾರಿ, ಸಂರಕ್ಷಣೆ, ವಿಧಿಸುವ ಶುಲ್ಕಗಳು ಇವೆಲ್ಲಾ ರಾಜ್ಯದ ಆಡಳಿತಗಳ ಜವಾಬ್ದಾರಿ. ಈ ಹಂತದಲ್ಲೇ ಬೆಳೆಗಳಿಗೆ ಅಗತ್ಯವಾದ ನೀರಿನ ಪೂರೈಕೆಯಲ್ಲಿ ಅಭಾವ, ತಾರತಮ್ಯಗಳಾಗುವುದು. ನಾಲೆಗಳ ಕೆಳಹಂತದಲ್ಲಿರುವವರು, ಬಡರೈತರು, ಪರಿಶಿಷ್ಟವರ್ಗದವರು ಈ ವಿಷಯದಲ್ಲಿ ತೊಂದರೆಗೊಳಗಾಗುವುದು ಸರ್ವಸಾಮಾನ್ಯ. ಕೆರೆಗಳ ಅಚ್ಚುಕಟ್ಟಿನ ರೈತರ ಪರಿಸ್ಥಿತಿಯೂ ಹೀಗೆಯೆ. ಇದನ್ನೆಲ್ಲಾ ಸರಿಪಡಿಸುವುದರ ಜೊತೆಗೆ ದೇಶದಲ್ಲಿ ನೀರಾವರಿ ಸೌಲಭ್ಯ ಖಚಿತವಾಗಿರುವ ಜಮೀನುಗಳ ಪ್ರಮಾಣವನ್ನು ಹೆಚ್ಚಿಸುವುದು ಅಗತ್ಯ. ಸರ್ಕಾರೀ ಕ್ಷೇತ್ರದಲ್ಲಿ ಕೆಲವು ವರ್ಷಗಳಿಂದ ನೀರಾವರಿಯೋಜನೆಗಳಿಗೆ ಸಾಕಷ್ಟು ಹಣ ಸಹಾಯ ಕೇಂದ್ರ ಸರ್ಕಾರದಿಂದ ದೊರಕದೆ ಈ ನಿಟ್ಟಿನಲ್ಲಾಗಿರುವ ಪ್ರಗತಿ ಕಡಿಮೆ. ಹೆಚ್ಚು ಜಮೀನುಳ್ಳವರು ಕೊಳವೆ ಬಾವಿಗಳನ್ನು ತಮ್ಮ ಉಪಯೋಗಕ್ಕೆ ಬಳಸಿಕೊಂಡಿದ್ದಾರೆ. ಇತರರಿಗೆ ಇದು ಸಾಧ್ಯವಾಗದೆ ಇರುವುದರಿಂದ ಈಗಿನ ಸರ್ಕಾರ ತಮ್ಮ 'ಭಾರತ ನಿರ್ಮಾಣ'ದ ಅಂಗವಾಗಿ ನೀರಾವರಿ ಕಾರ್ಯವನ್ನು ಚುರುಕುಗೊಳಿಸುವುದು, ಕೆರೆ ಮುಂತಾದ ಜಲಪ್ರದೇಶಗಳ ಪುನರುಜ್ಜೀವನ, ರಾಜ್ಯ ಸರ್ಕಾರಗಳಿಗೆ ಕೊಡುವ ಅನುದಾನ ಇವುಗಳನ್ನು ಹೆಚ್ಚಿಸಲು ಸಂಕಲ್ಪಿಸಿದೆ. ಆದರೂ ೨೦೦೬-೦೭ರ ಬಜೆಟ್‌ನಲ್ಲಿ ಇವುಗಳಿಗೆ ಮೀಸಲಾಗಿರುವುದು ರೂ. ೧೧,೬೦೦ಕೋಟಿ ಮಾತ್ರ. ಇದಲ್ಲದೆ ಗ್ರಾಮೀಣ ಸೌಕರ್ಯಗಳ ಅಭಿವೃದ್ಧಿ ನಿಧಿ, ಕೃಷಿ ವಿಮಾ ಯೋಜನೆ ಮೊದಲಾದುವಕ್ಕೆ ಹಣ ಒದಗಿಸುವ ಏರ್ಪಾಟಿದೆ. ಇವೆಲ್ಲದರ ಪ್ರಯೋಜನ ಸಾಮಾನ್ಯ ರೈತರಿಗೆ ತಲುಪಬೇಕಾದರೆ ಮೇಲೆ ಹೇಳಿದಂತೆ ಅನೇಕ ಕ್ಷೇತ್ರಗಳಲ್ಲಿ ಆಡಳಿತವರ್ಗದ ರೀತಿನೀತಿಗಳಲ್ಲಿ ತೀವ್ರವಾದ ಸುಧಾರಣೆ ಆಗಬೇಕು.

## ಭಾರತ ನಿರ್ಮಾಣ

ರಾಷ್ಟ್ರೀಯ ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ ಕೃಷಿಯಷ್ಟೇ ಆದ್ಯತೆ ಪಡೆದಿರುವ ವಿಷಯಗಳೆಂದರೆ ವಿದ್ಯಾಭ್ಯಾಸ, ಆರೋಗ್ಯ, ಗ್ರಾಮ ನೈರ್ಮಲ್ಯ, ಕುಡಿಯುವ ನೀರು, ಗ್ರಾಮೀಣ ಉದ್ಯೋಗ ಮತ್ತು ನಗರಾಭಿವೃದ್ಧಿ. ಇವೆಲ್ಲದರ ಮಟ್ಟ ಬರುವ ಎಂಟು ಹತ್ತು ವರ್ಷಗಳಲ್ಲಿ ಎಲ್ಲಿರಬೇಕೆನ್ನುವುದೂ ಸೂಚಿಸಲ್ಪಟ್ಟಿದೆ. ಕೃಷಿಯಂತೆ ಈ ವಿಷಯಗಳೂ ರಾಜ್ಯ ಸರ್ಕಾರಗಳ ವ್ಯಾಪ್ತಿಗೆ ಒಳಪಟ್ಟಿರುವುದರಿಂದ ನಿಗದಿಪಡಿಸಿರುವ ಗುರಿಗಳನ್ನು ತಲುಪಬೇಕಾದರೆ ಕೇಂದ್ರಕ್ಕಿಂತ ರಾಜ್ಯ ಸರ್ಕಾರಗಳು ತೆಗೆದಿಡುವ ಸಂಪನ್ಮೂಲಗಳು ಮತ್ತು ಅವುಗಳ ವಿನಿಯೋಗದಲ್ಲಿ ಆಡಳಿತ ವರ್ಗದ ದಕ್ಷತೆ, ಸಾಮರ್ಥ್ಯಗಳನ್ನು ಅವಲಂಬಿಸುತ್ತದೆ. ತಮ್ಮ ಅಂದಾಜು ಪತ್ರದಲ್ಲಿ ಶ್ರೀ ಚಿದಂಬರಂರವರು ಬರುವ ವರ್ಷದಲ್ಲಿ ಭಾರತ ನಿರ್ಮಾಣದಲ್ಲಿ ಸೇರಿರುವ ಈ ವಿಷಯಗಳಿಗೆಲ್ಲಾ ನಿಗದಿಪಡಿಸಿರುವುದು ಕೇವಲ ರೂ. ೫೦,೦೦೦ಕೋಟಿ. ಇದರ ಆಧಾರದ ಮೇಲೆ ಏನು ಸಾಧನೆಯಾಗಬಹುದೆಂದು ನಿಷ್ಕರ್ಷಿಸಲು ಅಸಾಧ್ಯ; ಇದಕ್ಕಿಂತ ಹೆಚ್ಚುಪಟ್ಟು ರಾಜ್ಯ ಸರ್ಕಾರಗಳು ಖರ್ಚುಮಾಡುವುದಲ್ಲದೆ ಖಾಸಗೀ ವಲಯದವರೂ ಶಾಲೆ, ಆಸ್ಪತ್ರೆಗಳನ್ನು ಸ್ಥಾಪಿಸುತ್ತಿದ್ದಾರೆ. ಇವನ್ನೆಲ್ಲಾ ಒಟ್ಟುಗೂಡಿಸಿದರೆ ಆಗುವ ಖರ್ಚು ಈಗಲೇ ಸಮಗ್ರ ರಾಷ್ಟ್ರೀಯ ಉತ್ಪನ್ನದ ಶೇಕಡ ೫-೬ರಷ್ಟಾಗಬಹುದು. ಆದರೆ ದೊರಕಿರುವ ಪ್ರತಿಫಲ ಮಾತ್ರ ಕಡಿಮೆ. ಜನತೆಯ ಬಹುಭಾಗ ಇನ್ನೂ ವಿದ್ಯಾಭ್ಯಾಸ, ಆರೋಗ್ಯ ಭಾಗ್ಯಗಳನ್ನು ಸಾಕಷ್ಟು ಪಡೆಯಲು ಸಾಧ್ಯವಾಗಿಲ್ಲ. ಅದರಲ್ಲೂ ಗ್ರಾಮೀಣ ಪ್ರದೇಶಗಳಲ್ಲಿ ಶಾಲೆ, ಆಸ್ಪತ್ರೆ ಸೌಕರ್ಯಗಳ ಕೊರತೆ ವಿಪರೀತ ಮತ್ತು ಬಡವರಿಗೆ ನಿಲುಕದಷ್ಟು ದುಬಾರಿಯಾಗಿಯೇ ಇವೆ. ಈಗಿನ ಬಜೆಟ್‌ನಲ್ಲಿ ಈ ವಿಷಯಗಳಿಗೆ ತೆಗೆದಿಟ್ಟಿರುವ ಮೊಬಲಗಿನಿಂದ ಈ ಸೌಕರ್ಯಗಳು ಉತ್ತಮಗೊಳ್ಳುತ್ತೆಂದು ಭಾವಿಸುವುದು ಅಸಾಧ್ಯ.

ಕುಡಿಯುವ ನೀರು ಮತ್ತು ಗ್ರಾಮ ನೈರ್ಮಲ್ಯಗಳಿಗೂ ೨೦೦೬-೦೭ರ ಬಜೆಟ್‌ನಲ್ಲಿ ಒದಗಿಸಿರುವ ಮೊತ್ತ ರೂ. ೪,೬೮೦ ಕೋಟಿ ಮಾತ್ರ. ಇದರಿಂದ ಗ್ರಾಮೀಣ ಪ್ರದೇಶಗಳಲ್ಲಿ ಸುಮಾರು ೫೨,೨೭೦ ವಸತಿಗಳು, ಅಲ್ಲದೆ ಸುಮಾರು ೧೪೦,೦೦೦ ಶಾಲೆಗಳಿಗೂ ಶುದ್ಧವಾದ ಕುಡಿಯುವ ನೀರು ಮತ್ತು ಶೌಚಾಲಯಗಳನ್ನು ಒದಗಿಸಲು ಸಾಧ್ಯವಾಗುವುದೆಂಬ ಅಂದಾಜಿದೆ. ಹೆಚ್ಚಾಗಿ ಕೇಂದ್ರ ಸರ್ಕಾರ ನೀಡುವ ಹಣ ಈ ಅನುಕೂಲಗಳ ನಿರ್ಮಾಣಕ್ಕೆ ಖರ್ಚಾಗುವುದರಿಂದ ಅಲ್ಲಿಂದಾಚೆಗೆ ಅವುಗಳ ಸಂರಕ್ಷಣೆ ಮತ್ತು ಪೋಷಣೆಗಳ ಹೊಣೆ ರಾಜ್ಯ ಸರ್ಕಾರಗಳದ್ದು. ಅವರ ಅಂದಾಜು ಪತ್ರಗಳಲ್ಲಿ ಈ ಕೆಲಸಗಳಿಗೆ ಸಾಕಷ್ಟು ಸಿಬ್ಬಂದಿ ಮತ್ತು ಹಣ ದೊರಕದಿದ್ದರೆ ಕೇಂದ್ರ ಸರ್ಕಾರದ ಖರ್ಚಿನಿಂದಾಗುವ ಉಪಯೋಗ ಬಹುಕಾಲವಿರುವುದಿಲ್ಲ. ರಾಜ್ಯ ಸರ್ಕಾರಗಳ ಆಡಳಿತ ವರ್ಗದ ದಕ್ಷತೆ ಮತ್ತು ಪ್ರಾಮಾಣಿಕತೆಗಳು ಒಂದೇ ಸಮವಾಗಿಲ್ಲ. ಅದರಿಂದ ಜನತೆಗೆ ಆಗುವ ಪ್ರಯೋಜನಗಳಲ್ಲಿ ರಾಜ್ಯದಿಂದ ರಾಜ್ಯಕ್ಕೆ ವ್ಯತ್ಯಾಸಗಳಾಗುವುದು ಅನಿವಾರ್ಯ. ಈ ಅಸಮಾನತೆಗಳು ಈಗಲೇ ತೀವ್ರವಾಗಿವೆ; ಇವನ್ನು ನಿವಾರಿಸಲು ಶ್ರಮಿಸದಿದ್ದರೆ ಆಗುವ ಖರ್ಚುಗಳಿಂದ ಇವ್ಯಾವುವೂ ಕಡಿಮೆಯಾಗುವುದಿಲ್ಲ. ಹೆಚ್ಚು ಹೆಚ್ಚಾಗಿ ಹಣ ಒದಗಿಸುವುದರ ಜೊತೆ ಆಡಳಿತ ದೋಷಗಳನ್ನು ಹೋಗಲಾಡಿಸುವ ತಂತ್ರಗಳನ್ನು ಹೇಗೆ ಅನುಷ್ಠಾನಕ್ಕೆ ತರಬೇಕೆಂಬುದನ್ನು ಎಲ್ಲಾ ಸರ್ಕಾರಗಳೂ ಜೊತೆಗೂಡಿ ಯೋಚಿಸುವುದು ಅವಶ್ಯಕ. ಈ ಸಂದರ್ಭದಲ್ಲಿ ರಾಷ್ಟ್ರಾದ್ಯಂತ ಜಾರಿಗೆ ಬಂದಿರುವ ಪಂಚಾಯತಿ ರಾಜ್ಯಗಳನ್ನು ಹೇಗೆ ಬಲಪಡಿಸಬೇಕು, ಜನತೆಯ ಆಶೋತ್ತರಗಳಿಗೆ ಯಾವ ರೀತಿ ಸ್ಪಂದಿಸಬೇಕು, ಮತ್ತು ಅದಕ್ಕನುಗುಣವಾಗಿ ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳ ಆಡಳಿತ ವಿಧಿಗಳಲ್ಲಿ ಆಗಬೇಕಾದ ಮಾರ್ಪಾಟುಗಳೇನು ? ಇವನ್ನೆಲ್ಲಾ ಚಿಂತಿಸಬೇಕು. ಇದ್ಯಾವುದೂ

೮ನೇ ಪುಟಕ್ಕೆ






ಚಂದಾ ವಿವರಗಳು

ಬಿಡಿ ಸಂಚಿಕೆ ರೂ. ೧೨/-
ವಾರ್ಷಿಕ ಚಂದಾ ರೂ. ೧೨೫/-
ಮೂರು ವರ್ಷಕ್ಕೆ ರೂ. ೩೦೦/-

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




## ಅಪೂರ್ವ ಮಿಲನ

'ಹೊಸತು' ಜನವರಿ ವಿಶೇಷ ಸಂಚಿಕೆಯಲ್ಲಿ ಪ್ರಕಟವಾದ ಡಾ|| ರೊದ್ದಂ ನರಸಿಂಹ ಅವರೊಡನೆ ನಡೆದ ಸಂದರ್ಶನದ ವರದಿ ಓದಿದೆ. ಅದರ ಪ್ರಾರಂಭದಲ್ಲಿ ಡಾ|| ನರಸಿಂಹ ಅವರು ಆಚಾರ್ಯ ಪಾಠಶಾಲೆಯಲ್ಲಿ ತಮ್ಮ ಪ್ರೌಢಶಾಲಾ ವಿದ್ಯಾರ್ಥಿ ಜೀವನದ ಕೆಲವು ಅನುಭವಗಳನ್ನು ನೆನಪು ಮಾಡಿಕೊಂಡಿದ್ದಾರೆ. ಶಾಲೆಗೆ ಸಿ. ವಿ. ರಾಮನ್‌ರವರು ನೀಡಿದ ಭೇಟಿ, ಅವರ ಭಾಷಣ ನೆನಪು ಮಾಡಿಕೊಳ್ಳುತ್ತಾ ಅವರನ್ನು ಕರೆತಂದ ಕೆ. ವಿ. ಆರ್. ಎಂಬ ಶಿಕ್ಷಕರ ಬಗ್ಗೆ ಕೆಲವು ಸವಿಮಾತುಗಳನ್ನು ಆಡಿದ್ದಾರೆ. ಅದನ್ನು ಓದಿದಾಗ ನನಗಾದ ಸಂತೋಷ ಪದಗಳಿಗೆ ಮೀರಿದ್ದು, ಏಕೆಂದರೆ ನಾನೇ ಆ 'ಕೆ. ವಿ. ಆರ್.' ಈಗ ನಾನು ಮಾರುತಿ ವಿದ್ಯಾಕೇಂದ್ರ ಎಂಬ ಶಿಕ್ಷಣ ಸಂಸ್ಥೆ ನಡೆಸುತ್ತಿದ್ದೇನೆ. ದಿನಾಂಕ ೨೮-೦೨-೨೦೦೬ರಂದು ನಮ್ಮ ಶಾಲೆಗೆ ಬಂದು National Science Day Celebration ಅಂಗವಾಗಿ ಏರ್ಪಡಿಸಿದ ವಿಜ್ಞಾನ ಪ್ರದರ್ಶನವನ್ನು ಉದ್ಘಾಟಿಸಿ ವಿದ್ಯಾರ್ಥಿಗಳಿಗೆ ವಿಜ್ಞಾನದ ಸಂದೇಶ ಕೊಡಬೇಕೆಂದು ಪತ್ರ ಬರೆದೆ; ಅವರು ಕೂಡಲೇ ಒಪ್ಪಿ, ಬಂದು, ಸುಮಾರು ಮೂರುಗಂಟೆಗಳ ಕಾಲ ವಿಜ್ಞಾನ ಹಬ್ಬದಲ್ಲಿ ಪಾಲ್ಗೊಂಡರು. ೬೦ ವರ್ಷಗಳ ನಂತರ ನಡೆದ ಈ 'ಗುರು-ಶಿಷ್ಯ' ಸಮಾಗಮಕ್ಕೆ 'ಹೊಸತು' ಕಾರಣ! ಅದಕ್ಕಾಗಿ ಧನ್ಯವಾದಗಳು.

ತುಮಕೂರು **ಕೆ. ವೆಂಕಟರಾಮಯ್ಯ**

## ಅರವಿಂದಾಶ್ರಮ

ಪ್ರೊ|| ರಾಮಕೃಷ್ಣ ಭಟ್ಟಾಚಾರ್ಯರ ಲೇಖನ 'ಮಾಸ್ಕೋ ಬಾನಾಮ್ ಪಾಂಡಿಚೆರಿ' ಅನ್ನು ಆಸಕ್ತಿಯಿಂದ ಓದಿದೆ. ಆ ಶೀರ್ಷಿಕೆಯೆ ನನ್ನನ್ನು ಆಕರ್ಷಿಸಿತು. ಒಂದೆರಡು ಬಾರಿ ಓದಿದೆ. ಕೆಲವು ಭಾಗಗಳನ್ನು ಮತ್ತೆ ಮತ್ತೆ ಓದಿದೆ.

ಒಂದು ಕಡೆ '೧೯೩೩-೪೦ರ ಸುಮಾರಿನಲ್ಲಿ ಮೀರತ್ ಪಿತೂರಿ ಮೊಕದ್ದಮೆಯಲ್ಲಿ ಆಪಾದಿತರಾಗಿದ್ದ...' ಎಂಬ ಮಾತು ಬರುತ್ತದೆ. ಮೀರತ್ ಪಿತೂರಿ ೧೯೨೯-೩೦ರಲ್ಲಿ ನಡೆಯಿತೆಂಬುದು, ೧೯೨೯ರ ಮಾರ್ಚ್ ೨೦ರಂದು ಎಸ್. ಎ. ಡಾಂಗೆ ಮುಂತಾದ ೩೧ ಕಮ್ಯುನಿಸ್ಟ್ ಮುಖಂಡರನ್ನು ಕೈದುಮಾಡಿ ಮೀರತ್ ನ್ಯಾಯಾಲಯದಲ್ಲಿ ವಿಚಾರಣೆಗೆ ಗುರಿಪಡಿಸಿ, ೧೯೩೩ರಲ್ಲಿ ಕೆಲವರನ್ನು ಶಿಕ್ಷಿಸಿ ಗಲ್ಲಿಗೇರಿಸಿದ್ದು ಇತಿಹಾಸ. '೧೯೩೩-೪೦ರ ಸುಮಾರಿನಲ್ಲಿ ಮೀರತ್ ಪಿತೂರಿ ಮೊಕದ್ದಮೆ...' ಮುಗಿದ ದುರಂತ ಅಧ್ಯಾಯವಾಗಿ ಹೋಗಿತ್ತು. ಪ್ರೊ|| ರಾಮಕೃಷ್ಣ ಭಟ್ಟಾಚಾರ್ಯರು ಇತಿಹಾಸವನ್ನು ಗಮನಿಸಿಲ್ಲ, ಅಥವಾ ಗೊತ್ತಿಲ್ಲವೋ ಏನೋ!

ಈ ತಥ್ಯಾಂಶಗಳ ತಪ್ಪನ್ನು ಅಷ್ಟೇನೂ ಗಂಭೀರವಾಗಿ ಪರಿಗಣಿಸಬಾರದೆಂದು ಭಾವಿಸಿದರೂ ಆ ಲೇಖನದ ಅಸಲು ಆಶಯವೆ – ಅತ್ಯಂತ ದೋಷಪೂರಿತವಾಗಿದೆ ಎಂದು ವಿಷಾದದಿಂದ ಎತ್ತಿ ತೋರಿಸಬೇಕಾಗಿದೆ. ನಳಿನಿಕಾಂತ ಗುಪ್ತ, ದಿಲೀಪ್‌ಕುಮಾರ ರಾಯ್... ಅಂತಹ ಪ್ರತಿಭಾವಂತರು ಪ್ರಾರಂಭಿಸಿದ ಕಮ್ಯುನಿಸ್ಟ್ ವಿರೋಧಿ ಕಾರ್ಯಾಚರಣೆ ಪ್ರತಿಯಾಗಿ ಶಿವರಾಮ್ ಹೋರಾಡಿದ...'; 'ಪಾಂಡಿಚೆರಿವಾಲಾಗಳು ಹಳೆಯ ಕಾಲದ ಶುಷ್ಕ ಶೈಲಿಗೆ ಮರೆಹೋಗಿದ್ದಕಾಲ... ಸೋವಿಯತ್ ಒಕ್ಕೂಟದ ಪರ ಗಟ್ಟಿಯಾಗಿ ನಿಂತು




ಅಂತಹ ಕಮ್ಯುನಿಸ್ಟ್ ವಿರೋಧಿ ಬುದ್ಧಿಜೀವಿಗಳನ್ನು ತಮ್ಮ ಪ್ರಚಾರ ಮತ್ತು ಪ್ರತಿವಾದಗಳ ಮೂಲಕ ಬಗ್ಗುಬಡಿಯುವುದರಲ್ಲಿ ಯಶಸ್ವಿಯೂ ಆದರು...'

ಈ ಮಾತುಗಳಿಂದ ಪಾಂಡಿಚೇರಿಯ ಶ್ರೀ ಅರವಿಂದಾಶ್ರಮ ಕಮ್ಯುನಿಜಂ ಮತ್ತು ಸೋವಿಯತ್ ಯೂನಿಯನ್ ವಿರುದ್ಧ ಕಾರ್ಯಾಚರಣೆಯ ಕೇಂದ್ರವಾಗಿತ್ತು ಎಂಬುದು ಎದ್ದು ಕಾಣುತ್ತದೆ. ಶ್ರೀ ಅರವಿಂದರ ಜೀವನಚರಿತ್ರೆಯನ್ನು ಶ್ರೀ ಅರವಿಂದಾಶ್ರಮದ ಧ್ಯೇಯ ಧೋರಣೆಯನ್ನು ಬಲ್ಲ ಯಾರೂ ಮೇಲಿನ ಆರೋಪವನ್ನು ನಂಬಲಾರರು. ಸುಭಾಸಚಂದ್ರ ಬೋಸ್, ದಿಲೀಪಕುಮಾರ್ ರಾಯ್‌ರ ಅತ್ಯಂತ ಆಪ್ತ ಗೆಳೆಯರು. ಅವರ ರಾಜಕೀಯ ಒಲವು ನಿಲುವುಗಳು ಭಿನ್ನವಾಗಿದ್ದರೂ ಅವರಿಬ್ಬರಲ್ಲೂ ಇದ್ದ ಪ್ರೀತಿ, ವಿಶ್ವಾಸ, ಗೌರವ ಅನ್ಯಾದೃಶವಾದವು. ಅವರಿಬ್ಬರ ಪ್ರಕಟಿತ ಪತ್ರಗಳಲ್ಲಿ ಎಲ್ಲಿಯೂ ರಾಯ್ ಕಮ್ಯುನಿಜಂ ಮತ್ತು ಸೋವಿಯತ್ ಯೂನಿಯನ್‌ಅನ್ನು ವಿರೋಧಿಸಿದರೆಂದು ಪರೋಕ್ಷವಾಗಿಯೂ ಸೂಚಿಸಿಲ್ಲ. ಇನ್ನು ನಳಿನೀಕಾಂತ ಗುಪ್ತರು ಶ್ರೀ ಅರವಿಂದರೊಡನೆ ಅಲಿಪುರ ಬಾಂಬ್ ಮೊಕದ್ದಮೆಯಲ್ಲಿ ಆರೋಪಿ ಆಗಿದ್ದ ಅತ್ಯಂತ ಕಿರಿಯ ವಯಸ್ಸಿನ ಯುವಕ (ಹತ್ತು ವರ್ಷ). ಸೋವಿಯತ್ ರಷ್ಯಾ ಅಸ್ತಿತ್ವಕ್ಕೆ ಬಂದಾಗ (೧೯೧೭) ಶ್ರೀ ಅರವಿಂದಾಶ್ರಮದಲ್ಲಿ ಯಾವ ರಾಜಕೀಯ ಚಿಂತನೆ ಚಟುವಟಿಕೆ ನಡೆಯುವಂತೆಯೇ ಇರಲಿಲ್ಲ. ಆದ್ದರಿಂದ ನಳಿನೀಕಾಂತ ಗುಪ್ತ, ದಿಲೀಪ್‌ಕುಮಾರ್ ರಾಯ್... ಕಮ್ಯುನಿಸ್ಟ್ ವಿರೋಧಿ ಚಟುವಟಿಕೆಯಲ್ಲಿ ತೊಡಗಿದ್ದರೆಂಬುದು ಶುದ್ಧ ಊಹಾಪೋಹ! ನಳಿನಿಕಾಂತ ಗುಪ್ತರು ೧೯೨೬ರಿಂದ ಪಾಂಡಿಚೇರಿಯಲ್ಲಿದ್ದಾಗ ಬರೆದದ್ದನ್ನೆಲ್ಲ ಎಂಟು ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. ಅದರಲ್ಲಿ ಎಲ್ಲಿಯೂ ಕಮ್ಯುನಿಜಂ ಅಥವಾ ಸೋವಿಯತ್ ರಷ್ಯಾ ವಿರುದ್ಧವಾಗಿ ಒಂದು ವಾಕ್ಯವೂ ಸಿಕ್ಕಲಾರದು.

ಶ್ರೀ ಅರವಿಂದರಾಗಲಿ, ಶ್ರೀ ಅರವಿಂದಾಶ್ರಮದ ಆದ್ಯಪ್ರವರ್ತಕಿಯಾಗಿದ್ದ ಶ್ರೀಮಾತೆಯಾಗಲಿ ಕಮ್ಯುನಿಜಂ ಮತ್ತು ಸೋವಿಯತ್ ರಷ್ಯಾ ವಿರೋಧಿಗಳಾಗಿರಲಿಲ್ಲ. ಬ್ರಿಟಿಷ್ ಸರಕಾರ ಶ್ರೀ ಅರವಿಂದರನ್ನು 'the most dangerous man in India' ಎಂದು ೧೯೪೭ರವರೆಗೆ ಅವರ ಮೇಲೆ ಕೆಂಗಣ್ಣು ಇಟ್ಟಿತ್ತು. ಅವರ ಅಪಾರ ಬರಹದಲ್ಲಿ, ಸಂವಾದಗಳಲ್ಲಿ, ಪತ್ರವ್ಯವಹಾರದಲ್ಲಿ ಎಲ್ಲೆಲ್ಲಿಯೂ ಅವರು ಕಮ್ಯುನಿಜಂ ಮತ್ತು ಸೋವಿಯತ್ ಯೂನಿಯನ್ ವಿರೋಧಿ ಎಂಬ ಶಬ್ದವೆ ಇಲ್ಲ. ಇನ್ನು ಶ್ರೀ ಮಾತಾ ಒಂದು ಕಡೆ ಹೇಳುತ್ತಾರೆ: 'Thank God I was an atheist!' ಅವರ ಅಜ್ಜಿ ಮತ್ತು ತಾಯಿ ಮಾರ್ಕ್ಸ್-ಏಂಗೆಲ್ಸ್ ಬರಹದಿಂದ ಪ್ರಭಾವಿತರಾಗಿದ್ದ ಪಕ್ಕಾ ಮಾರ್ಕ್ಸ್‌ವಾದಿಗಳು! ಅಂದಿನ ರಾಜ ಮಹಾರಾಜರ ಮುಂದೆ ತಲೆಬಾಗಲು ನಿರಾಕರಿಸಿದ ಧೀಮಂತ ಮಹಿಳೆಯರು. ಅವರ ಈ ದಿಟ್ಟ ನಡತೆ ತಮ್ಮ ರಕ್ತದಲ್ಲಿ ಹರಿಯುತ್ತಿದೆ ಎಂದು ಶ್ರೀಮಾತೆ ಹೇಳಿದ್ದಾರೆ. ಇಂಥವರ ಆಶ್ರಮದಲ್ಲಿ ಕಮ್ಯುನಿಜಂ ವಿರುದ್ಧ ಪಿತೂರಿಗೆ ಆಶ್ರಯಕೊಟ್ಟರೆಂಬುದು ಕೇವಲ ಹಾಸ್ಯಾಸ್ಪದ; ಕುಚೋದ್ಯ! ಹಾಗೆ ಶಿವರಾಮ್ ಚಕ್ರವರ್ತಿ ಭಾವಿಸಿದ್ದರೆ ಅದು ಅವರ ಹಾಸ್ಯಸಾಹಿತ್ಯ ರಚನೆಯ ವಕ್ರನೋಟ!

ಇನ್ನೊಂದು ಮಾತು. ಶ್ರೀ ಅರವಿಂದಾಶ್ರಮ 'ಶುದ್ಧ' ಕಮ್ಯುನಿಜಂನ ಪ್ರಯೋಗಶಾಲೆ ಎಂಬುದು ಅಲ್ಲಿಗೆ ಹೋಗಿ ನೋಡಿ ಅನುಭವ ಪಡೆದವರಿಗೆ ವೇದ್ಯವಾಗುತ್ತವೆ! ಅಲ್ಲಿ ಜಾತಿ, ಮತ, ಪ್ರಾಂತ, ಪಂಥ, ಭಾಷೆ, ವರ್ಗ, ವರ್ಣಭೇದ ಕೊನೆಗೆ ಲಿಂಗಭೇದವೂ ಇಲ್ಲದ ಸರಿಸಮಾನತೆಯ 'ಮಾನವಕುಲ ತಾನೊಂದೆ ವಲಂ' ಎಂಬ ಪರಮ ಸತ್ಯವನ್ನು ಆಚರಿಸುವ ತಾಣ. ಆಶ್ರಮವಾಸಿಗಳು ಪಾಲಿಸಲೇಬೇಕಾದ ನಾಲ್ಕು ನಿಯಮಗಳೆಂದರೆ : (i) ರಾಜಕೀಯ ಚಟುವಟಿಕೆಯಲ್ಲಿ ತೊಡಗಬಾರದು, (ii) ಲೈಂಗಿಕ ಸಂಬಂಧ ಇರಬಾರದು, (iii) ಮದ್ಯಪಾನ ಮತ್ತು (iv) ಧೂಮಪಾನ ನಿಷಿದ್ಧ.

ರಾಜಕಾರಣದಲ್ಲಿಯೆ ಮುಳುಗೆದ್ದಿದ್ದ ಶ್ರೀ ಅರವಿಂದರು – ರಾಜಕಾರಣವನ್ನೇಕೆ ಕೈಬಿಟ್ಟರು? ಅದಕ್ಕೆ ಅವರೆ ಉತ್ತರ ನೀಡಿದ್ದಾರೆ. ''ರಾಜಕಾರಣ ಅಯೋಗ್ಯರ

ಕಟ್ಟಕಡೆಯ ಆಶ್ರಯಸ್ಥಾನ ಎಂಬ ಕಾರಣಕ್ಕಾಗಿ ನಾನು ರಾಜಕೀಯವನ್ನು ತ್ಯಜಿಸಲಿಲ್ಲ. ಆದರೆ ಬಂದೇ ಬರಲಿರುವ ಸ್ವಾತಂತ್ರ್ಯವನ್ನು ಹೇಗೆ ಉಪಯೋಗಿಸಬೇಕು ಎಂಬುದನ್ನು ರೂಪಿಸುವ ಕಾರ್ಯದಲ್ಲಿ ತೊಡಗಿದ್ದೇನೆ.'' ಈ ಮಾತು ಹೇಳಿದ್ದು ೧೯೧೭ – ಮತ್ತು ೧೯೩೮ರಲ್ಲಿ. ಸ್ವಾತಂತ್ರ್ಯ ಬಂದು ಅರವತ್ತು ವರ್ಷಗಳಾಗುತ್ತ ಬಂತು. ಬಂದ ಆ ಸ್ವಾತಂತ್ರ್ಯವನ್ನು ನಾವು ಏನು ಮಾಡಿದ್ದೇವೆ ? ಅದು ನಮ್ಮ ಕಣ್ಣೆದುರಿಗೇ ಇದೆ: ಹೀಗೆ ಆಗದಂತೆ ನೋಡಿಕೊಳ್ಳಲು ಒಳ್ಳೆಯ ಜನರನ್ನು ನಿರ್ಮಾಣ ಮಾಡಬೇಕೆಂಬುದು ಶ್ರೀ ಅರವಿಂದಾಶ್ರಮದ ಆಶಯ.

ಬೆಂಗಳೂರು **ಕೋ. ಚೆನ್ನಬಸಪ್ಪ**

### ಬರ್ಧನ್ ಸಂದರ್ಶನ

ಸಂವಾದ ಮತ್ತು ಸಂದರ್ಶನಗಳೆರಡೂ ಬೇರೆ ಬೇರೆಯಲ್ಲ, ಅವೆರಡೂ ಒಂದೇ ಎಂದು 'ಹೊಸತು'ವಿನ ಹೊಸಶೈಲಿ ತಿಳಿಹೇಳುತ್ತಿದೆ. ಲೆಕ್ಕಮಾಡಿದರೆ ಪ್ರಶ್ನೆ ಉಪಪ್ರಶ್ನೆಗಳ ಒಟ್ಟು ಸಂಖ್ಯೆ ೩೬. ಒಂದು ಪ್ರಶ್ನೆಯೊಳಗೆ ನಾಲ್ಕೈದು ಉಪಪ್ರಶ್ನೆ ಜೋಡಣೆ! ಈ ಎಲ್ಲಾ ಮ್ಯಾರಥಾನ್ ಪ್ರಶ್ನೆಗಳಿಗೆ ಸೂಕ್ತ ಉತ್ತರವನ್ನು ಸಂಕ್ಷಿಪ್ತವಾಗಿ ಹೇಳಿದರೂ ಅದೊಂದು ೧೫-೨೦ ಪುಟಗಳ ಕಿರುಹೊತ್ತಿಗೆಯೇ ಆಗುತ್ತದೆ. ಹೊಸತು ಬತ್ತಳಿಕೆಯಲ್ಲಿರ ಬಹುದಾದ ಪ್ರಶ್ನೆಗಳ ಸರಮಾಲೆಯನ್ನೇ ಪ್ರಯೋಗಿಸಿ ಪಡೆದ ಉತ್ತರವನ್ನು ಮಾತ್ರ ನಾಲ್ಕು ಪುಟಗಳಲ್ಲಿ ಪ್ರಕಟಿಸಿದ ಜಾಣ್ಮೆ ನೋಡಿ ಚಕಿತನಾದೆ. ನುರಿತ ಪತ್ರಕರ್ತನೊಬ್ಬ ಖ್ಯಾತವ್ಯಕ್ತಿಯೊಂದಿಗೆ ಓದುಗರಿಗಾಗಿ ನಡೆಸುವ ಪ್ರಶ್ನೋತ್ತರ ಸಂದರ್ಶನವಾಗುತ್ತದೆ. ಇದೇ ಕೆಲಸವನ್ನು ಚಿಂತಕರು, ವಿಮರ್ಶಕರು, ವಾಗ್ಮಿಗಳು ಮಾಡಿದರೆ ಅದೊಂದು ಸಂವಾದವಾಗುತ್ತದೆಂದು ನಾನಿಲ್ಲಿ ಗಮನಿಸಿದೆ. ಹೀಗೆ ಅವರವರೇ ಮಾಡಬೇಕಾದ ಕೆಲಸ ಅದಲು ಬದಲಾದರೆ ಆಭಾಸವಾಗುತ್ತದೆ. ಹಾಗೆಂದು ಬರ್ಧನ್‌ರವರ ಸಂದರ್ಶನದಲ್ಲಿ ಅಂತಹ ಆಭಾಸವೇನೂ ಆಗಿಲ್ಲ, ನಿಜ. ಆದರೆ ಅದು ಸರಾಗವಾಗಿ ಓದಿಸಿಕೊಂಡು ಹೋಗುವಂತಹ ಪತ್ರಿಕಾ ಸಂದರ್ಶನದಂತೆ ಇರಲಿಲ್ಲವೆಂಬುದೂ ನಿಜ. ಇದಕ್ಕೆ ಸಂದರ್ಶನಕ್ಕೊಳಪಟ್ಟ ಬರ್ಧನ್‌ರಂತೂ ಕಾರಣರಲ್ಲ. ಹಾಗಾದರೆ ಸಂದರ್ಶಿಸಿದವರು ಕಾರಣರೇ ? ಅಥವಾ ಬರೆದವರು ಕಾರಣರೇ ? ಈ ಎರಡನ್ನೂ ಅಲ್ಲ ಎನ್ನಲಾಗದು.

ಚಿಕ್ಕಮಗಳೂರು **ಪಿ. ವಿ. ಲೋಕೇಶ್**

### ಬಂಡಾಯ ಸಾಹಿತ್ಯ

ಚಳುವಳಿಗಳೇ ನಿಂತುಹೋದವು ಎನ್ನುವ ಸಂದರ್ಭದಲ್ಲಿ ಒಂದು ಚಳುವಳಿಯನ್ನು ವರ್ತಮಾನದಲ್ಲಿ ಹೇಗೆ ಮುಖಾಮುಖಿಯಾಗಿಸಬಹುದು ಎಂಬುದನ್ನು ಬರಗೂರು ರಾಮಚಂದ್ರಪ್ಪ 'ಬಂಡಾಯ ಸಾಹಿತ್ಯದ ಹಾದಿ' ಲೇಖನದಲ್ಲಿ ಚರ್ಚಿಸಿದ್ದಾರೆ. ಸಾಮಾಜಿಕ ಒತ್ತಡ ಹಾಗೂ ಸೃಷ್ಟಿಶೀಲ ಮನಃಸ್ಥಿತಿಗಳು ಅಭಿವ್ಯಕ್ತಿಗಾಗಿ ಹಾತೊರೆಯುತ್ತಿರುತ್ತವೆ. ಅಡಿಗರು ಒಂದು ಕಡೆ ಹೇಳುತ್ತಾರೆ ''ಕಾವ್ಯ ಪರಂಪರೆಯಲ್ಲಿರುವ ಕೊರತೆಯನ್ನು ತುಂಬಲು ಸೃಷ್ಟಿಯಾಗುವ ಹೊಸಕಾವ್ಯ ತನ್ನದೇ ಆದ ಶಕ್ತಿಯನ್ನೂ ಕೊರತೆಗಳನ್ನೂ ಹೊಂದಿರುತ್ತದೆ. ಈ ರೀತಿಯಿಂದಲೇ ಕಾವ್ಯ ಪರಂಪರೆ ಮುಂದುವರೆಯುತ್ತದೆ. ಹೊಸಹುಟ್ಟು ಬರುವಾಗಲಂತೂ ಕಾವ್ಯ ಅಂತರ್‌ಪಿಶಾಚಿಯಾಗಿ ಬರುವುದಿಲ್ಲ'' ಬರಗೂರರು ಪ್ರಸ್ತಾಪಿಸಿದ 'ನಕಾರಾತ್ಮಕ ಪ್ರತಿರೋಧ'ವನ್ನು ನವ್ಯದವರೂ ಎದುರಿಸಿದ್ದರು ಎನ್ನುವುದಕ್ಕೆ ಅಡಿಗರ ಮೇಲಿನ ಮಾತೇ ಸಾಕ್ಷಿ. ಇಲ್ಲಿ ಬರಗೂರರ ಮಾತುಗಳು ಅಡಿಗರ ಮಾತಿನ ಮುಂದುವರೆದ ಭಾಗಗಳಂತೆ ಭಾಸವಾಗುತ್ತವೆ.

ಇವತ್ತು ಜಾತೀಯತೆ, ಕೋಮುವಾದ, ಅಧಿಕಾರದಾಹ, ಎಲ್ಲವನ್ನೂ ನುಂಗಿ ನೀರು ಕುಡಿಯುತ್ತಿವೆ. ಇದು ಒಂದು ರೀತಿಯಲ್ಲಿ ನಮ್ಮ ವರ್ತಮಾನದ ಎಲ್ಲ ಚಳುವಳಿಗಳ ನಿರ್ಣಾಯಕ ಘಟ್ಟ. ಇವತ್ತು ಸಾಹಿತ್ಯ ಚಳುವಳಿಗಳು ಮಾತನಾಡದೇ ಹೋದರೆ ಮುಂದೆಂದೂ ಅವು ಮಾತನಾಡದೇ ಇರುವಂಥ ಸ್ಥಿತಿಯನ್ನು ಜಾಗತೀಕರಣ ತಂದಿಟ್ಟಿದೆ. ಇಂಥ ಪರಿಸ್ಥಿತಿ ಎದುರಿಸಲು ಪ್ರತಿಭಟನೆ, ಹರತಾಳಗಳು, ನಡೆಯುತ್ತಿದ್ದರೂ ಅವುಗಳನ್ನೂ ಕೂಡ ರಾಜಕಾರಣದ ಹದ್ದಿನಕಣ್ಣು ಗಮನಿಸಿ ತನ್ನ ತೆಕ್ಕೆಯಲ್ಲಿ ತೆಗೆದುಕೊಂಡುಬಿಡುತ್ತದೆ. ಈ ಸಂದರ್ಭದಲ್ಲಿ ಅಕ್ಷರಗಳು ಚಳುವಳಿಗಳು ಜೊತೆಜೊತೆಯಾಗಿಯೇ ಹೋಗಬೇಕಾದ ಅನಿವಾರ್ಯತೆ ಹಿಂದೆಂದಿಗಿಂತಲೂ ಇಂದು ಅಗತ್ಯವಾಗಿದೆ.

ಬೆಂಗಳೂರು **ಬಸವರಾಜ ಹೂಗಾರ**



### ಚಳುವಳಿಗಳ ಇರಾದೆ

ಇಂದು ಚಳುವಳಿ ಮುಷ್ಕರಗಳೆಂದರೆ, ವ್ಯಕ್ತಿ-ಸಮೂಹದ ಪ್ರತಿಷ್ಠೆಯ ಪರಾಕಾಷ್ಠೆಗಳಾಗಿ ತಮ್ಮ ತಮ್ಮ ತೆವಲುಗಳಿಗೆ ಅನುಗುಣವಾಗಿ ನಾಡಿನ ಸ್ವಾಸ್ಥ್ಯ ಕೆಡಿಸುವ ಲಾಭದಾಯಕ ದಂಧೆಗಳಾಗಿ ಮಾರ್ಪಟ್ಟಿರುವುದನ್ನು ನಾವಿಂದು ಮನಗಂಡಿದ್ದೇವೆ. ಇಂಥ ಪ್ರತಿಕೂಲ ಪರಿಸರದ ಮಧ್ಯೆ ಇನ್ನೂ ಅಲ್ಲೊಬ್ಬ ಇಲ್ಲೊಬ್ಬ ಮಹನೀಯರು ತಮ್ಮ ಆರೋಗ್ಯಪೂರ್ಣ ಸವಿನೆನಪುಗಳ ಅಧ್ಯಾಯಗಳಾಗಿ ಪರಿಣಮಿಸುತ್ತಾರೆ. ಅಂತಹವರ ಪೈಕಿ ಸಿ. ಎಚ್. ಜಾಕಬ್ ಲೋಬೊ ಸಹ ಪ್ರಮುಖರು. ಶ್ರೀಯುತರು ತಮ್ಮ ಹಳೇ ಸವಿನೆನಪುಗಳನ್ನು ತುಸು ಸಂಭ್ರಮದಿಂದ ಮೆಲುಕು ಹಾಕುತ್ತ, ೧೯೪೭ರ ಮೈಸೂರು ಚಲೋ ಚಳುವಳಿಯನ್ನು ಇಂದಿನ ಸೋಗಲಾಡಿತನದ ಚಳುವಳಿಗಾರರ ಮನದ ಪರದೆಯ ಮೇಲೆ ಬಿತ್ತರಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ. ಇಂದಿನ ಚಳುವಳಿಗಾರರು ಅಂದಿನ ಚಳುವಳಿಗಾರರ ಧ್ಯೇಯೋದ್ದೇಶಗಳನ್ನು ಮನವರಿಕೆ ಮಾಡಿಕೊಂಡು ನಾಡುಕಟ್ಟುವ ನಿಟ್ಟಿನಲ್ಲಿ ಸಾಗಬೇಕಾಗಿದೆ, ಎಂಬ ಸಂದೇಶವನ್ನು ತಮ್ಮ ಗಂಭೀರ ಲೇಖನದ ಮೂಲಕ ಇಂದಿನ ಪೀಳಿಗೆಗೆ ಸಂದೇಶ ರವಾನಿಸುತ್ತಿರುವ ಶ್ರೀ ಸಿ. ಎಚ್. ಜಾಕಬ್ ಲೋಬೊರವರು ನಮ್ಮ ನಡುವೆ ಸದಾ ಕಂಗೊಳಿಸಲಿ ಎಂದು ಬಯಸುತ್ತೇನೆ. ಈ ಲೇಖನ ಪ್ರಕಟಿಸಿದ ಸಂಪಾದಕರಿಗೆ ನನ್ನ ನಮನಗಳು.

ತುಮಕೂರು **ಹರಿಯಬ್ಬೆ ರಂಗಸ್ವಾಮಿ**

ದೇವದೂತರ ಅವತಾರಗಳ ಬಗ್ಗೆ ಮೂಡಿಬಂದ 'ಈ ತಿಂಗಳು' ತುಂಬಾ ಅರ್ಥಪೂರ್ಣವಾಗಿತ್ತು. ಇದರ ಜೊತೆಯಲ್ಲಿಯೇ ವೈರಾಗ್ಯಮೂರ್ತಿಗೆ ಮಾಡಿದ ಕೇಸರಿ ನೀರಿನ ಪ್ರಾಶನ ಕುರಿತಂತೆ ಮನಮೋಹಕ ರೋಮಾಂಚನ ಬರಹ ಇದಾಗಿತ್ತು. ಖಂಡಿತಾ ಅಂತಹವರಿಗೆ ಧಿಕ್ಕಾರವಿರಲಿ. 'ಕಿವಿಗೊಡು' ಲಲಿತ ಪ್ರಬಂಧದಲ್ಲಿ ಹಲವಾರು ಶಿಕ್ಷಕರ ಅನುಭವವನ್ನು ತಿಳಿದಂತೆ ಆಯಿತು. ಹಾಸ್ಯದಿಂದ ಕೂಡಿದ್ದರೂ ಸಹ ಅನುಭವದ ಅರ್ಥವಿದೆ. 'ಸ್ವಗತ'ದಲ್ಲಿ ಮೂಡಿಬಂದ ರೇಖಾಚಿತ್ರ ಬುದ್ಧ, ಗಾಂಧಿ, ಬಸವರನ್ನೊಳಗೊಂಡು ಆಶ್ಚರ್ಯಮೂಡಿಸುವಂತಿತ್ತು. ಕೊಡವ ಸಂಸ್ಕೃತಿಯ ವೈಶಿಷ್ಟ್ಯ ನೋಡಿದ್ದರೂ ಸಹ ಓದಿದಾಗ ಎಲ್ಲಾ ತಿಳಿದಂತೆ ಆಯಿತು. ಹಂದಿ ಸಾಕಣೆಯ ವೆಂಕಟಯ್ಯರವರ ಅನುಭವವನ್ನು ಓದುತ್ತಾ ಕಣ್ಮುಂದೆಯೇ ಇರುವಂತೆ ಭಾಸವಾಯಿತು. 'ಎಲ್ಲಾ ಬಿಟ್ಟು' ಕವನ ತುಂಬಾ ಅರ್ಥಗರ್ಭಿತವಾಗಿ ಜೀವನವೇ ಬೇಡ ಎನ್ನುವಂತಿತ್ತು. ಸಂಗೀತದ ಸತ್ಯವತಿಯವರು ನಿಜವಾಗಿಯೂ ಗ್ರೇಟ್ ! ಭಾಷೆ ಕಲಿತವರ ಸ್ವತ್ತು ತಿಳಿವು ತಿಳಿಯಬೇಕಾದ, ಅರಿಯಬೇಕಾದ ಸಂಗತಿ. ನಮ್ಮ ನೆಚ್ಚಿನ ಹೊಸತು ಪ್ರತಿ ತಿಂಗಳು ಕಾಯುವಂತೆ ಮಾಡುತ್ತದೆ. ಆ ಸುಂದರ ಚಿತ್ರಗಳು ಮುದ್ದಾದ ತಪ್ಪಿಲ್ಲದ ಅಕ್ಷರಗಳು ಮುತ್ತುಕೊಡುವಂತೆ ಮಾಡುತ್ತದೆ. ನೂರ್ಕಾಲ ಬಾಳಲಿ ಈ ನನ್ನ ನೆಚ್ಚಿನ 'ಹೊಸತು'.

ವಿಠಲಾಪುರ **ಆ. ಮೃತ್ಯುಂಜಯ**

*೫ನೇ ಪುಟದಿಂದ.. (ಸಂಪಾದಕೀಯ)*

ನಡೆಯುವ ಸೂಚನೆಗಳು ಕಾಣುತ್ತಿಲ್ಲವಾದುದರಿಂದ ಭಾರತ ನಿರ್ಮಾಣದಲ್ಲಿ ಎಣಿಸಿರುವಷ್ಟು ಪ್ರಯೋಜನೆ ಆಗಲಾರದೆಂಬ ಶಂಕೆ ಶ್ರೀ ಚಿದಂಬರಂರವರಿಗೂ ಇದೆ.

ರಾಜ್ಯ ಸರ್ಕಾರಗಳಿಗೆ ವಿತ್ತೀಯ ಆಯೋಗಗಳ ಸಲಹೆಯಂತೆ ಇಲ್ಲಿಯವರೆಗೆ ಕೇಂದ್ರ ಸರ್ಕಾರದ ಕೆಲವು ತೆರಿಗೆಗಳ ಜಮಾವಣೆಯಲ್ಲಿ ಶೇಕಡಾ ೨೯ರಷ್ಟು ದೊರಕುತ್ತಿತ್ತು. ಈಗ ಡಾ|| ರಂಗರಾಜನ್‌ರವರ ಅಧ್ಯಕ್ಷತೆಯ ವಿತ್ತೀಯ ಆಯೋಗ ಅದನ್ನು ಶೇಕಡ ೩೧ಕ್ಕೆ ಏರಿಸಿದೆ. ಅದರಿಂದ ೨೦೦೫-೦೬ರಲ್ಲಿ ದೊರಕಿದ ರೂ. ೯೪,೪೦೦ ಕೋಟಿ ವರ್ಗಾವಣೆಯು ಬರುವ ವರ್ಷದಲ್ಲಿ ರೂ. ೧೧೩,೪೪೮ ಕೋಟಿಗಳಾಗುವ ನಿರೀಕ್ಷೆ ಇದೆ. ಇದುವರೆಗೆ ಹೀಗೆ ಆಗಿರುವ ವರ್ಗಾವಣೆಗಳನ್ನು ರಾಜ್ಯ ಸರ್ಕಾರಗಳು ಸರಿಯಾಗಿ ವಿನಿಯೋಗಿಸದೆ ಅವರಲ್ಲಿ ದೊಡ್ಡ ಪ್ರಮಾಣದ ಹಣ ಶೇಖರಣೆಯಾಗಿರುವುದಾಗಿ ಶ್ರೀ ಚಿದಂಬರಂರವರು ಆಪಾದಿಸಿದ್ದಾರೆ. ಇನ್ನು ಮುಂದೆ ಹಾಗಾಗದಂತೆ ನೋಡಿಕೊಳ್ಳಲು ಸೂಕ್ತಕ್ರಮಗಳನ್ನು ನಿರ್ಧರಿಸಲು ಮಾರ್ಚ್ ೨೩ರಂದು ರಾಜ್ಯ ಸರ್ಕಾರಗಳ ಸಭೆ ಏರ್ಪಡಿಸಿದ್ದರು. ಅದರ ಹಿಂದಿನ ದಿನ ಬ್ಯಾಂಕುಗಳ ಅಧ್ಯಕ್ಷರ ಸಭೆಯನ್ನೂ ನಡೆಸುವುದಾಗಿ ತಿಳಿಸಿದ್ದರು. ಇವೆರಡು ಸಭೆಗಳ ಉದ್ದೇಶ ಒಂದೇ : ಕೃಷಿಕ್ಷೇತ್ರದ ಪ್ರಗತಿ ಮತ್ತು ಭಾರತ ನಿರ್ಮಾಣಕ್ಕೆ ಬರುವ ವರ್ಷಗಳಲ್ಲಿ ನೀಡಬೇಕೆಂದಿರುವ ಸಾಲ ಅಥವಾ ಅನುದಾನಗಳು ಸಕಾಲದಲ್ಲಿ ಮತ್ತು ಪರಿಣಾಮಕಾರಿಯಾಗಿ ಉಪಯೋಗಿಸಲು ಬ್ಯಾಂಕುಗಳ ಅಧಿಕಾರಿಗಳು ಮತ್ತು ರಾಜ್ಯದ ಮುಖ್ಯ ಮಂತ್ರಿಗಳನ್ನು ಒತ್ತಾಯಿಸಲು. ಉದ್ದೇಶಿಸಿರುವ ಹಣದಲ್ಲಿ ಆರ್ಥಿಕ ವರ್ಷದ ಮೊದಲ ಒಂಭತ್ತು ತಿಂಗಳಲ್ಲಿ ಕನಿಷ್ಠ ಪಕ್ಷ ಶೇಕಡ ೬೬ರಷ್ಟನ್ನು ಪರಿಣಾಮಕಾರಿಯಾಗಿ ಬಳಸದಿರುವ ಮಂತ್ರಾಲಯಗಳ ಮೇಲೆ ದಂಡ ವಿಧಿಸುವುದಾಗಿ ವಿತ್ತ ಮಂತ್ರಿಗಳು ಕೆಲವು ದಿನಗಳ ಕೆಳಗೆ ಹೇಳಿದ್ದಾರೆ. ಇದರಿಂದ ರಾಜ್ಯ ಸರ್ಕಾರ ಮತ್ತು ಬ್ಯಾಂಕ್ ಅಧಿಕಾರಿಗಳು ಎಷ್ಟರಮಟ್ಟಿಗೆ ಪ್ರಭಾವಿತರಾಗುವರೆಂದು ನೋಡಬೇಕು.

ಒಟ್ಟಾರೆ ಪ್ರಧಾನಿ ಮನಮೋಹನ ಸಿಂಗರಿಂದ ಹಿಡಿದು ಅವರ ಮಂತ್ರಿಗಳೂ, ಯೋಜನಾ ಆಯೋಗದ ಉಪಾಧ್ಯಕ್ಷರೂ ಮತ್ತು ಇತರ ಸಂಬಂಧಪಟ್ಟ ಅಧಿಕಾರಿಗಳೂ ಅತ್ಯವಶ್ಯಕವಾದ ಕೃಷಿ ಮತ್ತು ಭಾರತ ನಿರ್ಮಾಣದ ಕಾರ್ಯಗಳನ್ನು ಮುಂದುವರೆಸಲು ಹಣದ ಅಭಾವವಾಗದಂತೆ ನೋಡಿಕೊಳ್ಳುವ ಭರವಸೆ ಕೊಟ್ಟಿದ್ದಾರೆ. ಆಗಬೇಕಾಗಿರುವ ಕೆಲಸಗಳನ್ನು ಸಮರ್ಪಕವಾಗಿ ರಾಜ್ಯ ಸರ್ಕಾರಗಳು ನಡೆಸುತ್ತಿದ್ದಾವೆಯೇ ಇಲ್ಲವೇ ಎಂದು ಪ್ರತಿ ಆರು ತಿಂಗಳಿಗೊಮ್ಮೆ ಪರಿಶೀಲಿಸುವ ಏರ್ಪಾಟಿದೆ. ಮೇಲೆ ಹೇಳಿರುವಂತೆ ಕೃಷಿ, ವಿದ್ಯಾಭ್ಯಾಸ, ಆರೋಗ್ಯ ಮತ್ತು ನೈರ್ಮಲ್ಯ, ಕುಡಿಯುವ ನೀರಿನ ಸರಬರಾಜು, ಮೂಲ ಸೌಕರ್ಯಗಳ ಸುಧಾರಣೆ, ಕೆರೆ ಸರೋವರಗಳ ಪುನರುಜ್ಜೀವನ – ಇನ್ನೂ ಅನೇಕ ಜನೋಪಯೋಗಿ ಕಾರ್ಯಕ್ರಮಗಳ ಸಫಲತೆ ರಾಜ್ಯಗಳ ರಾಜಕೀಯ ಪಕ್ಷಗಳೂ, ಆಡಳಿತ ವರ್ಗದವರೂ ತೋರುವ ಆಸಕ್ತಿ ಮತ್ತು ದಕ್ಷತೆಗಳನ್ನು ಅವಲಂಬಿಸಿದೆ. ಇದನ್ನು ಎಷ್ಟು ಒತ್ತಿ ಹೇಳಿದರೂ ಸಾಲದು.

**ಗ್ರಾಮೀಣ ಉದ್ಯೋಗ ಯೋಜನೆ**

ಭಾರತ ನಿರ್ಮಾಣದಲ್ಲಿ ಸೇರಿರುವ ಕಾರ್ಯಕ್ರಮಗಳಲ್ಲಿ ಗ್ರಾಮೀಣ ಪ್ರದೇಶದಲ್ಲಿ ಉದ್ಯೋಗಾವಕಾಶಗಳನ್ನು ಕಲ್ಪಿಸುವ ಯೋಜನೆಯೂ ಸೇರಿದೆ. ಹೆಚ್ಚಾಗಿ ಗ್ರಾಮಸ್ಥರಿಗೆ ಬೇಕಾಗುವ ನೀರಾವರಿ ಸೌಕರ್ಯ, ರಸ್ತೆಗಳು ಮತ್ತು ಶಾಲೆ ಇತ್ಯಾದಿಗಳಿಗೆ ಬೇಕಾಗುವ ಸಾರ್ವಜನಿಕ ಕಟ್ಟಡಗಳು ಮುಂತಾದುವುಗಳ ನಿರ್ಮಾಣ ಕಾರ್ಯಗಳಿಗೆ ಬೇಕಾಗುವ ಕೆಲಸಗಾರರಿಗೆ ಉದ್ಯೋಗ ಕಲ್ಪಿಸುವ ಆಕಾಂಕ್ಷೆ ಈ ಯೋಜನೆಯದು. ಇದರಡಿ ಬರುವ ಕಾರ್ಯಗಳಲ್ಲಿ ಕೆಲಸ ಮಾಡಲು ಇಚ್ಛಿಸುವವರಿಗೆಲ್ಲಾ ವರ್ಷದಲ್ಲಿ ಒಂದು ನೂರು ದಿನ ಉದ್ಯೋಗವನ್ನು ನೀಡಲು ಸರ್ಕಾರ ಬದ್ಧವಾಗಿದೆ. ದಿನಂಪ್ರತಿ ಕನಿಷ್ಠಪಕ್ಷ ರೂ. ೬೦ರಂತೆ ವೇತನ ನೀಡಲು ಏರ್ಪಾಟಿದೆ. ನಿರ್ಮಾಣ ಕಾರ್ಯಗಳಿಗೆ ಬೇಕಾಗುವ ಸಾಮಾನು ಸರಂಜಾಮುಗಳಿಗೆ ಪ್ರತ್ಯೇಕ ಹಣ ನಿಗದಿಪಡಿಸಿರುವುದರಿಂದ ಗ್ರಾಮೀಣ ಉದ್ಯೋಗ ಯೋಜನೆಗೆ ನೀಡುವ ಹಣ ವೇತನಕ್ಕೆ ಮಾತ್ರ. ಪ್ರಾರಂಭದಲ್ಲಿ ಈ ಯೋಜನೆ ದೇಶಾದ್ಯಂತ ೨೦೦ ಜಿಲ್ಲೆಗಳಿಗೆ ಅನ್ವಯಿಸುತ್ತದೆ. ೨೦೦೬-೦೭ರ ಬಜೆಟ್‌ನಲ್ಲಿ ಶ್ರೀ ಚಿದಂಬರಂರವರು ರೂ. ೧೪,೩೦೦ ಕೋಟಿ ಈ ಯೋಜನೆಗೆ ತೆಗೆದಿಟ್ಟಿದ್ದಾರೆ. ಅವಶ್ಯಬಿದ್ದರೆ ಇನ್ನೂ ಹೆಚ್ಚು ಖರ್ಚಿಗೆ ಅನುಕೂಲ ಮಾಡಿಕೊಡುವ ಭರವಸೆ ಕೊಡುವುದಲ್ಲದೆ ಬರುವ ಮೂರುವರ್ಷಗಳಲ್ಲಿ ಇದನ್ನು ಎಲ್ಲಾ ಜಿಲ್ಲೆಗಳಿಗೂ ವಿಸ್ತರಿಸುವ ಮಾತುಕೊಟ್ಟಿದ್ದಾರೆ.

ಉದ್ಯೋಗ ಯೋಜನೆಯ ಉದ್ದೇಶಗಳೆಲ್ಲಾ ಒಪ್ಪತಕ್ಕಂತಹವೇ ಆಗಿವೆ. ಗ್ರಾಮೀಣ ಪ್ರದೇಶದಲ್ಲಿರುವ ಕುಟುಂಬಗಳಲ್ಲಿ ಹದಿನೆಂಟು ವರ್ಷಕ್ಕೆ ಮೇಲ್ಪಟ್ಟ ಯಾರಾಗಲಿ ಕೆಲಸದಲ್ಲಿ ಭಾಗಿಗಳಾಗಬಹುದು. ದಿನಕೂಲಿಗೆ ಬರುವವರೆಲ್ಲಾ ಸಾಮಾನ್ಯ ಕಾರ್ಮಿಕರಾದುದರಿಂದ ಪ್ರತಿದಿನ ಏಳೆಂಟು ಗಂಟೆಗಳು ಶ್ರಮಿಸಲು ಶಕ್ತರಾಗಿರಬೇಕು. ನಿವಾಸದಿಂದ ಅನತಿ ದೂರದಲ್ಲಿ ಕೆಲಸ ಒದಗಿಸಬೇಕಾಗಿರುವುದರಿಂದ ಕೈಗೆತ್ತಿಕೊಳ್ಳುವ ಕಾರ್ಯಗಳೆಲ್ಲಾ ಗ್ರಾಮಗಳ ಸೌಕರ್ಯ ಅಥವಾ ವ್ಯವಸಾಯಕ್ಕೆ ಸಂಬಂಧಪಟ್ಟಂತಹವು. ಕಲ್ಪಿಸುವ ಉದ್ಯೋಗಾವಕಾಶಗಳಲ್ಲಿ ಕನಿಷ್ಠ ಮೂರರಲ್ಲಿ ಒಂದು ಭಾಗದಷ್ಟು ಮಹಿಳೆಯರಿಗೆ ನೀಡಬೇಕೆಂಬ ಸೂಚನೆಯಿದೆ. ಮೇಲಾಗಿ ಯಾವ ಕಾರ್ಯಗಳಿಗೆ ಆದ್ಯತೆ ಕೊಡಬೇಕೆಂದು ಸಂಬಂಧಿಸಿದ ಗ್ರಾಮ ಪಂಚಾಯತಿಗಳು ನಿರ್ಧರಿಸಬೇಕು. ವ್ಯವಸಾಯಕ್ಕೆ ಅನುಕೂಲವಾಗುವ ಕಾರ್ಯಗಳಲ್ಲದೆ ನೀರು ಸರಬರಾಜು, ಚರಂಡಿ ವ್ಯವಸ್ಥೆ, ಸಣ್ಣಪುಟ್ಟ ಕೈಗಾರಿಕೆಗಳ ಪ್ರದೇಶ, ಮಾರುಕಟ್ಟೆಗಳು ಮೊದಲಾದವನ್ನೂ ಪಂಚಾಯತಿಗಳು ಕೈಗೆತ್ತಿಕೊಳ್ಳಬಹುದು. ನಿಷ್ಕರ್ಷಿಸಿರುವ ವೇತನವೂ ಒಟ್ಟಿನಲ್ಲಿ ಸೂಕ್ತವಾಗಿದೆ (ಈ ಯೋಜನೆಯಡಿಯ ಉದ್ಯೋಗದಿಂದ ದೊರಕುವ ವೇತನವಲ್ಲದೆ ಉಳಿದ ಸಮಯದಲ್ಲಿ ವ್ಯವಸಾಯ ಅಥವಾ ಗ್ರಾಮೀಣ ಕೈಗಾರಿಕೆಗಳಿಗೆ ಸಂಬಂಧಿಸಿದ ಕೆಲಸಗಳಲ್ಲಿ ಪ್ರತಿ ಕುಟುಂಬದ ಕೆಲವರಾದರೂ ತೊಡಗಿರುವರೆಂಬ ಆಧಾರದ ಮೇಲೆ ಈ ಯೋಜನೆ ರೂಪಗೊಂಡಿದೆ.) ಎಲ್ಲಕ್ಕಿಂತ ಹೆಚ್ಚಾಗಿ ಈ ಯೋಜನೆಯಿಂದ ಗ್ರಾಮೀಣ ಕುಟುಂಬಗಳ ಜೀವನ ಉತ್ತಮಗೊಳ್ಳುವುದೆಂಬ ಆಸೆಯಿದೆ. ದೇಶದ ಬಡತನ ನಿವಾರಣೆಗೆ ಇದರಿಂದ ಸಹಾಯವಾಗುವುದೆಂಬ ನಿರೀಕ್ಷಣೆ ಸರ್ಕಾರದ್ದು.

ಬಡತನ ನಿವಾರಣೆಗೆ ದೇಶಾದ್ಯಂತ ಉದ್ಯೋಗಾವಕಾಶಗಳನ್ನು ಹೆಚ್ಚಿಸಬೇಕಾದುದು ಅತ್ಯವಶ್ಯಕವೆನ್ನುವುದರಲ್ಲಿ ಎರಡು ಮಾತಿಲ್ಲ. ಅದರಲ್ಲೂ ಗ್ರಾಮೀಣ ಪ್ರದೇಶಗಳಲ್ಲಿ ಕೇವಲ ವ್ಯವಸಾಯದಿಂದ ಸಾಕಷ್ಟು ಉದ್ಯೋಗಗಳು ಹೆಚ್ಚುವುದು ಅಪರೂಪ. ಅಲ್ಲದೆ ಗ್ರಾಮೋದ್ಯೋಗಗಳು ಲಾಭದಾಯಕಗಳಾಗದೆ ಕ್ಷೀಣಿಸುತ್ತಿವೆ. ಜಮೀನಿನ ಉತ್ಪನ್ನದಿಂದ ಸಣ್ಣಪುಟ್ಟ ರೈತರ ಜೀವನ ಕಷ್ಟಕರವಾಗಿ ಅನೇಕರು ನಗರ ಪ್ರದೇಶಗಳಿಗೆ ವಲಸೆ ಹೋಗುವುದು ಎಲ್ಲಾ ರಾಜ್ಯಗಳಲ್ಲೂ ಸಾಮಾನ್ಯ. ಇದರಿಂದ ನಗರ ಪ್ರದೇಶಗಳಲ್ಲಿ ಬಡವರ ಸಂಖ್ಯೆ ಹೆಚ್ಚುತ್ತಿರುವುದಲ್ಲದೆ ಅಲ್ಲಿಯ ಜೀವನ ಮತ್ತು ಸಾಮಾಜಿಕ ಸ್ಥಿತಿಗಳು ಹದಗೆಡುತ್ತಿವೆ. ಗ್ರಾಮೀಣ ಉದ್ಯೋಗದ ಯೋಜನೆಯಿಂದ ಇವೆಲ್ಲವನ್ನೂ ನಿವಾರಿಸಲು ಸಾಧ್ಯವೇ ಇಲ್ಲವೇ ಎಂಬುದನ್ನು ಕಾದುನೋಡಬೇಕು.

ಈ ಯೋಜನೆ ಜಯಪ್ರದವಾಗಬೇಕಾದರೆ ಈಗ ಹಮ್ಮಿಕೊಂಡಿರುವ ಕಾರ್ಯವಿಧಾನಗಳು ಸೂಕ್ತವೇ ಇಲ್ಲವೇ ಎಂದು ತಿಳಿಯಲು ಕೆಲಕಾಲ ಬೇಕು. ದೇಶದ ಗ್ರಾಮೀಣ ಪ್ರದೇಶಗಳಲ್ಲೆಲ್ಲಾ ಬಡ ಕುಟುಂಬಗಳಿರುವುದರಿಂದ ಈ ಯೋಜನೆಯನ್ನು ಎಲ್ಲಾ ಜಿಲ್ಲೆಗಳಿಗೂ ಆದಷ್ಟು ಬೇಗ ವಿಸ್ತರಿಸುವುದಾಗಬೇಕು. ಅಲ್ಲದೆ ಗ್ರಾಮ ಪಂಚಾಯತಿಗಳು ಮತ್ತು ಗ್ರಾಮಸಭೆಗಳು ಈ ಕಾರ್ಯದಲ್ಲಿ ಪ್ರಧಾನ ಪಾತ್ರ ವಹಿಸುವಂತಾಗಬೇಕು. ಯಾವ ರಾಜ್ಯ ಸರ್ಕಾರವೂ ಗ್ರಾಮ ಪಂಚಾಯತಿಗಳಿಗೆ ವಹಿಸಬೇಕಾದ ಸಂಪನ್ಮೂಲಗಳನ್ನು ನೀಡುವ ಬಗ್ಗೆ ಜವಾಬ್ದಾರಿಯಿಂದ ನಡೆಯುತ್ತಿಲ್ಲ. ಪಂಚಾಯತಿಗಳು ಅಸಮರ್ಥ ಮತ್ತು ಅಪ್ರಾಮಾಣಿಕ ಸಂಸ್ಥೆಗಳೆಂದು ರಾಜ್ಯದ ಶಾಸಕರು ಮತ್ತು ಅಧಿಕಾರಿಗಳು ದೂರುತ್ತಿರುತ್ತಾರೆ. ಎಲ್ಲಾ ಪಂಚಾಯತಿಗಳೂ ಸರಿಯಾಗಿ ಕೆಲಸ ಮಾಡದೆ ಇರಬಹುದು. ಆದರೆ ರಾಜ್ಯ ಸರ್ಕಾರಗಳ ದಕ್ಷತೆ ಮತ್ತು ಪ್ರಾಮಾಣಿಕತೆಗಳೇನೂ ಹೇಳಿಕೊಳ್ಳುವಂತಹುದಲ್ಲ. ನ್ಯಾಯಾಲಯಗಳು, ಲೋಕಾಯುಕ್ತರು, ಮಾಧ್ಯಮದವರು ಬಯಲು ಮಾಡಿರುವಂತೆ ಲಂಚಕೋರತನ, ಅಸಮರ್ಥತೆಗಳು ಪಂಚಾಯತಿಗಳಿಗಿಂತ ಹೆಚ್ಚಾಗಿ ನಡೆಯುವುದು ರಾಜ್ಯಮಟ್ಟದಲ್ಲಿ. ಏನಾದರೂ ಈಗ ಜಾರಿಯಲ್ಲಿರುವ ಸಂವಿಧಾನದ ಪ್ರಕಾರ ಜನತೆಯ ಆಶೋತ್ತರಗಳಿಗೆ ಸರಿಯಾಗಿ ಸ್ಪಂದಿಸಬೇಕಾದರೆ ಆದಷ್ಟು ಶೀಘ್ರವಾಗಿ ಪಂಚಾಯತಿಗಳಿಗೆ, ಗ್ರಾಮೀಣ ಕ್ಷೇತ್ರಕ್ಕೆ ತಕ್ಕುದಾದ ಅಧಿಕಾರ, ಸಂಪನ್ಮೂಲಗಳು ಮತ್ತು ಜವಾಬ್ದಾರಿಯನ್ನು ರಾಜ್ಯ ಸರ್ಕಾರಗಳು ವರ್ಗಾಯಿಸುವುದು ಅತಿ ಮುಖ್ಯ. ಹಾಗಾಗದ ಹೊರತು ಗ್ರಾಮ ಸಮಾಜಗಳಲ್ಲಿ ಆಗಬೇಕಾಗಿರುವ ಗಂಭೀರ ಪರಿವರ್ತನೆ ಅಸಾಧ್ಯ. ಭೂಮಾಲೀಕರು, ಸ್ಥಳೀಯ ಕಂಟ್ರ್ಯಾಕ್ಟರುಗಳು, ಸಣ್ಣ ಪುಟ್ಟ ಅಧಿಕಾರಿಗಳು – ಇವರೆಲ್ಲರೂ ನಿರಂಕುಶ ಪ್ರಭುಗಳಾಗಿ ವರ್ತಿಸುವುದು ನಿಲ್ಲುವುದಿಲ್ಲ. ಈ ಪರಿವರ್ತನೆಯಲ್ಲಿ ಮಹಿಳೆಯರ ಪಾತ್ರ ಬಹಳ ಮುಖ್ಯವಾದುದರಿಂದ ಅವರಿಗೆ ದೊರಕುವ ವಿದ್ಯಾಭ್ಯಾಸ, ಉದ್ಯೋಗಾವಕಾಶ, ಅಧಿಕಾರ ಮತ್ತು ಮರ್ಯಾದೆಗಳಿಗೆ ಅತ್ಯಧಿಕ ಅವಕಾಶಗಳನ್ನು ಕಲ್ಪಿಸಬೇಕಾಗಿದೆ.

ಒಟ್ಟಿನಲ್ಲಿ ಕೇಂದ್ರ ಸರ್ಕಾರದ ಬಜೆಟ್‌ನಲ್ಲಿ ಒತ್ತುಕೊಟ್ಟಿರುವ ವಿಷಯಗಳಲ್ಲಿ ಭಿನ್ನಾಭಿಪ್ರಾಯವಷ್ಟಿಲ್ಲದೆ ಇದ್ದರೂ ೨೦೦೬-೨೦೦೭ರಲ್ಲಿ ಸಾಕಷ್ಟು ಸಂಪನ್ಮೂಲಗಳನ್ನು ತಾವೇ ಆಗಲಿ, ರಾಜ್ಯ ಸರ್ಕಾರಗಳ ಮುಖಾಂತರವಾಗಲಿ ಒದಗಿಸುತ್ತಿದ್ದಾರೆಯೇ ಎಂಬ ಪ್ರಶ್ನೆ ಉಳಿಯುತ್ತದೆ. ಕೃಷಿಗಾಗಲಿ, ನೀರಾವರಿಗಾಗಲಿ, ಭಾರತ ನಿರ್ಮಾಣ ಮತ್ತು ಗ್ರಾಮೋದ್ಯೋಗಕ್ಕಾಗಲಿ ಅವಶ್ಯವಿದ್ದಷ್ಟು ಹಣ ಒದಗಿಸದೆ ಇರಲು ಕಾರಣಗಳೆರಡು.

*೧೧ನೇ ಪುಟಕ್ಕೆ*







ಅಮೆರಿಕಾದ ಅಧ್ಯಕ್ಷ 'ಬುಷ್‌ಮನ್' ಬಂದು ಹೋಗಾಯಿತು. ಸಿಕ್ಕಿದವರನ್ನೆಲ್ಲಾ ಗುಮಾನಿಯಿಂದ ನೋಡಿ ಕೊಲ್ಲುವುದು ಬುಷ್‌ಮನ್ ಪ್ರವೃತ್ತಿ. ಎಂದೋ ಗತಿಸಿದ ಗಾಂಧೀಜಿಯನ್ನು ಮತ್ತೆ ಕೊಲ್ಲಲು ಈತ ರಾಜಘಾಟಿಗೂ ತೆರಳಿದ್ದ. ಸಮಾಧಿಯ ಮೇಲೆ ಆತ ಎರಚಿದ ಬಿಳಿ ಹೂಗಳು ಆ ಕ್ಷಣದಲ್ಲಿ ಕೆಂಪಾಗಿಬಿಟ್ಟಿರಬೇಕು, ಏಕೆಂದರೆ ಆತನ ಪುಂಡಾಟಿಕೆಯ ಫಲವಾಗಿ ಹತರಾದ ಸಾವಿರಾರು ಜನರ ರಕ್ತದಿಂದ ಅವನ ಕೈಗಳು ಕೆಂಪಾಗಿವೆ. ಗಾಂಧೀಜಿಯ ರಕ್ತ ಹರಿಸಿದವರು ಮತ್ತು ಅವರನ್ನು ತಮ್ಮ ಆರ್ಥಿಕ ಮತ್ತು ಸಾಂಸ್ಕೃತಿಕ ಕುನೀತಿಗಳಿಂದ ಪ್ರತಿನಿತ್ಯ ಕೊಲ್ಲುತ್ತಿರುವವರು ಮಾತ್ರವೇ ಬುಷ್‌ಗೆ ಸ್ವಾಗತ ಕೋರಿರಲು ಸಾಧ್ಯ. ಬುಷ್ ಜೊತೆ ಅವನ ನಾಯಿಗಳು ರಾಜಘಾಟಿಗೆ ಹೋಗಿದ್ದುದರ ಬಗ್ಗೆ ದೊಡ್ಡ ವಿವಾದ ಏರ್ಪಟ್ಟಿದ್ದಿತು. ಬುಷ್ ಅಂಥವನೇ ಹೋದಮೇಲೆ ಇನ್ನು ನಾಯಿಗಳೇಕೆ ಹೋಗಬಾರದು ! ಈ ಉದ್ಗಾರ ಕೇಳಿಬರಬೇಕಾಗಿತ್ತು, ಆದರೆ ಕೇಳಿಬಂದಂತೆ ತೋರುವುದಿಲ್ಲ. ಯಾರನ್ನೂ ಕೊಲ್ಲದ, ಕೊಲ್ಲಲಾರದ ವಿಜ್ಞಾನಿ ಡಾ|| ಗೋವರ್ಧನ ಮೆಹತಾರಿಗೆ ಅಮೆರಿಕಾ ಪ್ರವೇಶ ನಿಷಿದ್ಧ ; ಆದರೆ ವಿಶ್ವದ 'ನಂಬರ್ ವನ್ ರೋಗ್'ಗೆ ಭಾರತ ಪ್ರವೇಶಿಸಲು ನಿಷೇಧವಿಲ್ಲ. ಲೂಟಿಕೋರರನ್ನು , ಕೊಲೆಗಾರರನ್ನು ಪೋಷಿಸಿ ಬೆಂಬಲಿಸುವುದು ನಮ್ಮ ಕೇಂದ್ರ ಸರ್ಕಾರದ ನೀತಿಯಾಗಿರಬಹುದು, ಆದರೆ ಅದು ದೇಶದ ಜನರಿಗೆ ಮಾನ್ಯವಲ್ಲ. ಆಡಳಿತ ನಡೆಸುತ್ತಿರುವ ಪಕ್ಷವಷ್ಟೇ ನಮ್ಮ ಆಳುವ ವರ್ಗವಲ್ಲ ; ವಾಜಪೇಯಿ ಬಣವೂ ಈ ವರ್ಗಕ್ಕೆ ಸೇರಿದೆ. ಅವರೆಲ್ಲರೂ ಒಟ್ಟಾಗಿ ಬುಷ್‌ಗೆ ಡೊಗ್ಗು ಸಲಾಮು ಹಾಕುತ್ತಾ ದೇಶವನ್ನು ಹೊಸ ದಾಸ್ಯಕ್ಕೆ ತಳ್ಳುತ್ತಿದ್ದಾರೆ. ಬುಷ್‌ನನ್ನು ಓಲೈಸಿ ನಮ್ಮ ಮೇಲೆರಗಿರುವ ಭಯೋತ್ಪಾದನೆಯ ಪಿಡುಗನ್ನು ಪರಿಹರಿಸಿಕೊಳ್ಳುವ ಆಶಯ ತೀರಾ ಮೂರ್ಖತನದ್ದು. ಪಾಕಿಸ್ತಾನವನ್ನು ತನ್ನ ಯೋಜನೆಗಳಿಗೆ ಬಳಸಿಕೊಳ್ಳುವ ಬುಷ್ ಈಗ ಭಾರತವನ್ನೂ ಬಳಸಿಕೊಳ್ಳಲು ಮುಂದಾಗಿರುವುದು ಸ್ಪಷ್ಟವಿದೆ. ಹಾಗೆಂದು ಪಾಕಿಸ್ತಾನದ ಕೈ ಕಟ್ಟಿಹಾಕಿಯಾನು, ಕಾಶ್ಮೀರಕ್ಕೆ ಶಾಂತಿ ತಂದುಕೊಟ್ಟಾನು, ಎಂದು ನಿರೀಕ್ಷಿಸುವುದು ಇನ್ನೂ ಹೆಚ್ಚಿನ ಮೂರ್ಖತನವಾಗುತ್ತದೆ. ನಮ್ಮ ದೇಶದ ಜನರ ಜೊತೆ ನಾವು ನೇರವಾಗಿ ಸಂವಾದ-ಸಂಧಾನ ನಡೆಸಿ ಸಮಸ್ಯೆಗಳನ್ನು ಇತ್ಯರ್ಥಗೊಳಿಸಿಕೊಳ್ಳುವುದು ಪ್ರಜಾಪ್ರಭುತ್ವದ ಕ್ರಮವೇ ವಿನಾ ಹೊರಗಿನಿಂದ ದೊಣೆನಾಯಕನೊಬ್ಬನನ್ನು ತಂದು ತಲೆಯ ಮೇಲೆ ಕೂರಿಸಿಕೊಳ್ಳುವುದು ರಾಜಕೀಯ ಅಪರಾಧವಾಗುತ್ತದೆ. ವಿಶ್ವಕ್ಕೆ ಮಹತ್ತರ ಆತಂಕ ಉಂಟುಮಾಡುತ್ತಿರುವ ಬುಷ್ ಎಂದಿಗೂ ಭಾರತವನ್ನು ಆತಂಕವಾದಿಗಳಿಂದ ರಕ್ಷಿಸಲಾರ. ಆ ಕೆಲಸ ಆಗಬೇಕಾಗಿರುವುದು ನಮ್ಮ ಸರ್ಕಾರದಿಂದ ಮತ್ತು ಜನರಿಂದ. ಆದ್ದರಿಂದ ಬುಷ್‌ನನ್ನು ವಿರೋಧಿಸುವುದೆಂದರೆ ಭಯೋತ್ಪಾದನೆಯನ್ನು ಯಾವುದೇ ಕಾರಣಕ್ಕೂ ಸಮರ್ಥಿಸುವುದೆಂದು ಅರ್ಥವಲ್ಲ.

# ಮುಳ್ಳಿನ ಹಾದಿಯಲ್ಲಿ ಸಾಗುವುದು ಅಪಾಯಕರ

ಬುಷ್ ಭಾರತದಲ್ಲಿದ್ದಾಗ ಸೋವಿಯೆತ್ ಒಕ್ಕೂಟವನ್ನು ಭಗ್ನಗೊಳಿಸುವುದರಲ್ಲಿ ಪಾಲುದಾರನಾದ ಗೋರ್ಬಚೇವ್ ಒಂದು ಹೇಳಿಕೆ ನೀಡಿದ್ದುದು ಗಮನಾರ್ಹವಾಗಿದೆ. ಏಕಧ್ರುವವಿರುವ ವಿಶ್ವ ಸರಿಯಲ್ಲವೆಂದು ಈಗ ಆತನಿಗೆ ಜ್ಞಾನೋದಯವಾಗಿದೆಯಂತೆ ! ತನ್ನ ಗೆಲುವನ್ನು ಹೇಗೆ ಉಪಯೋಗಿಸಬೇಕೆಂದು ಅಮೆರಿಕಾ ತಿಳಿದಿಲ್ಲವೆಂದು ಗೋರ್ಬಚೇವ್‌ಗೆ ವ್ಯಸನ. ಅಣ್ವಸ್ತ್ರಗಳನ್ನು ನಿಷೇಧಿಸುವ ಒಡಂಬಡಿಕೆಯನ್ನು ಸರ್ವಥಾ ಮಾನ್ಯ ಮಾಡಬೇಕೆಂದು ಈಗ ಆತ ಅಮೆರಿಕಾದಿಂದ ಅಪೇಕ್ಷಿಸುತ್ತಾನೆ. ಬಹುಶಃ ಬುಷ್‌ಗೆ ಮುಂದಿನ ಸಲಹೆಗಾರನಾಗಿ ಗೋರ್ಬಚೇವನನ್ನೇ ನೇಮಿಸಿಕೊಳ್ಳಬಹುದೇನೋ ! ಆದರೆ ಭಾರತಕ್ಕೆ ಬರುವ ಮುನ್ನ ಬುಷ್ ಸಾರ್ವಜನಿಕವಾಗಿ ಹೇಳಿದ್ದು ಮುಕ್ತ ಮಾರುಕಟ್ಟೆಯನ್ನು ವಿಸ್ತರಿಸಲು ಮತ್ತು ವ್ಯಾಪಾರವನ್ನು ವೃದ್ಧಿಗೊಳಿಸಿಕೊಳ್ಳಲು ಈ ಭೇಟಿ ಉಪಯುಕ್ತವಾಗುತ್ತದೆ, ಎಂದು. ಅಂದರೆ, ನಮ್ಮ ದೇಶದ ರೈತರಿಗೆ ಇನ್ನಷ್ಟು ಆಘಾತಕಾರಿ ಪೆಟ್ಟು ಮತ್ತು ಇನ್ನಷ್ಟು ಉದ್ಯಮಗಳನ್ನು ಮುಚ್ಚಿಹಾಕುವುದು ಇದರ ಪರಿಣಾಮ. ಅಣುಸ್ಥಾವರಗಳ ಮೇಲೆ ಹದ್ದಿನ ಕಣ್ಣನ್ನು ಹಾಯಿಸುವುದಷ್ಟೇ ಬುಷ್‌ನ ಉದ್ದೇಶವಾಗಿರಲಿಲ್ಲ. ಆದರೂ ಆತನ ಆಣತಿಯಂತೆ ತಲೆಬಾಗುವ ಪ್ರಧಾನಿ, ದೇಶದಲ್ಲಿ ಕಂಡುಬಂದ ಬುಷ್‌ವಿರೋಧಿ ಅಲೆಯನ್ನು ಸಲೀಸಾಗಿ ಕಡೆಗಣಿಸಿದ್ದಾರೆ. ಅದು ಸಾಲದೆಂಬಂತೆ ತಾವೇ ಸ್ವತಃ ವಿಚ್ಛಿದ್ರಕಾರಕ ಶಕ್ತಿಯಾಗಿ ದೇಶವನ್ನು ಒಡೆಯುವಂತಹ ಮಾತನ್ನಾಡಿದ್ದಾರೆ. ಅವರ ಒಂದು ಖಂಡನಾರ್ಹ ಹೇಳಿಕೆಯ ಸಾರಾಂಶ ಹೀಗಿದೆ : ಇರಾಕ್ ಮತ್ತು ಇರಾನಿನ ವಿದ್ಯಮಾನಗಳಿಂದ ಕುಪಿತರಾಗಿರುವ ಕೆಲವು ಮುಸಲ್ಮಾನರು ಬುಷ್ ಭೇಟಿಯ ವಿರುದ್ಧವಾಗಿ ಪ್ರತಿಭಟನೆ ಸಲ್ಲಿಸುತ್ತಿದ್ದಾರೆ; ಬಾಕಿಯಂತೆ ಎಲ್ಲರೂ ಆತನಿಗೆ ಸ್ವಾಗತ ಕೋರುತ್ತಾರೆ. ತಪ್ಪೋ ಸರಿಯೋ, ಅಂತೂ ನಮ್ಮ ವಿಜ್ಞಾನಿಗಳು ಅಮೆರಿಕಾವನ್ನು ಗುಮಾನಿಯಿಂದ ನೋಡುತ್ತಾರೆ ; ಆದರೆ ಅವರೂ ಭಾರತ - ಅಮೆರಿಕಾ ಒಪ್ಪಂದಗಳನ್ನು ಒಪ್ಪುತ್ತಾರೆಂಬ ಭರವಸೆ ಇದೆ.

ಈ ಮಾತಿನ ಒಳಾರ್ಥಗಳನ್ನು ಗಮನಿಸಬೇಕು. ಇರಾಕ್ ಮತ್ತು ಇರಾನ್ ಬಗ್ಗೆ ಮುಸಲ್ಮಾನರಿಗಷ್ಟೇ ಅಸಮಾಧಾನವಿದೆಯೆಂದು ಹೇಳಿ ಬುಷ್ ವಿರೋಧಿ ಚಳವಳಿಗೆ ಮತೀಯ ಬಣ್ಣ ಹಚ್ಚಿದ್ದಾರೆ ನಮ್ಮ ಪ್ರಧಾನಿ. ಮುಸಲ್ಮಾನರಿಗೆ ಇರಾಕ್ - ಇರಾನ್ ವಿದ್ಯಮಾನಗಳು ಅಸಮಾಧಾನ ತಂದಿವೆ, ಆದರೆ ಮನಮೋಹನ ಸಿಂಗರಿಗೆ ಅಸಮಾಧಾನವಿಲ್ಲ! ಮುಸಲ್ಮಾನರಲ್ಲದವರು ಸಹಸ್ರ

ಯಾವ ಸರ್ಕಾರವೇ ಆಗಲಿ ಈಗಿನ ಕೇಂದ್ರ ಸರ್ಕಾರವು ಕೈಗೊಂಡಿರುವ ನೀತಿಗಳಿಗಿಂತಲೂ ಹೇಯವಾದ ಇನ್ನಾವ ನೀತಿಯನ್ನು ಅನುಸರಿಸಬಲ್ಲದು ? ಮತೀಯ ರಾಜಕಾರಣವು ದೇಶಕ್ಕೆ ಮಾರಕವಾದದ್ದು ; ಸಾಮ್ರಾಜ್ಯಶಾಹಿಯ ಜೊತೆ ಶಾಮೀಲಾಗುವ ರಾಜಕಾರಣವು ಅದಕ್ಕಿಂತಲೂ ಕಡಿಮೆ ವಿಪತ್ತಿನದೇನೂ ಅಲ್ಲ. ಅದನ್ನು ಮನಮೋಹನ ಸಿಂಗರಿಗೆ ತಿಳಿಯುವಂತೆ ಗಟ್ಟಿಯಾಗಿ ಹೇಳಬೇಕಾದ ಕಾಲ ಇದು. ಮುಳ್ಳಿನ ಹಾದಿಯಲ್ಲಿ ಸಾಗುವುದು ದೇಶಕ್ಕೆ ಅಪಾಯವೆಂಬುದನ್ನು ಅವರು ತಿಳಿಯದಿದ್ದರೆ ಅವರೊಡನೆ ಹೆಜ್ಜೆಹಾಕುವುದು ಅಸಮರ್ಥನೀಯ.

**ಡಾ|| ಜಿ. ರಾಮಕೃಷ್ಣ**

ಸಂಖ್ಯೆಯಲ್ಲಿ ದೇಶದೆಲ್ಲೆಡೆ ಬುಷ್ ವಿರುದ್ಧ ಪ್ರತಿಭಟನೆ ನಡೆಸಿದ್ದು ಪ್ರಧಾನಿಗೆ ಏಕೆ ಗೋಚರವಾಗಲಿಲ್ಲ? ಹಾಗೆ ವಿರೋಧಿಸಿದವರು ಮತೀಯ ಧೋರಣೆಗಳ ವಿರೋಧಿಗಳೂ ಹೌದೆಂಬುದನ್ನು ಅವರು ಗಮನಿಸಬೇಕಾಗಿತ್ತು. ಆದರೆ ಹೆಡ್‌ಮಾಸ್ತರ್ ಬುಷ್ ಬರುತ್ತಿದ್ದಂತೆ ಕುಬ್ಜನಾಗುವ ನಮ್ಮ ವಿದ್ಯಾರ್ಥಿ ಮನಮೋಹನ ಸಿಂಗ್‌ಗೆ ಇದು ಅರಿವಿಗೆ ಬರಲಿಲ್ಲ. ಬುಷ್ ವಿರೋಧಿಗಳಾಗಿ ನಿಂತವರು ಸಾಮಾನ್ಯ ಜನ, ಪ್ರಗತಿಪರ ರಾಜಕೀಯ ಶಕ್ತಿಗಳು ಮತ್ತು ಹಲವು ವಿಜ್ಞಾನಿಗಳು; ಕೇವಲ ಮುಸಲ್ಮಾನರಲ್ಲ. ಇರಾಕ್-ಇರಾನ್ ಎರಡೂ ಮುಸಲ್ಮಾನ ದೇಶಗಳೆಂಬ ಒಂದೇ ಕಾರಣಕ್ಕೆ ಬುಷ್‌ನನ್ನು ವಿರೋಧಿಸಿದವರು ಮತೀಯವಾದಿಗಳೆನಿಸುತ್ತಾರೆಯೇ ಹೊರತು ಸಾಮ್ರಾಜ್ಯಶಾಹಿಯನ್ನು ಖಂಡಿಸಿ ನಿಲ್ಲುವವರಾಗುವುದಿಲ್ಲ. ದೆಹಲಿಯಲ್ಲಿ ಪಾರ್ಲಿಮೆಂಟನ್ನು ಉದ್ದೇಶಿಸಿ ಭಾಷಣ ಮಾಡಲು ಬುಷ್‌ಗೆ ಅವಕಾಶ ನೀಡಲಾಗಲಿಲ್ಲ. ಅದಕ್ಕೆ ಬಹುಶಃ ಮನಮೋಹನ ಸಿಂಗ್ ಕ್ಷಮೆ ಕೋರಿರಬಹುದು.




ತನ್ನ ರಾಯಭಾರಿಯೇ ಆಹ್ವಾನ ಪತ್ರಿಕೆಗಳನ್ನು ಕಳಿಸಿ ಕೆಲವರನ್ನು ದೆಹಲಿಯ ಪುರಾತನ ಕೋಟೆಯಲ್ಲಿ ಬುಷ್ ಭಾಷಣ ಕೇಳಲು ಕರೆತರಬೇಕಾಗಿಬಂದದ್ದು ಬುಷ್‌ಗೊಂದು ಮಂಗಳಾರತಿಯೇ ಸರಿ. ಅದನ್ನು ಪ್ರಸ್ತಾಪಿಸಿ ಅರುಂಧತಿ ರಾಯ್ ಬರೆದರು : ಈ ಕೋಟೆಯ ಬಳಿ ಪ್ರಾಣಿಸಂಗ್ರಹಾಲಯವಿದೆ. ಅಲ್ಲಿ ಪಂಜರಗಳಲ್ಲಿ ಕೂಡಿಹಾಕಲ್ಪಟ್ಟ ಪ್ರಾಣಿಗಳು ಬುಷ್ ಭಾಷಣ ಕೇಳಬಹುದು. ಜೊತೆಗೆ ಒಂದಷ್ಟು ಜನರನ್ನು ಪಂಜರಗಳಲ್ಲಿ ಹಿಡಿದಿಟ್ಟು ಬುಷ್ ಭಾಷಣ ಬಿಗಿಯಬಹುದು. ಹೀಗೆ ಪಂಜರಗಳಲ್ಲಿ ಕೂಡಿಹಾಕಲ್ಪಟ್ಟವರನ್ನು ಭಾರತದಲ್ಲಿ ''ಪ್ರತಿಷ್ಠಿತ ವ್ಯಕ್ತಿಗಳು'' ಎಂದು ಕರೆಯುವ ವಾಡಿಕೆಯಿದೆ !

ಈ ಪ್ರತಿಷ್ಠಿತರು ಅಮೆರಿಕಾದ ಅನುಯಾಯಿಗಳು. ಅದ್ವಾನಿ, ಸುಬ್ರಮಣ್ಯಸ್ವಾಮಿ, ಟೈಮ್ಸ್ ಆಫ್ ಇಂಡಿಯಾ, ಮುಂತಾದ ಎಲ್ಲ ಪ್ರಾಣಿಗಳೂ ಬುಷ್‌ಮನ್‌ಗೆ ಪರಾಕು ಹೇಳುವ ಮಂದಿ. ಅಮೆರಿಕಾವು ಭಾರತಕ್ಕೆ ಮತ್ತು ವಿಶ್ವಕ್ಕೆ ಎಸಗಿರುವ ಅಪಚಾರ ಅವರ ಗಣನೆಗೆ ಬರುವುದಿಲ್ಲ. ''ಬಾಯ್ದಂಬುಲಕೆ ಕೈಯಾನುವುದು'' ಅವರ ಮುಖ್ಯ ಲಕ್ಷಣ. ಹಿಂದೆಲ್ಲಾ ಕಾಶ್ಮೀರ, ಗೋವಾ, ಬಂಗ್ಲಾದೇಶ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ವಿಶ್ವಸಂಸ್ಥೆಯ ಭದ್ರತಾ ಮಂಡಲಿಯಲ್ಲಿ ಅಮೆರಿಕಾವು ಭಾರತದ ವಿರುದ್ಧ ಎಂತೆಂತಹ ನಿರ್ಣಯಗಳನ್ನು ಮಂಡಿಸಿ ಕಿರುಕುಳ ಕೊಟ್ಟಿದ್ದಿತೆಂಬುದನ್ನು ಅವರು ಮುಚ್ಚಿಹಾಕಬಹುದು. ಆದರೆ ಜನರ ಜ್ಞಾಪಕಶಕ್ತಿ ಅಷ್ಟೊಂದು ಕಳಪೆಯದ್ದಲ್ಲ. ಆಗೆಲ್ಲಾ ಸೋವಿಯೆತ್ ಒಕ್ಕೂಟದ ವೀಟೋಯಿಂದಾಗಿ ಅಮೆರಿಕಾದ ಕುತಂತ್ರಗಳು ಸಿದ್ಧಿಸಲಿಲ್ಲ. ಇತ್ತೀಚೆಗೆ ವಿಶ್ವಸಂಸ್ಥೆಯಲ್ಲಿ ಅಮೆರಿಕಾ ಪ್ರತಿನಿಧಿಯಾಗಿರುವ ಬೋಲ್ಟನ್ ಹೇಳಿದ್ದನ್ನು ಮರೆಯಬಾರದು. ಅವನ ಮಾತಿದು : ವಿಶ್ವಸಂಸ್ಥೆಯ ಖಜಾನೆಗೆ ಕೇವಲ ಶೇಕಡ ೨೦ರಷ್ಟು ಹಣ ನೀಡುವ ಐವತ್ತಕ್ಕೂ ಹೆಚ್ಚು ದೇಶಗಳು ವಿಶ್ವಸಂಸ್ಥೆಯನ್ನು ನಿಯಂತ್ರಿಸುತ್ತಿವೆ. ಅದು ಬದಲಾಗಬೇಕು.

ಹೆಚ್ಚು ಹಣ ನೀಡುವವನು ನಿಯಂತ್ರಿಸಬೇಕು ; ಅಂದರೆ ವಿಶ್ವಸಂಸ್ಥೆಯೆಂದರೆ ಅಮೆರಿಕಾ ಎಂಬುದನ್ನು ಎಲ್ಲರೂ ಒಪ್ಪಬೇಕು. – ಇದು ಬೋಲ್ಟನ್ನನ ನಿಲುವು. ವಿಶ್ವಸಂಸ್ಥೆಗೆ ಅಮೆರಿಕಾ ತೆರಬೇಕಾದ ಬಾಕಿ ಇನ್ನೂ ಹಿಮಾಲಯದಷ್ಟಿದೆ. ಅದು ಅಮೆರಿಕಾದಲ್ಲಿರುವುದರಿಂದ ಭಾಗವಹಿಸುವಿಕೆಗೆ ಅವಕಾಶವನ್ನು ಸಹ ಅಮೆರಿಕಾ ನಿರ್ಧರಿಸುತ್ತದೆ. ಡಾ|| ಫಿಡೆಲ್ ಕ್ಯಾಸ್ಟ್ರೋ ಅಂಥವರಿಗೆ ಪ್ರವೇಶ ನಿರಾಕರಿಸುವುದು ಬೋಲ್ಟನ್ನಿಗೆ ಸುಲಭ. ಜೊತೆಗೆ, ಎಲ್ಲ ದೇಶದವರೂ ಅಲ್ಲಿ ಸೇರುವುದರಿಂದ ಅಮೆರಿಕಾದೊಳಕ್ಕೆ ಹಣ ಹೇರಳವಾಗಿ ಹರಿದು ಬರುತ್ತದೆ. ಯೂರೋಪಿಗೆ ವಿಶ್ವಸಂಸ್ಥೆಯ ಕಚೇರಿಯನ್ನು ಸ್ಥಳಾಂತರಿಸಬೇಕೆಂದರೆ ಮೊದಲ ವಿರೋಧ ಬರುವುದು ಈ ಕಾರಣಗಳಿಗಾಗಿ, ಮತ್ತು ಅಮೆರಿಕಾದಿಂದ. ಬುಷ್‌ನನ್ನು ವಿರೋಧಿಸುವುದು ನಮ್ಮ ದೇಶದ ಸಾರ್ವಭೌಮತ್ವದ ರಕ್ಷಣೆಗಾಗಿ, ಕೃಷಿ-ಉದ್ಯಮಗಳಲ್ಲಿ ಉದ್ಯೋಗಾವಕಾಶಗಳು ನಾಶವಾಗದಿರುವುದಕ್ಕಾಗಿ, ನಾಳೆ ಸಣ್ಣಪುಟ್ಟ ಅಂಗಡಿಗಳು ಮುಚ್ಚಿಹೋಗದಿರುವುದಕ್ಕಾಗಿ. ಇಂತಹ ಹತ್ತುಹಲವು ಕಾರಣಗಳನ್ನು ತಿಳುವಳಿಕೆಯುಳ್ಳವರು ಯಾರಾದರೂ ಮನಮೋಹನ ಸಿಂಗರಿಗೆ ತಿಳಿಸಬಲ್ಲರು. ಅತ್ಯಂತ ಮುಖ್ಯವಾದ ಪ್ರಶ್ನೆ ಇದು : ಬುಷ್ ಒಡನೆ ಸೇರಿ ಕ್ರೂರಪ್ರಾಣಿಗಳಾಗೋಣವೆ ಅಥವಾ ನಮ್ಮ ಯಾವತ್ತಿನ ಆಕಾಂಕ್ಷೆಯನ್ನು ಪೂರೈಸಿಕೊಳ್ಳಲು ಮಾನವರಾಗಿರೋಣವೆ, ಎಂಬುದು.

ಬುಷ್ ಬಂದುಹೋದದ್ದು ಈಗ ಇತಿಹಾಸ. ಬಂದ ಪುಟ್ಟ, ಹೋದ ಪುಟ್ಟ, ಎನಿಸಿಕೊಳ್ಳುವವನಲ್ಲ ಆತ. ಚೀಲ ತುಂಬಿಕೊಂಡೇ ಹಿಂದಿರುಗುವಂತಹವನು ಅವನು. ಬುಟ್ಟಿಗೆ ಬೀಳಲು ತುದಿಗಾಲ ಮೇಲೆ ನಿಂತ ನಮ್ಮ ಪ್ರಧಾನಿಗೆ ಇದು ತಿಳಿದಿಲ್ಲವೆಂದಲ್ಲ; ಅವರು ಮೂಲತಃ ವಿಶ್ವ ಬ್ಯಾಂಕಿನ ಅರ್ಥಶಾಸ್ತ್ರಜ್ಞರಾದ್ದರಿಂದ ಭಾರತಕ್ಕೆ ಸಲ್ಲದ್ದನ್ನು ಸಲ್ಲುತ್ತದೆಂದು ವಾದಿಸುತ್ತಾರೆ, ಅಷ್ಟೆ. ಬುಷ್ ಹಿಂದಿರುಗುವ ಮುನ್ನ ಜಂಟೀ ಹೇಳಿಕೆಯೊಂದನ್ನು ಹೊರಡಿಸಲಾಯಿತು. ನಾವು ಬುಟ್ಟಿಗೆ ಬಿದ್ದದ್ದು ಅದರಲ್ಲಿ ದಾಖಲಾಗಿದೆ ! ''ಅಪಾರ ಹಾನಿಯುಂಟು ಮಾಡುವ ಶಸ್ತ್ರಾಸ್ತ್ರಗಳನ್ನು ಹೊಂದಿರುವವರನ್ನು ನಿಗ್ರಹಿಸಬೇಕು'' ಎಂಬರ್ಥದ ಒಂದು ವಾಕ್ಯ ಹೇಳಿಕೆಯಲ್ಲಿದೆ. ಇದಕ್ಕೆ ಮೂರು ಮುಖ್ಯವಾದ ಅರ್ಥಗಳಿವೆ : (ಅ) ಶಸ್ತ್ರಾಸ್ತ್ರಗಳನ್ನು ನಾವು ಹೊಂದಬಹುದು, ಇತರರು ಹೊಂದಿರಬಾರದು; (ಆ) ಹಾಗೇನಾದರೂ ಹೊಂದಿರುವವರಿದ್ದರೆ ಅವರನ್ನು ನಿಗ್ರಹಿಸುವುದು ಸೂಕ್ತ; ಮತ್ತು (ಇ) ಈ ನಿಗ್ರಹದ ಕಾರ್ಯದಲ್ಲಿ ಅಮೆರಿಕಾ ಮತ್ತು ಭಾರತ ಒಟ್ಟಾಗಿರಬೇಕಾದ ಅವಶ್ಯಕತೆ ಇದೆ.

ಇಂತಹ ನಿಗ್ರಹದ ಹೆಸರಲ್ಲಿ ಇರಾಕನ್ನು ಧ್ವಂಸಮಾಡಿ, ತೈಲವನ್ನು ಲೂಟಿಮಾಡಿ, ಸಾವಿರಾರು ಜನರನ್ನು ಅಮೆರಿಕಾ ಕೊಂದಿದೆ. ಅದನ್ನು ಭಾರತವು ಬಾಯಿಮಾತಿನಲ್ಲಾದರೂ ವಿರೋಧಿಸಿದೆ, ಖಂಡಿಸಿದೆ. ನಾಳೆಯ ಸರದಿ ಇರಾನಿನದು. ಆಗ ಅದನ್ನು ಖಂಡಿಸುವುದಿರಲಿ, ಭಾರತವೂ ನೇರವಾಗಿ ಭಾಗವಹಿಸುವ ದುರಂತದಿಂದ ತಪ್ಪಿಸಿಕೊಂಡರೆ ಸಾಕೆನಿಸುತ್ತದೆ. ಇಂತಹ ಬುಷ್ ಆಲಿಂಗನಕ್ಕೆ ಭಾರತ ಬಲಿಯಾಗಿದೆ. ಪುರಾತನ ಕೋಟೆಯಲ್ಲಿ ''ಪ್ರತಿಷ್ಠಿತ''ರನ್ನುದ್ದೇಶಿಸಿ ಮಾತನಾಡುವಾಗ ತಾನು ದೆಹಲಿಯಲ್ಲಿ ಇರುವುದನ್ನು ತಿಳಿದಿದ್ದೂ ಸಹ ವಾಷಿಂಗ್‌ಟನ್ನಿನಲ್ಲಿ ತೋರಿಸುವ ಉದ್ಧಟತನವನ್ನು ಬುಷ್ ತೋರಿಸಿದ್ದು ಏಕೆ ಮತ್ತು ಹೇಗೆ ? ಇರಾನಿನ ಧಾರ್ಮಿಕ ನಾಯಕರನ್ನು ಪುಡಿಗುಟ್ಟಬೇಕು, ಎಂದಾತ ಅಬ್ಬರಿಸಿದ. ನಮ್ಮ ನೆಲದ ಮೇಲೆ ನಿಂತು ಹೀಗೆನ್ನಲು ಆತನಿಗೇನು ಹಕ್ಕಿದೆ ? ಉತ್ತರ ಕೊರಿಯ, ಬರ್ಮ ಅಥವಾ ಮಯನ್ಮಾರ್, ಕ್ಯೂಬ, ಸಿರಿಯ, ಜಿಂಬಾವೆ ಮುಂತಾದ ದೇಶಗಳ ಜನರನ್ನು ಬಂಧನದಿಂದ ಮುಕ್ತಗೊಳಿಸುವ ಮಾತನ್ನಾಡಿದ ಬುಷ್‌ಗೆ ಜನಾಧಿಕಾರದ ಬಗ್ಗೆ ಗೌರವವಿಲ್ಲ; ಎಲ್ಲರೂ ಅವನ ತಾಳಕ್ಕೆ ಕುಣಿದರೆ ಮಾತ್ರ ಪ್ರಜಾಪ್ರಭುತ್ವವಾದಿಗಳೆನಿಸಿಕೊಳ್ಳುತ್ತಾರೆಂಬುದು ಅವನ ತೀರ್ಮಾನ. ಮಿಲಿಟರಿ ಸರ್ವಾಧಿಕಾರಕ್ಕೂ ಕ್ಯೂಬದಂತಹ ದೇಶದ ವ್ಯವಸ್ಥೆಗೂ ಈತನಿಗೆ ವ್ಯತ್ಯಾಸ ಗೊತ್ತಾಗುವುದಿಲ್ಲವೆ ? ಪಾಕಿಸ್ತಾನ, ಸೌದಿ ಅರೇಬಿಯ, ಇಸ್ರೇಲ್ ಈತನ ಮನ್ನಣೆಗೆ ಪಾತ್ರವಾಗುತ್ತವೆ; ಆದರೆ ಕ್ಯೂಬ, ಸಿರಿಯ, ಜಿಂಬಾವೆ ಆಗುವುದಿಲ್ಲ. ಇದು ಭಾರತದ ನಿಲುವೂ ಆಗಬೇಕೆ ? ರಾಜತಾಂತ್ರಿಕ ಸಂಬಂಧಗಳ ಪ್ರಾಥಮಿಕ ನಿಯಮಗಳನ್ನು ಮುರಿದು ನಮ್ಮೊಡನೆ ಸ್ನೇಹದಿಂದಿರುವ ರಾಷ್ಟ್ರಗಳ ಬಗ್ಗೆ ನಮ್ಮ ದೇಶದಲ್ಲೇ ನಿಂತು ಹೀಗೆ ಗುಡುಗಿರುವ ಬುಷ್‌ಗೆ ಧಿಕ್ಕಾರ ಹೇಳಲು ಮನಮೋಹನ ಸಿಂಗರು ಅಂಜುತ್ತಾರೇಕೆ ? ಬುಷ್ ನಮ್ಮ ಮುಂದೆ ಎತ್ತಿಹಿಡಿಯುವ ಆದರ್ಶವೆಂದರೆ ಆಫ್ಘಾನಿಸ್ತಾನ. ದೇಶದಿಂದ ಓಡಿಹೋಗಿ ಅಮೆರಿಕಾದಲ್ಲಿ ತಂಗಿದ್ದವನೊಬ್ಬನನ್ನು ತಂದು ಆಫ್ಘಾನಿಸ್ತಾನದ ಅಧ್ಯಕ್ಷನನ್ನಾಗಿ ಮಾಡಲಾಗಿರುವುದು ಪ್ರಜಾಪ್ರಭುತ್ವದ ಶುದ್ಧ ಪ್ರತೀಕವೆಂದರೆ ಅದಕ್ಕಿಂತಲೂ ಹೇಯವಾದದ್ದೇನಿದೆ ? ದಕ್ಷಿಣ ಅಮೆರಿಕಾದ ದೇಶಗಳು ಅಮೆರಿಕಾಕ್ಕೆ ಪಾದತಾಡನ ಮಾಡುತ್ತಿರುವಾಗ ಭಾರತವು ಬುಷ್‌ನ ಬೆನ್ನಿಗೆ ನಿಲ್ಲಬೇಕೇಕೆ ? ದೋಹಾ ವಾಣಿಜ್ಯ ಒಪ್ಪಂದದ ಮಾತುಕತೆಗಳಲ್ಲಿ ಭಾರತವು ಅಮೆರಿಕಾದೊಂದಿಗೆ ಕೈ ಜೋಡಿಸಬೇಕೆಂದು ಬುಷ್ ನುಡಿದದ್ದು ನಮ್ಮ ಪ್ರಧಾನಿಗೆ ಕೇಳಿಸಲಿಲ್ಲವೆಂಬುದು ಆಶ್ಚರ್ಯ.

ಇಷ್ಟಾಗಿಯೂ ಆತನಿಗೆ ಲಭ್ಯವಾದ ಶ್ರೇಷ್ಠ ಆತಿಥ್ಯ ಎಂಥದಾಗಿತ್ತೆಂದರೆ ಬುಷ್ ರಾತ್ರೋರಾತ್ರಿ ಪಾಕಿಸ್ತಾನಕ್ಕೆ ಪ್ರಯಾಣಿಸಿದ ! ಬೆಳಗಿನ ಹೊತ್ತು ಇಸ್ಲಾಮಾಬಾದ್‌ನಲ್ಲಿ ಇಳಿದರೆ ಆತನಿಗೆ ರಕ್ಷಣೆ ಕೊಡುವವರಾರು ! ಆತನ ಜನಾನುರಾಗಿತ್ವ ಅಷ್ಟು ಪ್ರಚಂಡವಾಗಿದೆ. ಅವನ ನಾಯಿಗಳಿಗೆ ಪಂಚತಾರಾ ಹೋಟೆಲುಗಳ ಸುಖವನ್ನು ಭಾರತವು ಒದಗಿಸಿಕೊಟ್ಟಿತು; ಆದರೆ ಅವು ಸಹ ಬುಷ್‌ನನ್ನು ರಕ್ಷಿಸಲಾರವೆಂದೇ ಆತ ರಾತ್ರಿಯೇ ಪಯಣಿಸಿದ್ದು. ರಕ್ಷಣೆಯ ಹೊರೆ ಅಷ್ಟೊಂದಿದ್ದರೆ ಆತನನ್ನು ಬರಮಾಡಿಕೊಳ್ಳುವುದು ಕೂಡ ಅನಗತ್ಯ. ನಮ್ಮ ಕೆಲವು ಮಾಧ್ಯಮ ಪರಿಣತರು ಬುಷ್ ಭೇಟಿಯ ಸಂದರ್ಭದಲ್ಲಿ ಪ್ರಕಟಗೊಂಡ ''ದೈಹಿಕ ಭಾಷೆ''ಯನ್ನು ಕುರಿತು ಪುಂಖಾನುಪುಂಖವಾಗಿ ಚರ್ಚೆ ನಡೆಸಿದರು. ಅದು ಭಾರತದ ಬಗೆಗಿನ ಒಲವಿನ ಸೂಚಕವಾಗಿದ್ದಿತಂತೆ. ಆತನು ನಮ್ಮ ಪ್ರಧಾನಿಯ ಹೆಗಲ ಮೇಲೆ ಕೈಹಾಕಿದನಲ್ಲಾ, ಅದಕ್ಕಿಂತಲೂ ಅಧಿಕವಾದ ಪುಣ್ಯ ಬೇರಾವುದುಂಟು, ಎಂಬಂತೆ ಇವರು ವ್ಯಾಖ್ಯಾನ ನೀಡಿದ್ದಾರೆ. ಇದು ಅಸಹ್ಯವೆನಿಸುವಷ್ಟು ನಿರರ್ಥಕವಾಗಿದೆ.

ವಯಸ್ಸಿನಲ್ಲಿ ದೊಡ್ಡವರಾದ ಮನಮೋಹನ ಸಿಂಗ್ ಹಾಗೆ ಕೈಹಾಕಿದ್ದಿದ್ದರೆ ಬುಷ್ ಬಗ್ಗೆ ವಾತ್ಸಲ್ಯದ ಕುರುಹೆನ್ನಬಹುದಾಗಿತ್ತು. ಬುಷ್ ವಯಸ್ಸಿನಲ್ಲಿ ಚಿಕ್ಕವನು, ಆದರೆ ವರ್ಚಸ್ಸಿನಲ್ಲಿ ದೊಡ್ಡವನು ಎಂಬುದರ ದ್ಯೋತಕವಾಗಿ ಹಾಗೆ ನಮ್ಮ ಪ್ರಧಾನಿಯ ಹೆಗಲ ಮೇಲೆ ಕೈಹಾಕಿದ್ದೆ? ಅಥವಾ, ನೀನು ನಾನು ಹೇಳಿದಂತೆ ನಡೆಯುತ್ತೀಯೆ, ಎಂತಹ ಸತ್ಪುರುಷ ನೀನು, ಎಂಬುದನ್ನು ಸೂಚಿಸಲೊ? ಯಾವುದೋ ಕುಹಕವಾಡುವ ಸಂದರ್ಭದಲ್ಲಿ ಬೇರೊಂದು ರೀತಿಯ ದೈಹಿಕ ಭಾಷೆಯ ಪ್ರಸ್ತಾಪ ಬಂದಿತ್ತು: ಬುಷ್‌ಗೆ ಭೋಜನಕೂಟ. ನೂರುಜನ ಸೇರಿದ್ದಾರೆ. ಎಲ್ಲರೂ ಅಭಿಮಾನಿಗಳೇ. ಯಾವ ಅಳುಕೂ ಇಲ್ಲದೆ ಬುಷ್ ಅಪಾನವಾಯುವನ್ನು ಘೋರವಾಗಿ ಹೊರಬಿಟ್ಟಿದ್ದಾನೆ. ಎಲ್ಲರೂ ಹಾಹಾ-ಹೂಹೂ ಎನ್ನುತ್ತಿದ್ದಾರೆ. ಏಕೆಂದರೆ, ನಾನು ನಿಮ್ಮವನು, ಪರಕೀಯನಲ್ಲ, ಮುಕ್ತತೆ ನಮ್ಮ ಜೀವಾಳ, ಎಂದು ಸೂಚಿಸುವ ದೈಹಿಕ ಭಾಷೆ ಅದು!

ದೈಹಿಕ ಭಾಷೆಗಾಗಲಿ ಚಂದದ ಮಾತಿಗಾಗಲಿ ನಾವು ಮರುಳಾಗುವ ಕಾಲವಲ್ಲ ಇದು; ಎಚ್ಚರದಿಂದಿರಬೇಕಾದ ಕಾಲ ಇದು. ನಮ್ಮ ದೇಶದಲ್ಲಿ ಈಗ ಸ್ಫುಟವಾಗಿ ಗೋಚರಿಸುತ್ತಿರುವ ಅಂಶವೊಂದಿದೆ: ನಮ್ಮಲ್ಲಿ ಎರಡು ವರ್ಗಗಳಿವೆ, ಎರಡು ಸಂಸ್ಕೃತಿಗಳಿವೆ. ಅವುಗಳ ನಡುವಿನ ಅಂತರ ಅಗಾಧವಾಗಿದೆ. ಒಂದು ವರ್ಗವು ಬುಷ್‌ನನ್ನು ಆರಾಧಿಸುತ್ತದೆ, ಇನ್ನೊಂದು ಅವನನ್ನು ತುಚ್ಛನೆಂದು ಜರಿಯುತ್ತದೆ. ಜನಸಾಮಾನ್ಯರ ಹಿತ, ದೇಶದ ಸಾರ್ವಭೌಮತ್ವ, ಅಂತರರಾಷ್ಟ್ರೀಯ ರಾಜಕೀಯದಲ್ಲಿ ನೈತಿಕತೆ, ಇವೆಲ್ಲಾ ಇರುವುದು ಬುಷ್‌ನನ್ನು ವಿರೋಧಿಸುವುದರಲ್ಲಿ. ಬುಷ್ ಸ್ವದೇಶಕ್ಕೆ ಮರಳಿದ ದಿನ ಅಲ್ಲಿಯ ಪೆಂಟಗನ್ (ಅದು ಅಮೆರಿಕಾದ ರಕ್ಷಣಾ ಸಚಿವಾಲಯ) ಒಂದು ಹೇಳಿಕೆ ನೀಡಿತು: ಭಾರತವು ಇನ್ನು ಮುಂದೆ ಅಮೆರಿಕಾದಿಂದ ವಿವಿಧ ಮಾದರಿಗಳ ಶಸ್ತ್ರಾಸ್ತ್ರಗಳನ್ನು ಕೊಳ್ಳಲು ಸಾಧ್ಯವಾಗುತ್ತದೆ, ಎಂದು. ಬುಷ್ ಬಂದಿದ್ದು ಶಸ್ತ್ರಾಸ್ತ್ರ ತಯಾರಕರ ಮತ್ತು ಮಾರಾಟಗಾರರ ದಲ್ಲಾಳಿಯಾಗಿ. ಅದಾದ ಕೆಲವೇ ದಿನಗಳಲ್ಲಿ ನಮ್ಮ ದೇಶದ ಅರ್ಥಸಚಿವ ಚಿದಂಬರಂ ಹೇಳಿದರು: ಭಾರತದಲ್ಲಿ ಒಟ್ಟು ನೇರ ವಿದೇಶೀ ಬಂಡವಾಳದ ಹೂಡಿಕೆ ಇರುವುದು ಇನ್ನೂರ ಮೂವತ್ತೇಳು ಬಿಲಿಯನ್ ಡಾಲರುಗಳಷ್ಟು; ಅದರಲ್ಲಿ ಅಮೆರಿಕಾದಿಂದ ಬಂದಿರುವುದು ಕೇವಲ ೫೬ ಬಿಲಿಯನ್. ಆದ್ದರಿಂದ ಅಮೆರಿಕಾದ ಬಂಡವಾಳವನ್ನು ಹೆಚ್ಚು ಆಕರ್ಷಿಸಲು ನಮ್ಮ ದೇಶದ ಜೀವವಿಮೆ ಮತ್ತು ಬ್ಯಾಂಕುಗಳ ಕ್ಷೇತ್ರಗಳನ್ನು ಪೂರ್ತಿ ಸಡಿಲಗೊಳಿಸಬೇಕು, ಎಂದು.

ಸಾರಾಂಶವಿಷ್ಟೇ: ಬುಷ್ ಬಂದದ್ದು ಬುಟ್ಟಿ ತುಂಬಿಕೊಳ್ಳಲೆಂದು; ಬೇರೆಡೆಗಳಲ್ಲೂ ಇದನ್ನು ಮಾಡಲು ಅಡಚಣೆಗಳಿಲ್ಲದಿರುವಂತೆ ಭಾರತವು ತನ್ನೊಡನೆ ದನಿಗೂಡಿಸುವಂತೆ ಪುಸಲಾಯಿಸಬೇಕೆಂದು. ನಾಳೆ ಇರಾನ್; ಆಮೇಲೆ ವೆನಿಜುಯೇಲ, ಕ್ಯೂಬ, ಚಿಲಿ, ಸಿರಿಯ, ಬೊಲಿವಿಯ, ಉತ್ತರ ಕೊರಿಯ ಇತ್ಯಾದಿ. ಭಾರತವು ಈ ಧ್ವಂಸಗಳಿಗೆ ಮೂಕಸಾಕ್ಷಿಯಾಗಿರಬೇಕು, ಇಲ್ಲವೆ ಸಹಭಾಗಿತ್ವವನ್ನು ಪ್ರಕಟಿಸಬೇಕು.

ಇದನ್ನು ಘನವಾದ ಕಾರ್ಯಕ್ರಮವನ್ನಾಗಿ ಮಾಡಿಕೊಂಡಿರುವ ಕೇಂದ್ರದ ಮನಮೋಹನ ಸಿಂಗ್ ಸರ್ಕಾರ ಉಳಿಯಬೇಕೆ? ಮತೀಯ ರಾಜಕೀಯವನ್ನು ಪ್ರತಿರೋಧಿಸುವಾಗ ಸಾಮ್ರಾಜ್ಯಶಾಹಿಗೆ ಭಾರತವು ಬಲಿಯಾಗಬಾರದು, ಎಂಬುದು ಮುಖ್ಯ. ಮತೀಯ ರಾಜಕೀಯವು ಬೆಳೆಯುವುದರ ಹಿನ್ನೆಲೆಯಲ್ಲಿರುವ ರಾಜಕೀಯ ಆರ್ಥಿಕತೆಯು ಸಾಮ್ರಾಜ್ಯಶಾಹಿಯನ್ನೂ ಒಳಗೊಳ್ಳುತ್ತದೆ. ಮನಮೋಹನ ಸಿಂಗ್ – ಚಿದಂಬರಂ – ಅಹ್ಲುವಾಲಿಯ ತ್ರಿಕೂಟವು ಭಾರತವನ್ನು ಅಮೆರಿಕಾದ ತೆಕ್ಕೆಗೆ ಕೊಂಡೊಯ್ಯಲು ಸನ್ನದ್ಧವಾಗಿದೆ. ಎಡಪಕ್ಷಗಳ ಬೆಂಬಲದಿಂದ ಅಸ್ತಿತ್ವದಲ್ಲಿರುವ ಕೇಂದ್ರ ಸರ್ಕಾರವು ಇದನ್ನು ಮಾಡಿದಾಗ ಆ ದುಷ್ಕೃತ್ಯದ ಪಾಪಲೇಪವು ಎಡಪಕ್ಷಗಳಿಗೂ ಅಂಟಿಕೊಳ್ಳುತ್ತದೆ. ದೇಶದ ಜನರ ಮುಂದೆ ಯಾವ ಸಮರ್ಥನೆ ನೀಡಿದರೂ ಅಂಗೀಕರಿಸುತ್ತಾರೆಂಬ ಭ್ರಮೆ ಬೇಡ. ಇಂದಿನ ಕೇಂದ್ರ ಸರ್ಕಾರದ ಅಕ್ರಮಗಳಿಗೆ ಬೇಕಾದರೆ ಭಾರತೀಯ ಜನತಾ ಪಕ್ಷವು ಬೆಂಬಲ ನೀಡಿ ಸರ್ಕಾರವನ್ನು ಉಳಿಸಲಿ; ಆ ಪ್ರಶ್ನಾರ್ಹವಾದ ಮಾರ್ಗವನ್ನು ಎಡಪಕ್ಷಗಳು ತುಳಿಯುವುದು ಹಾನಿಕರ. ಯಾವ ಸರ್ಕಾರವೇ ಆಗಲಿ ಈಗಿನ ಕೇಂದ್ರ ಸರ್ಕಾರವು ಕೈಗೊಂಡಿರುವ ನೀತಿಗಳಿಗಿಂತಲೂ ಹೇಯವಾದ ಇನ್ನಾವ ನೀತಿಯನ್ನು ಅನುಸರಿಸಬಲ್ಲದು? ಮತೀಯ ರಾಜಕಾರಣವು ದೇಶಕ್ಕೆ ಮಾರಕವಾದದ್ದು; ಸಾಮ್ರಾಜ್ಯಶಾಹಿಯ ಜೊತೆ ಶಾಮೀಲಾಗುವ ರಾಜಕಾರಣವು ಅದಕ್ಕಿಂತಲೂ ಕಡಿಮೆ ವಿಪತ್ತಿನದೇನೂ ಅಲ್ಲ. ಅದನ್ನು ಮನಮೋಹನ ಸಿಂಗರಿಗೆ ತಿಳಿಯುವಂತೆ ಗಟ್ಟಿಯಾಗಿ ಹೇಳಬೇಕಾದ ಕಾಲ ಇದು. ಮುಳ್ಳಿನ ಹಾದಿಯಲ್ಲಿ ಸಾಗುವುದು ದೇಶಕ್ಕೆ ಅಪಾಯವೆಂಬುದನ್ನು ಅವರು ತಿಳಿಯದಿದ್ದರೆ ಅವರೊಡನೆ ಹೆಜ್ಜೆಹಾಕುವುದು ಅಸಮರ್ಥನೀಯ.

■ ಡಾ|| ಜಿ. ರಾಮಕೃಷ್ಣ

---

*೩ನೇ ಪುಟದಿಂದ.. (ಈ ತಿಂಗಳು)*

ದೇಶದ ರಾಜಕೀಯದಲ್ಲಿ ಬೇಜವಾಬ್ದಾರಿತನವು ಯಾವ ಹಂತವನ್ನು ತಲುಪಿದೆಯೆಂಬುದರ ಸೂಚನೆಯಾಗಿದೆ. ವಾರಾಣಸಿಯ ಘಟನೆಯ ಹಿನ್ನೆಲೆಯಲ್ಲಿ ಅದ್ವಾನಿಯವರು ಯಥಾಪ್ರಕಾರ ರಥಯಾತ್ರೆಯೆಂಬ ತಮ್ಮ ದೊಂಬೀಯಾತ್ರೆಯನ್ನು ಕೈಗೊಳ್ಳುತ್ತಿದ್ದಾರೆ. ವಾರಾಣಸಿಯ ನಾಗರಿಕರಂತೆ ಇಡೀ ದೇಶದ ನಾಗರಿಕರು ಅದ್ವಾನಿಯವರ ಈ ಕೀಳು ಪ್ರಹಸನಕ್ಕೆ ಇಂಬು ನೀಡುವುದಿಲ್ಲವೆಂದು ಆಶಿಸೋಣ. ಜನರ ನೈಜಸಮಸ್ಯೆಗಳನ್ನೆತ್ತಿಕೊಂಡು ಅದ್ವಾನಿಯವರು ಅಧಿಕಾರಕ್ಕೆ ಬಂದರೆ ಅವರ ಯೋಗ್ಯತೆ ಹೆಚ್ಚುತ್ತದೆ; 'ರಯಟ್-ಯಾತ್ರೆ' ಮಾಡುವುದರಿಂದ ಅಧಿಕಾರವೂ ಇಲ್ಲ, ಯೋಗ್ಯತೆಯ ಹೆಚ್ಚಳವೂ ಇಲ್ಲ. ಭಯೋತ್ಪಾದನೆಯು ದೇಶಕ್ಕೆ ಸಮಸ್ಯೆ, ಅದಕ್ಕೆ ಯಾವುದೋ ಒಂದು ಪಕ್ಷದ ನೀತಿಯು ಮಾತ್ರವೇ ಕಾರಣವಲ್ಲ. ತಾವು ಅಧಿಕಾರದಲ್ಲಿದ್ದು ಕೇಂದ್ರದ ಗೃಹಸಚಿವರಾಗಿದ್ದಾಗ ಪಾರ್ಲಿಮೆಂಟಿಗೇ ಲಗ್ಗೆಯಿಡಲಾಗಿತ್ತು ಮತ್ತು ಆಗ ಇಡೀ ದೇಶವು ಒಂದಾಗಿ ಅದನ್ನು ಪ್ರತಿಭಟಿಸಿತ್ತು, ಎದುರಿಸಿತ್ತು, ಎಂಬುದನ್ನು ಮಾನ್ಯ ಅದ್ವಾನಿಯವರು ನೆನಪಿಸಿಕೊಳ್ಳಲಿ.

* * *

ಉತ್ತರ ಪ್ರದೇಶದ ಒಬ್ಬ ಅಯೋಗ್ಯ ಸಚಿವ ನಾಗರಿಕ ಜೀವನ ಮತ್ತು ಕಾನೂನಿನ ಉಲ್ಲಂಘನೆಯಲ್ಲಿ ಪರಮಾವಧಿ ಸ್ಥಾನವನ್ನು ತಲುಪಿದ್ದಾನೆ. ಯಾರದೋ ತಲೆಯನ್ನು ತರಿದುಹಾಕುವ 'ವೀರ'ನಿಗೆ ಇವನು ಲಕ್ಷಗಟ್ಟಲೆ ಹಣ ನೀಡಲು ಸಿದ್ಧನಿದ್ದಾನಂತೆ. ಸಚಿವನಾಗಿ ಲಕ್ಷಗಟ್ಟಲೆ ಲೂಟಿ ಮಾಡಿದ್ದಕ್ಕೆ ಈತನಿಗೆ ಮೊದಲ ಶಿಕ್ಷೆ ಆಗಬೇಕು; ಯಾರದೋ ಜೀವ ತೆಗೆಯಬೇಕೆಂಬ ಇವನ ರಾಜಕೀಯ ಜೀವನವನ್ನು ಮೊಟಕುಗೊಳಿಸಿ ಕೂಡಲೇ ಕಾರಾಗೃಹಕ್ಕೆ ತಳ್ಳಬೇಕು. ಇವನು ಲಕ್ಷಗಟ್ಟಲೆ ಕೊಟ್ಟರೆ ಇನ್ನಾರೋ ಎಂ. ಎಫ್. ಹುಸೇನರ ಕೈ ಕತ್ತರಿಸಿದರೆ ಐವತ್ತು ಸಾವಿರ ಲಕ್ಷಗಟ್ಟಲೆ ಕೊಡುತ್ತಾನಂತೆ. ಭೂಗತ ಅಪರಾಧಿಗಳಿಗೆ ಸೀಮಿತವಾಗಿದ್ದ 'ಅಡಿಕೆ ಹತ್ಯೆ'ಗಳು ಈಗ ಬಹಿರಂಗವಾಗಿ ವ್ಯಕ್ತವಾಗುತ್ತಿವೆ. ನಮ್ಮ ದೇಶದ ರಾಜಕೀಯದಲ್ಲಿ ಸಂಸ್ಕೃತಿಗೆ ಜಾಗವಿಲ್ಲದಂತಾಗುತ್ತಿದೆಯೆಂಬುದು ಚಿಂತನಾರ್ಹ ವಿಷಯ. ಆದರೆ ಚಿಂತೆ ನಡೆಸಲು ಯಾರಿಗೆ ಸಮಯವಿದೆ! ಕುಮಾರಸ್ವಾಮಿ, ಯಡಿಯೂರಪ್ಪ, ದೇವೇಗೌಡ, ಅವರ ರಾಜಕೀಯವು ಹತ್ಯೆಗಳ ಹಂತವನ್ನು ಮುಟ್ಟಿಲ್ಲ, ಆದರೆ ಅಲ್ಲೂ ಸಂಸ್ಕೃತಿಗೆ ಪುರಸ್ಕಾರವಿಲ್ಲ.

*೮ನೇ ಪುಟದಿಂದ.. (ಸಂಪಾದಕೀಯ)*

ಮೊದಲನೆಯದಾಗಿ, ಕೈಗಾರಿಕೆ ಮತ್ತು ವಾಣಿಜ್ಯವರ್ಗಗಳ ಬೆಳವಣಿಗೆಗಳಿಗೇ ಅಂಟಿಕೊಂಡಿರುವ ಸರ್ಕಾರದ ಸಿದ್ಧಾಂತ ಅಥವಾ ನೀತಿ. ಇದರಿಂದ ಕೇಂದ್ರ ಸರ್ಕಾರ ಅನುಸರಿಸಬಹುದಾದ ಅನೇಕ ಆದಾಯಗಳ ಸಂಗ್ರಹಣೆಯ ಸಾಧ್ಯತೆಗೆ ತೋರುತ್ತಿರುವ ನಿರ್ಲಕ್ಷ್ಯ. ಶ್ರೀ ಚಿದಂಬರಂರವರೇ ಹೇಳಿರುವಂತೆ ತೆರಿಗೆ ವ್ಯವಸ್ಥೆಯಲ್ಲಿ ಕೆಲವರಿಗೆ ದೊರಕುತ್ತಿರುವ ಸೀಮಾಸುಂಕ ಮತ್ತು ಸರಕುಗಳ ಮೇಲಿನ ತೆರಿಗೆಗಳ ವಿನಾಯತಿಯಿಂದ ಸರ್ಕಾರಕ್ಕೆ ೨೦೦೪-೦೫ರಲ್ಲಿ ಆಗಿರುವ ನಷ್ಟ ರೂ. ೧೫೮,೬೬೦ ಕೋಟಿಗಳಷ್ಟು! ಅಲ್ಲಿಂದೀಚೆಗೆ ಎಷ್ಟು ಹೆಚ್ಚಿರಬಹುದೆಂದು ಊಹಿಸಬಹುದು; ಆದರೂ ತಮ್ಮ ಹೊಸ ಬಜೆಟ್‌ನಲ್ಲಿ ಹೊಸದಾಗಿ ಶೇಖರಿಸಲು ಉದ್ದೇಶಿಸಿರುವ ಸುಂಕ ಕೇವಲ ರೂ. ೬,೦೦೦ ಕೋಟಿ! ಎರಡನೆಯದಾಗಿ, ಸರ್ಕಾರದ ಬಜೆಟ್‌ನಲ್ಲಿ ತೋರಿಸುವ ವಿತ್ತೀಯ ಕೊರತೆ ಸಮಗ್ರ ದೇಶೀಯ ಉತ್ಪನ್ನದ ಶೇಕಡ ೩.೮ಕ್ಕೆ ಇಳಿಸುವ ಬದ್ಧತೆ. ಹೀಗೆ ಮಾಡದೆ ಇದ್ದರೆ ಅರ್ಥ ವ್ಯವಸ್ಥೆಯಲ್ಲಿ ಹಣದ ಚಲಾವಣೆ ಮಿತಿಮೀರಿ ಅದರಿಂದ ಬೆಲೆಗಳ ಉಬ್ಬರ ಜಾಸ್ತಿಯಾಗುವುದೆಂಬ ಅನಿಸಿಕೆ. ಆದರೆ ಉಪಯೋಗಿಸುವ ಖರ್ಚಿಗೆ ಸರಿಯಾಗಿ ಕೃಷಿ ಅಥವಾ ದಿನ ಬಳಕೆಯ ವಸ್ತುಗಳ ಉತ್ಪನ್ನ ಜಾಸ್ತಿಯಾದರೆ ಹಣದುಬ್ಬರ ಆಗಬೇಕಾಗಿಲ್ಲ. ಕೃಷಿ ಮತ್ತು ಮಾನವಜೀವನಕ್ಕೆ ಬೇಕಾದ ಸೌಕರ್ಯಗಳನ್ನು ಹೆಚ್ಚಿಸುವ ಇಂಗಿತಕ್ಕೆ ತಕ್ಕಂತೆ ತಮ್ಮ ಬಜೆಟ್‌ನಲ್ಲಿ ಆದಾಯವನ್ನು ಅಳವಡಿಸಿಕೊಳ್ಳಲು ವಿತ್ತ ಮಂತ್ರಿಗಳು ಹಿಂಜರಿದಿರುವುದರಿಂದ ಪ್ರಸಕ್ತ ವರ್ಷದಲ್ಲಿ ಸಾಧಿಸಬಹುದಾಗಿದ್ದ ಅವಕಾಶಗಳನ್ನು ಕಳೆದುಕೊಂಡಂತಾಗಿದೆ. ಇದು ಹಿಂಜರಿಕೆಯೋ ರಾಜಕೀಯ ಸಮಯಸಾಧಕತೆಯೋ?

ಕೆ. ಎಸ್. ಕೃಷ್ಣ ಸ್ವಾಮಿ

ನಿವೃತ್ತ ಡೆಪ್ಯುಟಿ ಗವರ್ನರ್, ಭಾರತೀಯ ರಿಸರ್ವ್ ಬ್ಯಾಂಕ್

# ವಿದ್ವದ್ವರೇಣ್ಯ ಎಸ್. ಕೆ. ರಾಮಚಂದ್ರರಾಯರು

**ಬೆಂ**ಗಳೂರಿನ ಜಯನಗರದ ಮೊದಲನೆಯ ಬ್ಲಾಕಿನಲ್ಲಿ ವಾಸವಾಗಿದ್ದ ಪ್ರೊ॥ ಎಸ್. ಕೆ. ರಾಮಚಂದ್ರ ರಾಯರ ಮನೆ ಈ ಭಾಗದ ನಾಗರಿಕರಿಗೆಲ್ಲ ಒಂದು ಸಂಸ್ಕೃತಿ ಕೇಂದ್ರವಾಗಿತ್ತು. ಜ್ಞಾನಪಿಪಾಸುಗಳಾದ ವಿದ್ವಜ್ಜನರು ಅವರ ಮನೆಗೆ ಅನೇಕ ಸಮಸ್ಯೆಗಳ ಪರಿಹಾರಕ್ಕೆಂದು ಆಗಮಿಸುತ್ತಿದ್ದರು. ಅವರೆಲ್ಲರ ಮನಸ್ಸಿಗೆ ಆಹ್ಲಾದ ಉಂಟಾಗುವಂತೆ ಮಾತನಾಡುವ, ಸಮಾಧಾನ ನೀಡುವ, ಸಮಸ್ಯೆಗಳಿಗೆ ತಾರ್ಕಿಕವಾದ ಪರಿಹಾರಗಳನ್ನು ನೀಡುವ ರಾಯರು ಸದಾ ಹಸನ್ಮುಖಿಗಳಾಗಿ ವಿರಾಜಿಸುತ್ತಿದ್ದರು. ರಾಯರ ವ್ಯಕ್ತಿತ್ವವೇ ಆಕರ್ಷಕವಾದುದು. ಸಂಪ್ರದಾಯದ ವೈದಿಕ ವಿದ್ವಾಂಸರ ಉಡುಪಿನಲ್ಲಿ ತೇಜಸ್ವಿಯಾದ ಈ ಹಿರಿಯರನ್ನು ಕಾಣುವುದೇ ಒಂದು ಸುಖಾನುಭವವನ್ನು ನೀಡುತ್ತಿತ್ತು. ನಾನಾಶಾಸ್ತ್ರ ವಿಚಾರವೆಂಬ ನಿರ್ಮಲ ಜಲದಲ್ಲಿ ಮಿಂದ ಮುಖದಿಂದ ಹೊರಬರುತ್ತಿದ್ದ ವಿವೇಕಯುತವಾದ ವಾಕ್ಪ್ರವಾಹದಿಂದ ಸಂತುಷ್ಟರಾದವರು ಅವರ ಆಗಮನದ ಉದ್ದೇಶ ಸಾರ್ಥಕವಾಯಿತೆಂದು ಭಾವಿಸುತ್ತಿದ್ದರು. ಇಂಥ ಜೀವಂತ ಜ್ಞಾನಭಂಡಾರವಾಗಿದ್ದ ರಾಯರ ಅವಸಾನದಿಂದ ಫೆಬ್ರವರಿ ತಿಂಗಳ ಎರಡನೆಯ ತಾರೀಖಿನ ಪ್ರಾತಃಕಾಲ ನಗರಕ್ಕೆ ವ್ಯಸನ ತುಂಬಿಕೊಂಡಿತು.

ಶತಮಾನದಲ್ಲಿ ಒಬ್ಬರು ಇಂಥ ವಿದ್ವಾಂಸರು ಕಾಣಬರುತ್ತಾರೋ ಇಲ್ಲವೋ ಎಂಬ ಪ್ರಸಿದ್ಧಿಯನ್ನು ಪಡೆದಿದ್ದ ರಾಯರಿಗೆ ಅಂಥ ಅಸಾಧಾರಣ ವ್ಯಕ್ತಿತ್ವವಿತ್ತು. ಸ್ವಗೃಹದ ಹಿನ್ನೆಲೆಯಲ್ಲಿ ಪರಂಪರೆಯಿಂದ ಬಂದ ವೈದಿಕ ಕ್ಷೇತ್ರದ ಅನೇಕ ವಿಭಾಗಗಳಲ್ಲಿ ಅವರು ವಿದ್ಯೆಯನ್ನು ಗಳಿಸಿದರು. ವಿಶ್ವವಿದ್ಯಾನಿಲಯದಲ್ಲಿ ಮನಶ್ಶಾಸ್ತ್ರ ವಿಭಾಗದ ಎಂ.ಎ. ಪದವಿಯಿಂದ ಪಾಶ್ಚಾತ್ಯ ಚಿಂತನೆಯ ಮಾರ್ಗದಲ್ಲಿ ಪರಿಣತಿಯನ್ನು ಗಳಿಸಿದರು. ಹೀಗೆ ಪೌರಸ್ತ್ಯ ಮತ್ತು ಪಾಶ್ಚಾತ್ಯ ಚಿಂತನ ಮಂಥನಗಳ ಸಮ್ಮಿಶ್ರಣದಿಂದ ಅವರ ವ್ಯಕ್ತಿತ್ವಕ್ಕೆ ಅಪೂರ್ವ ಸಾಮರ್ಥ್ಯವು ದತ್ತವಾಗಿತ್ತು. ಅವರು ಪರಿಣತಿಯನ್ನು ಹೊಂದಿದ್ದ ಕ್ಷೇತ್ರಗಳ ವ್ಯಾಪ್ತಿಯನ್ನು ವಿವರಿಸುವುದು ಕಷ್ಟ. ಸಂಸ್ಕೃತ ಸಾಹಿತ್ಯ, ವೇದೋಪನಿಷತ್ತುಗಳು, ಇತಿಹಾಸ ಪುರಾಣಗಳು, ವೈದಿಕ ದರ್ಶನಗಳು, ವೈದಿಕೇತರವಾದ ಜೈನ, ಬೌದ್ಧ ದರ್ಶನಗಳು, ಎಲ್ಲ ಲಲಿತಕಲೆಗಳು, (ಸಂಗೀತ, ಚಿತ್ರಕಲೆ, ಶಿಲ್ಪ, ನಾಟ್ಯ) ಆಯುರ್ವೇದ, ಶ್ರೀವಿದ್ಯೆ, ಅವಧೂತಸಿದ್ಧಿ – ಇವುಗಳಲ್ಲದೆ ದಾಸಸಾಹಿತ್ಯ, ಗ್ರಂಥಸಂಪಾದನೆ, ಅನುವಾದಗಳು ಕೂಡ ಅವರಿಗೆ ಚಿರಪರಿಚಿತವಾದುವೇ. ಈ ಎಲ್ಲ ಶಾಸ್ತ್ರಗಳಿಗೆ ಸಂಬಂಧಿಸಿದಂತೆ ಅವರು ರಚಿಸಿರುವ ಗ್ರಂಥಸಮೂಹವೇ ಇನ್ನೂರರ ಸಂಖ್ಯೆಯ ಹತ್ತಿರ ಬರುತ್ತದೆ.



ರಾಮಚಂದ್ರರಾಯರ ವಿದ್ವತ್ತು ದೊಡ್ಡದು. ಅವರ ಲೇಖನಗಳ ವ್ಯಾಪ್ತಿ ಬಹುಮುಖದ್ದು. ಅವರ ಸ್ನೇಹಶೀಲ ಇವೆರಡಕ್ಕೂ ಹೆಚ್ಚಾದ ಗುಣದ್ದು. ಸದಾ ನಗುಮುಖದ, ಉದಾರ ಹೃದಯದ "ಸಂತೋಷಂ ಜನಯೇತ್ ಪ್ರಾಜ್ಞಃ" ಎಂಬ ಆರ್ಯೋಕ್ತಿಯನ್ನು ನಂಬಿದ, ಮುಗ್ಧ ಹೃದಯದ, ವಿನೀತ ವ್ಯವಹಾರದ ಪರಿಪೂರ್ಣ ವಿದ್ವಾಂಸನನ್ನು ಕಳೆದುಕೊಂಡ ಜನತೆ ಅವರ ಕೃತಿಗಳ ವಾಚನದಲ್ಲಿ ಸಮಾಧಾನವನ್ನು ಕಾಣುತ್ತಿದೆ. ಅವರ ನೆನಪಿಗೆ ಅವರು ರಚಿಸಿರುವ ಕೃತಿರಾಶಿಗಿಂತ ದೊಡ್ಡ ಸ್ಮಾರಕ ಬೇರೆ ಯಾವುದು ತಾನೇ ಇದ್ದೀತು.

**ಪ್ರೊ॥ ಜಿ. ವೆಂಕಟಸುಬ್ಬಯ್ಯ**

ಅಧ್ಯಾತ್ಮಚಿಂತನ ಅವರ ಪ್ರಥಮ ಆಯ್ಕೆ. ಅವರು ಆಧ್ಯಾತ್ಮಿಕ ವ್ಯಾಸಂಗವನ್ನು ಪ್ರಾರಂಭಿಸಿದ ತರುಣದಲ್ಲಿ ಒಮ್ಮೆ ಅವರು ಹಿಂದೆ ಶೃಂಗೇರಿಯ ಶಾರದಾಪೀಠದ ಅಧಿಪತಿಗಳಾಗಿದ್ದ (೧೯೧೨-೧೯೫೪) ಶ್ರೀ ಚಂದ್ರಶೇಖರಭಾರತೀ ಮಹಾಸ್ವಾಮಿಯವರನ್ನು ಕಂಡರಂತೆ. ಆಗ ರಾಯರು ಸ್ವಾಮಿಯವರಿಗೆ ಬಿನ್ನವಿಸಿದ್ದರಂತೆ: "ಮಹಾಸ್ವಾಮಿ, ನಾನು ಮಾಧ್ವ. ನನಗೆ ಅದ್ವೈತವನ್ನು ಅರ್ಥಮಾಡಿಕೊಳ್ಳಬೇಕೆಂಬ ಅಪೇಕ್ಷೆಯಿದೆ. ಸಹಾಯ ಮಾಡಬೇಕು." ಅದಕ್ಕೆ ಸ್ವಾಮಿಗಳು ಉತ್ತರಿಸಿದರಂತೆ :–

"ಅದಕ್ಕೇನು, ಬಾ. ಅದ್ವೈತವೇನು ಸ್ಮಾರ್ತರ ಗುತ್ತಿಗೆಯೆ ?" ಹೀಗೆ ಪ್ರಾರಂಭವಾದಂದಿನಿಂದ ರಾಯರು ಅವರ ಬಳಿ ಆಧ್ಯಾತ್ಮಿಕ ವಿದ್ಯೆಯಲ್ಲಿ ಮುಂದುವರಿದರು. ಅದ್ವೈತದಲ್ಲಿ ಅಪರಿಮಿತವಾದ ಜ್ಞಾನವನ್ನು ಸಂಪಾದಿಸಿದರು. ಜೀವನಪರ್ಯಂತ ಆ ಜ್ಞಾನವನ್ನು ಇತರ ಜ್ಞಾನಪಿಪಾಸುಗಳಿಗೆ ಧಾರೆ ಎರೆದರು. ಹೀಗೆ ಆ ವಿದ್ಯೆಯಲ್ಲಿ ಜ್ಞಾನವನ್ನು ಸಂಪಾದಿಸಿದ ಅನೇಕ ಶಿಷ್ಯರು ತಮ್ಮ ಶಿಷ್ಯವೃತ್ತಿಯನ್ನು ಕೃತಜ್ಞತೆಯಿಂದ ಸದಾ ನೆನೆಯುತ್ತಾರೆ.

ಅವರು ಅದ್ವೈತವನ್ನು ಮಾತ್ರ ಬೋಧಿಸುತ್ತಿರಲಿಲ್ಲ. ದ್ವೈತ, ವಿಶಿಷ್ಟಾದ್ವೈತದ ತತ್ವಗಳನ್ನೂ ಹೋಲಿಕೆಗಾಗಿ ತಿಳಿಸಿಕೊಡುತ್ತಿದ್ದರು. ಕೇಳಿದವರು ತಮಗೆ ಬೇಕಾದ ಮಾರ್ಗವನ್ನು ಅನುಸರಿಸಬಹುದಾಗಿತ್ತು. ಹೀಗೆ ತೌಲನಿಕವಾಗಿ ತ್ರಿಮತಸ್ಥರಿಗೂ ರಾಯರು ಬಹುಕಾಲ ಪಾಠ ಮಾಡಿದ್ದಾರೆ. ಇದೊಂದು ಮಹಾ ಲೋಕೋಪಕಾರ.

ಇಂಥ ಮಹಾವಿದ್ವಾಂಸರು ಯಾವ ವೃತ್ತಿಯಲ್ಲಿಯೂ ಕೊನೆಯತನಕ ನಿರತರಾಗದಿದ್ದುದು ಒಂದು ವಿಸ್ಮಯ. ಬೆಂಗಳೂರಿನ ಭಾರತೀಯ ವಿಜ್ಞಾನಸಂಸ್ಥೆಯಲ್ಲಿ ಸಂಶೋಧಕರಾಗಿ ಸೇರಿದ ಮೇಲೆ ನಿಮ್ಹಾನ್ಸ್ ಸಂಸ್ಥೆಯಲ್ಲಿ ಕ್ಲಿನಿಕಲ್ ಸೈಕಾಲಜಿ ವಿಭಾಗದ ಮುಖ್ಯಸ್ಥರಾಗಿ ದುಡಿದರು. ಯಾವುದೋ ತತ್ತ್ವದ ವಿಚಾರದಲ್ಲಿ ಅಭಿಪ್ರಾಯ ವ್ಯತ್ಯಾಸ ಉಂಟಾಗಿ ತಮ್ಮ ಕೆಲಸಕ್ಕೆ ರಾಜಿನಾಮೆ ನೀಡಿ ಸ್ವತಂತ್ರರಾಗಿ ಬಾಳಲು ನಿಶ್ಚಯಿಸಿದರು. ಅನೇಕ ಕಡೆಗಳಲ್ಲಿ ಸಂದರ್ಶನ ಪ್ರಾಧ್ಯಾಪಕರಾಗಿ ಅತ್ಯುತ್ತಮವಾದ ಕಾರ್ಯಗಳನ್ನು ನಿರ್ವಹಿಸಿದರು. ಆದರೆ ಯಾರ ಕೈಕೆಳಗೂ ದುಡಿಯಲು ಮುಂದಾಗಲಿಲ್ಲ.

ಇಂಥ ಸ್ವಾತಂತ್ರ್ಯದ ದೆಸೆಯಿಂದಲೇ ಅವರ ವ್ಯಾಸಂಗದ ವ್ಯಾಪ್ತಿ ಹೆಚ್ಚಾಯಿತು. ಸ್ವಾರಸ್ಯವೇನೆಂದರೆ ಅವರು ಯಾವ ಕ್ಷೇತ್ರದ ಅಭ್ಯಾಸವನ್ನೇ ಮುಂದುವರಿಸಿದರೂ ಅದರಲ್ಲಿ ಪರಿಪೂರ್ಣವಾದ ತಿಳಿವಳಿಕೆ ಬರುವ ತನಕ ಹಿಮ್ಮೆಟ್ಟಲಿಲ್ಲ. ಅವರು ರಚಿಸಿರುವ ಗ್ರಂಥರಾಶಿಯನ್ನು ನೋಡಿದರೇ ಆಶ್ಚರ್ಯವುಂಟಾಗುತ್ತದೆ.

ಹದಿನಾರು ಸಂಪುಟಗಳ 'ಋಗ್ವೇದದರ್ಶನ' ಒಂದು ಮಹತ್ಕಾರ್ಯ. ಈ ಸಂಪುಟಗಳು ಇಂಗ್ಲಿಷಿನಲ್ಲಿವೆ. ಆದರೂ ಅಲ್ಲಿ ಉಪಯೋಗಿಸಿರುವ ಭಾಷೆ ಜನ

ಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿದೆ. ಬೇಕಾದವರು ಕನ್ನಡಕ್ಕೆ ಅನುವಾದವನ್ನು ಮಾಡಿಕೊಳ್ಳ ಬಹುದು. ಆರು ಸಂಪುಟಗಳ ಪ್ರತಿಮಾಕೋಶ, ಹನ್ನೆರಡು ಸಂಪುಟಗಳ ಆಗಮಕೋಶ, ಆಯುರ್ವೇದದ ಮೂರು ಸಂಪುಟಗಳು – ಇವುಗಳ ರಚನೆಗೆ ಒಂದು ಜೀವಮಾನವೇ ಸಾಕಾಗುವುದಿಲ್ಲ. 'ತಿರುಪತಿಯ ತಿಮ್ಮಪ್ಪ', 'ಶಾರದಾಪೀಠದ ಮಾಣಿಕ್ಯ' ಎಂಬಂಥ ಸಂಶೋಧನ ಗ್ರಂಥಗಳು, ಶಿಲ್ಪಶಾಸ್ತ್ರದ ಕಲೆಗಳ ಸಂಪುಟಗಳು ಬಹು ಆಳವಾದ ಜ್ಞಾನದಿಂದ ಮಾತ್ರ ರಚಿತವಾಗುವಂಥವು. ಹೀಗೆ ನೂರಾರು ಗ್ರಂಥಗಳಿವೆ ಅವರ ಹೆಸರಿನಲ್ಲಿ.

'ಈಶಾವಾಸ್ಯ ಉಪನಿಷತ್ತು' ಎಂಬ ಗ್ರಂಥವು ಉಪನಿಷತ್ತುಗಳಲ್ಲಿ ಮೊದಲನೆಯದು. ಇದು ಶುಕ್ಲ ಯಜುರ್ವೇದದ ವಾಜಸನೇಯಿ ಸಂಹಿತೆಗೆ ಸೇರಿದ್ದು. ಈ ಉಪನಿಷತ್ತಿನ ಸಾರಸರ್ವಸ್ವವನ್ನು ಸುಮಾರು ಇನ್ನೂರು ಪುಟಗಳಲ್ಲಿ ನಿರೂಪಿಸಿರುವ ರೀತಿ ಅನನ್ಯ ವಾದುದು. ಅವರ ಗ್ರಂಥಗಳಲ್ಲಿ ಇದಕ್ಕೆ ಪ್ರಥಮಸ್ಥಾನ ದೊರಕುತ್ತದೆ. ಇಲ್ಲಿಯ ವಿವರಗಳು ತೌಲನಿಕವಾಗಿದ್ದು ಜಿಜ್ಞಾಸುಗಳಿಗೆ ತುಂಬ ಉಪಕಾರಕವಾಗಿದೆ.

ರಾಯರ ಶೈಲಿ ಸರಳ ಮತ್ತು ಸುಂದರ. ಯಾವ ಭಾಷೆಯಲ್ಲಿಯೇ ಆಗಲಿ ಆ ಭಾಷೆಯ ಮರ್ಯಾದೆ ಯನ್ನು ಅನುಸರಿಸಿ ಓದುಗರಿಗೆ ಅದನ್ನು ಆಕರ್ಷಕವಾಗಿ ಮಾಡುವವರಲ್ಲಿ ಅವರು ಸಿದ್ಧಹಸ್ತರು. ಈ ಮಾತನ್ನು ಅವರ ಎಲ್ಲ ಗ್ರಂಥಗಳಿಗೂ ಅನ್ವಯಿಸಬಹುದು.

ಅವರ ಮಾತುಗಾರಿಕೆಯ ಬಗ್ಗೆ ಸ್ವಲ್ಪ ವಿವರವನ್ನು ನೀಡುವುದು ಅಗತ್ಯ. ಯಾವ ವಿಷಯವನ್ನೇ ಆಗಲಿ ಅದರ ಪ್ರಾಮುಖ್ಯವನ್ನು ಮನಮುಟ್ಟುವಂತೆ ಮಾಡಲು ಬೇಕಾದ ಆಧಾರಗಳನ್ನು ಗುರುತಿಸಿಟ್ಟುಕೊಂಡು ವ್ಯಾಖ್ಯಾನ ಮಾಡುತ್ತಿದ್ದರು. ಅವರು ಆರಿಸುವ ಎಲ್ಲ ಶ್ಲೋಕಗಳೂ, ವೃತ್ತಗಳೂ ಅವರಿಗೆ ವಾಚೋ ವಿಧೇಯ ವಾಗಿರುತ್ತಿದ್ದುವು. ಶಬ್ದಗಳು ಪುಂಖಾನುಪುಂಖವಾಗಿ ಧಾರಾಳವಾಗಿ ಹರಿದುಬರುತ್ತಿದ್ದುವು. ಕೇಳುಗರಿಗೆ ಯಾವೊಂದು ವಾಕ್ಯವೂ ಕ್ಲಿಷ್ಟವಾಗುತ್ತಿರಲಿಲ್ಲ. ಒಮ್ಮೆ ನಾನು ಏರ್ಪಡಿಸಿದ್ದ ಒಂದು ರಾಮಾಯಣ ಸಪ್ತಾಹದಲ್ಲಿ ಅವರು ಮೊದಲ ಉಪನ್ಯಾಸ ಮಾಡಿ ಆ ಕಾರ್ಯಕ್ರಮ ವನ್ನು ಉದ್ಘಾಟನೆ ಮಾಡಬೇಕೆಂದು ಕೇಳಿಕೊಂಡೆ. ಅವರು ಪ್ರೀತಿಯಿಂದ ಬಂದು ಮೊದಲನೆಯ ದಿನ ಒಂದೂವರೆ ಗಂಟೆಯ ಹೊತ್ತು 'ಇಂದಿಗೆ ರಾಮಾಯಣದ ಪ್ರಸ್ತುತತೆ' ಎಂಬ ವಿಷಯವಾಗಿ ಭಾಷಣ ಮಾಡಿದರು. ಒಂದು ಚೀಟಿಯೂ ಕೈಯಲ್ಲಿರಲಿಲ್ಲ. ಎಲ್ಲ ಪ್ರಸಂಗಗಳ ಶ್ಲೋಕಗಳನ್ನೂ ಧಾರಾಕಾರವಾಗಿ ಉದಾಹರಿಸಿದರು. ಹೃದಯವನ್ನು ಕಲಕುವ ಭಾವಪೂರ್ಣ ಪ್ರಸಂಗಗಳು ಬಂದಾಗ ಸಭಾಸದರೆಲ್ಲರ ಮನತಟ್ಟುವಂತೆ ರೋಮಾಂಚನ ವಾಗುವಂತೆ ಮಾಡಿದರು. ಸೀತೆಯಾಡಿದ ''ಹಾರೋ ನಾರೋಪಿತಃ ಕಂಠೇ ಮಯಾ ವಿಚ್ಛೇದಭೀರುಣಾ। ಇದಾನೀಂ ಅಂತರೇ ಜಾತಃ ಸರಿತ್ಸಾಗರ ಭೂಧರಾಃ'' ಎಂಬ ಶ್ಲೋಕವನ್ನು ಹೇಳಿ ಕೇಳುಗರ ಕಣ್ಣಿನಲ್ಲಿ ಕಣ್ಣೀರು ತೊಟ್ಟಿಕ್ಕುವಂತೆ ಮಾಡಿದರು. ಈ ಉಪನ್ಯಾಸವನ್ನು ಅಂದು ಕೇಳಿದವರು ಈಗಲೂ ನೆನೆಯುತ್ತಾರೆ.

ಮತ್ತೊಮ್ಮೆ ಕೆಲವು ಜನ ವಿದ್ವಾಂಸರೊಡನೆ ನಾನೂ ರಾಯರೂ ವೇದಿಕೆಯ ಮೇಲೆ ಇರಬೇಕಾಯಿತು. 'Preparation for oldage' ಎಂಬ ವಿಷಯದಲ್ಲಿ ಇಂಗ್ಲಿಷಿನ ಒಂದು ವಿಚಾರ ಸಂಕಿರಣ. ತುಂಬ ಜನ ಸೇರಿದ್ದರು. ಎಲ್ಲರೂ ಒಂದೊಂದು ವಿಷಯವಾಗಿ ಮಾತನಾಡಿದರು. ಹವ್ಯಾಸಗಳ ಪ್ರಯೋಜನ, ಸಂಗೀತ, ಕ್ರೀಡೆ ಇತ್ಯಾದಿಗಳ ನಿರೂಪಣೆಯಾಯಿತು. ನಾನು 'Reading – a safe preparation' ಬಗ್ಗೆ ಮಾತ ನಾಡಿದೆ. ರಾಯರು ಆಧ್ಯಾತ್ಮಿಕ ಸಾಧನೆಯ ಬಗ್ಗೆ ಸ್ಫೂರ್ತಿದಾಯಕವಾಗಿ ಮಾತನಾಡಿದರು. ಕೊನೆಯಲ್ಲಿ ನನ್ನ ಕಡೆ ಕೈಮಾಡಿ 'Mr. G. V., Do not be satisfied with mere reading' ಎಂದು ವಿಶೇಷವಾಗಿ ಹೇಳಿದರು. ಸಭೆಯಲ್ಲಿದ್ದ ಶ್ರೀ ರಾಮಸ್ವಾಮಿ ಎಂಬ ದೊಡ್ಡ ವಿದ್ವಾಂಸರು ಎದ್ದು ಹೇಳಿದರು : "Mr. Ramachandra Rao is one of the most widely read scholars. Why does he object to reading?" ಎಂದರು. ಆ ಬಳಿಕ ರಾಯರು Advantages of reading ಮೇಲೆ ಅರ್ಧಗಂಟೆ ಸೊಗಸಾದ ಉಪನ್ಯಾಸ ಮಾಡಿದರು. ಈ ಸನ್ನಿವೇಶವನ್ನು ನಾನು ನೆನಪಿನಲ್ಲಿಟ್ಟಿದ್ದೇನೆ.

ಅಭಿನವಗುಪ್ತನ ಸ್ಥಾನ ಸಂಸ್ಕೃತ ಸಾಹಿತ್ಯದಲ್ಲೂ ದರ್ಶನ ಶಾಸ್ತ್ರದಲ್ಲೂ ಬಹು ದೊಡ್ಡದು. ಸಾಹಿತ್ಯದ ವಿದ್ಯಾರ್ಥಿಗಳಾದ ನಮಗೆ ಅಭಿನವಗುಪ್ತನ ಹೆಸರು ಅವನು ಆನಂದವರ್ಧನನ 'ಧ್ವನ್ಯಾಲೋಕ'ಕ್ಕೆ ರಚಿಸಿರುವ 'ಲೋಚನ' ಎಂಬ ಟೀಕೆಗೆ ಮಾತ್ರ ಸೀಮಿತ ವಾದದ್ದು. ಆದರೆ ಅಭಿನವಗುಪ್ತನು ಋಷಿಸಮಾನವಾದ ತತ್ವವೇತ್ತನೆಂಬುದು ತಿಳಿದಿತ್ತು, ಆದರೆ ವಿವರಗಳು ನನ್ನ ಗಮನಕ್ಕೆ ಬಂದಿರಲಿಲ್ಲ. ರಾಮಚಂದ್ರರಾಯರು ಕೆಲವು ತಿಂಗಳುಗಳ ಹಿಂದೆ ಅಭಿನವಗುಪ್ತನನ್ನು ಕುರಿತು ಐದು ಉಪನ್ಯಾಸಗಳನ್ನು ನೀಡಿದರು. ಆ ಉಪನ್ಯಾಸಗಳನ್ನು ಕೇಳಲು ಗೋಖಲೆ ಸಾರ್ವಜನಿಕ ಸಂಸ್ಥೆಯಲ್ಲಿ ನಗರದ ಅನೇಕ ವಿದ್ವಾಂಸರು ಬಂದಿದ್ದರು. ಅಭಿನವಗುಪ್ತನ ಪ್ರಮುಖ ಗ್ರಂಥಗಳನ್ನು ಆಧರಿಸಿ ಅವರು ನೀಡಿದ ಉಪನ್ಯಾಸಗಳಲ್ಲಿ ಅವರು ಉದಾಹರಿಸಿದ ಎಲ್ಲ ಶ್ಲೋಕಗಳನ್ನೂ ವೃತ್ತಗಳನ್ನೂ ಅವರು ವಾಚೋ ವಿಧೇಯಗಳನ್ನಾಗಿಸಿಕೊಂಡಿದ್ದರು. ನಮಗೆಲ್ಲ ಆಶ್ಚರ್ಯ ವಾಯಿತು. ಆ ಉಪನ್ಯಾಸಗಳ ಸಂಗ್ರಹಾನುವಾದವನ್ನು ಆಗಲೇ ಪುಸ್ತಕರೂಪದಲ್ಲಿ ಪ್ರಕಟಿಸಲಾಯಿತು. ಅಭಿನವಗುಪ್ತನಲ್ಲಿ ನನಗಿದ್ದ ಆಸಕ್ತಿಯನ್ನು ಅರಿತಿದ್ದ ರಾಯರು ಆ ಸಭೆಯಲ್ಲಿ ನನಗೊಂದು ಪ್ರತಿಯನ್ನು ನೀಡಿ ನನ್ನ ಹೃದಯಕ್ಕೆ ತುಂಬ ತೃಪ್ತಿಯನ್ನು ತಂದಿತ್ತರು.

'ಶ್ರೀತತ್ವನಿಧಿ' ಎಂಬ ಗ್ರಂಥವನ್ನು ರಾಮಚಂದ್ರ ರಾಯರು ಅತ್ಯುತ್ತಮ ರೀತಿಯಲ್ಲಿ ಸಂಪಾದನೆ ಮಾಡಿ ಪ್ರಕಟಪಡಿಸಿದ್ದಾರೆ. ಈ ಗ್ರಂಥದ ಬಗ್ಗೆ ಸ್ವಲ್ಪ ವಿವರ ಗಳನ್ನು ನೀಡದಿದ್ದರೆ ರಾಯರ ಗ್ರಂಥಸಂಪಾದನಾ ಸಾಮರ್ಥ್ಯವನ್ನು ಕಡೆಗಣಿಸಿದಂತಾಗುತ್ತದೆ. ಆದುದರಿಂದ ಸಂಗ್ರಹವಾಗಿಯಾದರೂ ಇಷ್ಟನ್ನು ಹೇಳಲೇಬೇಕು.

ಮೈಸೂರಿನ ಮಹಾರಾಜರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಎಪ್ಪತ್ನಾಲ್ಕು ವರ್ಷಗಳ ಕಾಲ ಬದುಕಿದ್ದರು. ಅವರ ಆಳ್ವಿಕೆಯು ಪ್ರಾರಂಭವಾದ ದಿನಗಳಲ್ಲಿ ಕೆಲವರು ನಡೆಸಿದ ಪಿತೂರಿಗಳ ಪರಿಣಾಮವಾಗಿ ಆಂಗ್ಲ ಕಮೀಷನರುಗಳ ಆಡಳಿತಕ್ಕೆ ರಾಜ್ಯವು ಸಿಕ್ಕಿಕೊಂಡಿತು. ಆದರೂ ಅವರು ವಿದ್ವತ್ಪಕ್ಷಪಾತಿಗಳಾಗಿ, ಧರ್ಮ ಕಾರ್ಯಗಳಲ್ಲಿ ನಿರತರಾಗಿ ಪಂಡಿತರ ಸಹಾಯದಿಂದ ಗ್ರಂಥಗಳನ್ನು ರಚಿಸುತ್ತ ಕಾಲವನ್ನು ಕಳೆದರು. ಅವರ ಹೆಸರಿನಲ್ಲಿ ಅರುವತ್ತಕ್ಕೂ ಮೀರಿದ ಸಂಖ್ಯೆಯ ಗ್ರಂಥಗಳಿವೆ. ತಮ್ಮ ಗ್ರಂಥಗಳನ್ನು ಅರಮನೆಯ ಅಂಬಾ ವಿಲಾಸ ಮುದ್ರಾಕ್ಷರ ಶಾಲೆಯಲ್ಲಿ ಮುದ್ರಿಸಿ ಆಸ್ಥಾನ ಪಂಡಿತರಿಗೂ ಇತರ ಪ್ರಮುಖರಿಗೂ ಅವುಗಳನ್ನು ಉಚಿತವಾಗಿ ಹಂಚುತ್ತಿದ್ದರು. ತಮ್ಮ ಗ್ರಂಥಗಳಿಗೆ ಪ್ರಸಿದ್ಧ ಚಿತ್ರಕಲಾ ಚತುರರ ಕೈಲಿ ವರ್ಣಚಿತ್ರಗಳನ್ನು ಬರೆಸಿ ಪ್ರಕಟಿಸುತ್ತಿದ್ದರು. 'ಶ್ರೀತತ್ವನಿಧಿ' ಎಂಬ ಗ್ರಂಥ ಇಂಥ ಗ್ರಂಥಗಳಲ್ಲಿ ಮುಖ್ಯವಾದುದು. ಮೈಸೂರಿನ ಓರಿಯೆಂಟಲ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ನಲ್ಲಿ ಇದರ ಒಂದೇ ಪ್ರತಿಯಿದೆ. ಆ ಪ್ರತಿಯಲ್ಲಿ ರಾಯಲ್ ಆಕಾರದ ೧೫೦೦ ಪುಟಗಳಿವೆ. ಒಂದು ಸಾವಿರದಷ್ಟು ಕಿರುವರ್ಣ ಚಿತ್ರಗಳಿವೆ. ಇದರ ಬೆಲೆ ಅಲ್ಲಿನ ವಿದ್ವಾಂಸರಿಗೇ ತಿಳಿಯದು. ಆ ಸಂಸ್ಥೆಯಲ್ಲಿರುವ ಪ್ರತಿಯಲ್ಲಿರುವ ವಿವರಗಳನ್ನು ಇತರ ವಿದ್ವಾಂಸರಿಗೆ ತೋರಿಸಲೂ ಅವರೂ ಅಪೇಕ್ಷಿಸುವುದಿಲ್ಲ. ಆದರೆ ಇಂಥ ಉತ್ತಮ ಗ್ರಂಥವು ಇನ್ನು ಹೆಚ್ಚು ಕಾಲ ಕತ್ತಲೆಯಲ್ಲಿರಬಾರದೆಂದು ಒಂದು ಪ್ರತಿಯನ್ನು ಸಂಪಾದಿಸಿ ರಾಯರು ಒಂದು ವಿಶ್ವವಿದ್ಯಾನಿಲಯಕ್ಕೆ ಕಳುಹಿಸಿದರು. ಆದರೆ ಅಲ್ಲಿಯೂ ಇದು ಪ್ರಕಟವಾಗಲಿಲ್ಲ. ಆಗ ಬಹುಪ್ರಯತ್ನದಿಂದ ಆ ಪ್ರತಿಯನ್ನು ಹಿಂದಕ್ಕೆ ತರಿಸಿ ಸಂಪೂರ್ಣವಾಗಿ ಸಂಪಾದನೆ ಮಾಡಿ ಅನೇಕ ವರ್ಣಚಿತ್ರಗಳನ್ನು ಸೇರಿಸಿ ಅತ್ಯಂತ ಸುಂದರವಾಗಿ ಪ್ರಕಟಪಡಿಸಿದ್ದಾರೆ. ಹೀಗೆ ಪ್ರಕಟನೆಗೆ ಸಹಾಯಮಾಡಿದವರು ಕಲ್ಪತರು ಸಂಶೋಧನಾ ಪ್ರತಿಷ್ಠಾನದ ಅಧಿಕಾರಿಗಳು.

ಈ ಗ್ರಂಥವು ಒಂದು ವಿಶ್ವಕೋಶ. ಇದರಲ್ಲಿ ಸಂಗೀತ, ಸಾಹಿತ್ಯ, ಜ್ಯೋತಿಷ, ಆಚಾರ ಸಂಹಿತ, ಆಟಗಳು ಮುಂತಾಗಿ ಬಹು ವ್ಯಾಪಕವಾದ ವಿವರಗಳಿವೆ. ಇಂಥ ಗ್ರಂಥ ಹಿಂದೆ ರಚಿತವಾಗಿರಲಿಲ್ಲ. ಇಲ್ಲಿರುವ ಚಿತ್ರಗಳ ಸಂಗ್ರಹ ಅತಿಪ್ರಮುಖವಾದ ಭಾಗ. ಗ್ರಂಥಗಳಲ್ಲಿ ವರ್ಣಚಿತ್ರಗಳನ್ನು ಸೇರಿಸುವುದು ಪರ್ಷಿಯನ್ ಭಾಷೆಯಿಂದ ಬಂದದ್ದು. ಮುಮ್ಮಡಿ ಯವರು ಈ ಕೆಲಸವನ್ನು ಮಾಡಿದ್ದಾರೆ. ನಮ್ಮ ಸಂಸ್ಕೃತಿಯ ಅನೇಕ ವಿವರಗಳು ಇಲ್ಲಿವೆ. ದೇವತೆಗಳ ಆಕಾರ, ರಾಗಗಳ ಆಕಾರ, ಆಯುಧಗಳ ಆಕಾರ ಹೀಗೆ ಆಕಾರಚಿಂತನೆ ಈ ಗ್ರಂಥದ ದೊಡ್ಡ ಆಕರ್ಷಣೆ. ಅನೇಕ

## ನೆನಪು

ನೆನಪು ದೇವರ ಧ್ಯಾನದಂತೆ !
ಅದೇ ಅಂತಿಮ ತಾಣದಂತೆ !
ಓಹ್ ! ಸಿಲುಕಿದೆ ಮೆದುಳಿಗೆ
ನಿನ್ನ ನೆನಪು
ಒಂದು ರೀತಿಯ ಸುಖದ ಬೆಳಕು !

ಬಂದಗದ್ದೆ ರಾಧಾಕೃಷ್ಣ
'ಪುಸ್ತಕ ಹೊಂಬಾಳೆ', ಕೆಳದಿ ಅಂಚೆ
ಸಾಗರ ತಾಲ್ಲೂಕು - ೫೭೭ ೪೦೧, ಶಿವಮೊಗ್ಗ ಜಿಲ್ಲೆ

ಅಮೂರ್ತ ಭಾವನೆಗಳಿಗೆ ಮೂರ್ತಸ್ವರೂಪವನ್ನು ಕೊಡುವ ಒಂದು ಕ್ರಿಯೆ ಇಲ್ಲಿ ನಡೆದಿದೆ. ಈ ಪುಸ್ತಕದಲ್ಲಿ 'ಸಂತಾನಾಂಬುಜ' ಎಂಬ ವಂಶವೃಕ್ಷದಲ್ಲಿ ರಾಜರ ಮನೆತನದ ಹಿರಿಯರ ಚಿತ್ರಗಳು ಕ್ರಮವಾಗಿ ರಚಿತವಾಗಿವೆ. ಈ ಗ್ರಂಥದಲ್ಲಿ ೯ ನಿಧಿಗಳಿವೆ, ಅಧ್ಯಾಯಗಳಾಗಿ. ಇದರ ಭಾಷೆ ಸಂಸ್ಕೃತ.

ಇಂಥ ಗ್ರಂಥವನ್ನು ವರ್ಣಚಿತ್ರಗಳ ಸಹಿತ, ಕೆಲವು ವರ್ಣರಹಿತ ಚಿತ್ರಗಳೊಡನೆ ಸಂಪಾದಿಸಿ ಪ್ರಕಟಿಸಿ ಗ್ರಂಥ ಪ್ರಕಟಣ ಪ್ರಪಂಚಕ್ಕೆ ದೊಡ್ಡ ಉಪಕಾರವನ್ನು ಮಾಡಿದ್ದಾರೆ, ರಾಯರು. ಇದೊಂದು ವಿಶಿಷ್ಟ ಸೇವೆ ಕರ್ನಾಟಕ ರಾಜ್ಯಕ್ಕೆ.

ರಾಮಚಂದ್ರರಾಯರ ಉದಾರ ಹೃದಯವನ್ನೂ ಶಿಶುಸಮಾನವಾದ ಮುಗ್ಧತೆಯನ್ನೂ ಅವರ ಸಂಸಾರದ ಸಂತೋಷಪ್ರದವಾದ ಸ್ವಭಾವವನ್ನೂ ತಿಳಿಸುವ ಒಂದು ವೈಯಕ್ತಿಕ ಘಟನೆಯಿಂದ ಈ ಲೇಖನವನ್ನು ಮುಗಿಸುತ್ತೇನೆ.

ಒಮ್ಮೆ ನಾನು ಅವರ ಮನೆಗೆ ಹೋದಾಗ ಅವರ ಮನೆಯ ಮುಂಗಟ್ಟಿನಲ್ಲಿ ಒಂದು ಮಣ್ಣಿನ ಕುಂಡದಲ್ಲಿ ಒಂದು ದಾಸವಾಳದ ಗಿಡವಿದ್ದುದನ್ನು ನೋಡಿದೆ. ಅದರಲ್ಲಿ ಒಂದೇ ಒಂದು ಹೂವು ಆಗತಾನೇ ಅರಳಿತ್ತು. ಪ್ರಾತಃಕಾಲದ ತಿಳಿಬೆಳಕಿನಲ್ಲಿ ಅದರ ಬಣ್ಣ ತುಂಬ ಆಕರ್ಷಕವಾಗಿತ್ತು. ಹಳದಿಗೂ ಕೆಂಪಿಗೂ ನಡುವಣ ಒಂದು ಹೊಸ ಬಣ್ಣ. ನಾನೂ ಅದರಿಂದ ಆಕರ್ಷಿತ ನಾಗಿದ್ದೆ. ನಮ್ಮ ಮಾತು ಮುಗಿದು ಮನೆಗೆ ನಾನು ಹಿಂದಿರುಗುವಾಗ ಆ ಹೂವಿನ ಆಕರ್ಷಣೆಯನ್ನು ಮತ್ತೆ ಹೇಳಿದೆ. ಅವರು "ಬೇಕಾದರೆ ನೀವು ಅದನ್ನು ನಿಮ್ಮ ಮನೆಗೆ ತೊಗೊಂಡುಹೋಗಿ" ಎಂದರು. "ನಿಮ್ಮ ಮನೆಗೆ ಗತಿ ಏನು ?" ಎಂದು ನಾನು ಕೇಳಿದೆ. ರಾಯರ ಹೆಂಡತಿ ನಮ್ಮಲ್ಲಿ ಇದೇ ಹೂವಿನ ಮತ್ತೊಂದು ಗಿಡ ಇದೆ ಎಂದರು. ರಾಯರು ತಾವೇ ಆ ಕುಂಡವನ್ನು ಹಿಡಿದು ಬಂದು ನನ್ನ ಕಾರಿನಲ್ಲಿ ಇಟ್ಟುಬಿಟ್ಟರು. ನಾನೇನೋ ಮನೆಗೆ ತಂದುಬಿಟ್ಟೆ. ನಮ್ಮ ಮನೆಯಲ್ಲಿ ಆ ಗಿಡವು ಬೆಳೆದು ಪ್ರತಿದಿನವೂ ದೇವತಾರ್ಚನೆಗೆ ೮-೧೦ ಹೂವುಗಳನ್ನು ಬಿಟ್ಟು ಸಹಾಯಕವಾಯಿತು. ರಾಯರನ್ನು ಕಂಡಾಗಲೆಲ್ಲ ಆ ಗಿಡದ ಹೂವುಗಳ ವಿಚಾರವನ್ನು ನಾನು ಹೇಳದೆ ಬಿಡುತ್ತಿರಲಿಲ್ಲ. ಎರಡು ಮೂರು ವರ್ಷಗಳ ಬಳಿಕ ಹೀಗೆಯೇ ಅವರ ಮನೆಯಲ್ಲಿ ಮಾತನಾಡುತ್ತಿದ್ದಾಗ ಶ್ರೀಮತಿ ರಾಮಚಂದ್ರರಾಯರು "ನಮ್ಮ ಮನೆಯ ಗಿಡ ಸತ್ತುಹೋಯಿತು" ಎಂದರು. ನನಗೆ ಆಘಾತವಾಯಿತು. ನಾನು ಆ ಗಿಡವನ್ನು ನಮ್ಮ ಮನೆಗೆ ತರದೆ ಇದ್ದರೆ ಅದರ ಹೂವುಗಳು ಇದೇ ಮನೆಯಲ್ಲಿರುತ್ತಿದ್ದುವಲ್ಲಾ ಎಂಬ ಚಿಂತೆ ಹತ್ತಿತು. ರಾಯರು ಗೂಟಿಮಾಡಿ ಮತ್ತೊಂದು ಗಿಡವನ್ನು ಮಾಡ ಬಹುದು ಎಂದು ಹೇಳಿದರು. ಬಹಳ ವ್ಯಸನದಿಂದ ನಾನು ಮನೆಗೆ ಬಂದೆ. ಆ ಹೂವಿನ ಗಿಡದ ಮುಂದೆ ನಿಂತು ಹಳೆಯ ನೆನಪನ್ನು ತಂದುಕೊಂಡೆ. ನನ್ನ ಕಣ್ಣಿಗೆ ಅದರ ಪಕ್ಕದ ಕುಂಡದಲ್ಲಿ ಅದೇ ಗಿಡದ ಗೂಟಿ ಮಾಡಿದ ಸಸಿ ಬೆಳೆದಿತ್ತು. ಅದರಲ್ಲಿ ಒಂದೇ ಮೊಗ್ಗು ಅರಳುವುದರಲ್ಲಿತ್ತು. ಮಾರನೆಯ ದಿನ ಬೆಳಗ್ಗೆ ಬಹುಬೇಗ ರಾಯರು ವಾಯುವಿಹಾರದಿಂದ ಮನೆಗೆ ಹಿಂದಿರುಗುವ ವೇಳೆಗೆ ಆ ಗಿಡವನ್ನು ಕಾರಿನಲ್ಲಿಟ್ಟು ಕೊಂಡು ಹೋಗಿ ಅವರ ಮನೆಯ ಮುಂಗಟ್ಟಿನಲ್ಲಿ ಹಿಂದೆ ಇಟ್ಟಿದ್ದ ದಾಸವಾಳದ ಸ್ಥಳದಲ್ಲಿಯೇ ಈ ಕುಂಡವನ್ನು ಇಟ್ಟು ರಾಯರಿಗೆ ತೋರಿಸಿದೆ. ಅವರಿಗೆ ಆದ ಸಂತೋಷ ಅಷ್ಟಿಷ್ಟಲ್ಲ. ಅವರ ಹೆಂಡತಿಯನ್ನು ಕರೆದು "ನೋಡು, ತಪ್ಪಿಸಿಕೊಂಡು ಹೋಗಿದ್ದ ಮಗು ಮನೆಗೆ ಬಂದಹಾಗಿದೆ" ಎಂದು ಹೇಳಿದರು. ನನ್ನ ಮನಸ್ಸಿಗೆ ಮಹಾ ಸಮಾಧಾನವಾಯಿತು. ಈ ಸನ್ನಿವೇಶದ ಚಿತ್ರ ನನಗೆ ಆಗಾಗ ಕಣ್ಮುಂದೆ ಕಟ್ಟುತ್ತದೆ.

ರಾಮಚಂದ್ರರಾಯರ ವಿದ್ವತ್ತು ದೊಡ್ಡದು. ಅವರ ಲೇಖನಗಳ ವ್ಯಾಪ್ತಿ ಬಹುಮುಖದ್ದು. ಅವರ ಸ್ನೇಹಶೀಲ ಇವೆರಡಕ್ಕೂ ಹೆಚ್ಚಾದ ಗುಣದ್ದು. ಸದಾ ನಗುಮುಖದ, ಉದಾರ ಹೃದಯದ "ಸಂತೋಷಂ ಜನಯೇತ್ ಪ್ರಾಜ್ಞಃ" ಎಂಬ ಆರ್ಯೋಕ್ತಿಯನ್ನು ನಂಬಿದ, ಮುಗ್ಧ ಹೃದಯದ, ವಿನೀತ ವ್ಯವಹಾರದ ಪರಿಪೂರ್ಣ ವಿದ್ವಾಂಸನನ್ನು ಕಳೆದುಕೊಂಡ ಜನತೆ ಅವರ ಕೃತಿಗಳ ವಾಚನದಲ್ಲಿ ಸಮಾಧಾನವನ್ನು ಕಾಣುತ್ತಿದೆ. ಅವರ ನೆನಪಿಗೆ ಅವರು ರಚಿಸಿರುವ ಕೃತಿರಾಶಿಗಿಂತ ದೊಡ್ಡ ಸ್ಮಾರಕ ಬೇರೆ ಯಾವುದು ತಾನೇ ಇದ್ದೀತು.

**ಪ್ರೊ|| ಜಿ. ವೆಂಕಟಸುಬ್ಬಯ್ಯ**
ನಂ. ೫೮, ೩೧ನೇ ಕ್ರಾಸ್, ೭ನೇ ಬ್ಲಾಕ್, ಜಯನಗರ
ಬೆಂಗಳೂರು - ೫೬೦ ೦೭೦

## ತಿಳಿಗೊಳ

**ತಿ**ಳಿಗೊಳಕ್ಕೆ ಹಾರಿ ಬಂದು ಕೂತಿವೆ
ನೂರಾರು ಹಕ್ಕಿಗಳು
ಹೇಳು, ಗೆಳತಿ
ಹಕ್ಕುಗಳುಂಟೆ ಎಲ್ಲ ಹಕ್ಕಿಗಳಿಗೆ ?
ಈ ಗಳಿಗೆ ಒಂದು ಹಕ್ಕಿಗೆ ಮಾತ್ರ ತಾವು.

ಈ ಗಳಿಗೆ ಮಾತ್ರವಲ್ಲ
ಅದೊಂದೇ ಹಕ್ಕಿಗೆ ಹಕ್ಕುಂಟು ಯಾವಾಗಲೂ.
ಬಂಗಾರ ಬಣ್ಣದ ಹಕ್ಕಿ ಅದರ ಚೆಲುವು
ಚೆಲುವಿನೊಳಗಿನ ಚೆಲುವು
ಹೊರಸೂಸುತ್ತಿದ್ದರೆ,
ಸಂಜೆ ಸೂರ್ಯ ಕೂಡ ನಾಚಿಬಿಡುತ್ತಾನೆ ಕಣೆ !
ಹಕ್ಕಿಯನು ಬೊಗಸೆಯಲಿ ಹಿಡಿದು
ಕೆನ್ನೆಗೆ ಒತ್ತಿ
ತುಟಿಯ ಚಾಚಿದರೆ, ಮೆಲ್ಲಗೆ ಕೊಕ್ಕು ಮುಂಚಾಚಿ
ಈಡಾಡಿ ಬಿಡುತ್ತದೆ
ಪ್ರೀತಿಯ ಮಳೆಗರೆದು.
ಮುಂಜಾವದ ಪ್ರೀತಿಯ ತಿಳಿಗೊಳದಲ್ಲಿ ಕುಳಿತು
ಆ ಹಕ್ಕಿಗಾಗಿ ಧ್ಯಾನಗೊಳ್ಳುವೆ ನಾನು



ಇಂಥ ಹಕ್ಕಿಗಳು ಮಾತ್ರ ಪ್ರೀತಿಯ ಅಮೃತವನು
ಧರೆಗೆ ತರುತ್ತವೆ ಧಾರೆಧಾರೆಯಾಗಿ
ಭೊಗಸೆಯಲಿ ಹಿಡಿದು
ಕಣ್ಣಿಗೆ ಒತ್ತಿಕೊಳ್ಳುವೆನು ಆಗ ನಾನು !!

**ಜ. ನಾ. ತೇಜಶ್ರೀ**
ನಂ. ೪೫೦, ವಿಶ್ವೇಶ್ವರಯ್ಯ ರಸ್ತೆ, ವಿದ್ಯಾನಗರ
ಹಾಸನ - ೫೭೩೨೦೧

# ಬೆಂಕಿ ಮತ್ತು ಹೂವು...

ಹಂಝು ಮಲಾರ್

ರಾತ್ರಿಯ ಕಗ್ಗತ್ತಲನ್ನು ಸೀಳಿಕೊಂಡು ಆ ಜೀಪು ನಡುರಸ್ತೆಯಲ್ಲಿ ಹಿಮ್ಮುಖವಾಗಿ ನಿಂತಿತು. ಅದರಲ್ಲಿದ್ದ ಐದು ಮಂದಿ ಮೆಲ್ಲನೆ ಇಳಿದರು. ಹಾಗೇ ಅತ್ತಿತ್ತ ಕಣ್ಣು ಹಾಯಿಸಿದರು. ಅಕ್ಕಪಕ್ಕದ ಮನೆಯವರು ನಿದ್ದೆಹೋದುದನ್ನು ಗಮನಿಸಿದರು. ಮನೆಯ ಅಂಗಳದ ವಿದ್ಯುತ್ ದೀಪಗಳು ಉರಿಯುತ್ತಿರುವುದು ಕಂಡುಬಂತು. ಆದರೆ ಒಂದೇ ಒಂದು ನರಪಿಳ್ಳೆಯೂ ಕಾಣಿಸಲಿಲ್ಲ. ನಾಯಿಯ ಆರ್ಭಟವೂ ಇಲ್ಲ. ಅವರು ನುಗ್ಗಬೇಕಾದ ಮನೆ ರಸ್ತೆಯಿಂದ ತುಂಬಾ ಒಳಗಡೆ ಇತ್ತು. ಅಲ್ಲಿಗೆ ನಡೆದುಕೊಂಡು ಹೋಗುವಾಗ ಬೂಟುಗಾಲಿನ ಶಬ್ದದಿಂದ ಇತರರಿಗೆ ಎಚ್ಚರವಾಗಬಾರದು ಎಂದು ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ತನ್ನ ಅಧೀನ ಪೊಲೀಸರಿಗೆ ಸೂಚಿಸಿದರು. ಅವರನ್ನು ಪೊಲೀಸರು ಎಂದು ಹೇಳಲು ಯಾವುದೇ ಆಧಾರವಿರಲಿಲ್ಲ. ಅಂದರೆ, ಅವರು ಸಮವಸ್ತ್ರ ಧರಿಸಿರಲಿಲ್ಲ. ಸಿವಿಲ್ ಡ್ರೆಸ್‌ನಲ್ಲೇ ಇದ್ದ ಆ ಪೊಲೀಸರು ಟಾರ್ಚ್ ಲೈಟ್ ಹಿಡಿದುಕೊಂಡು ಅತ್ತ ಮೆಲ್ಲನೆ ಹೆಜ್ಜೆ ಹಾಕಿದರು. ತಾನು ವಾಹನದಲ್ಲೇ ಇರುವುದಾಗಿ ಜೀಪು ಚಾಲಕ ಹೇಳಿದ. ಬೇಡ, ನೀನು ಬಾ... ಎಂದು ಸಬ್ ಇನ್ಸ್‌ಪೆಕ್ಟರ್ ಕರೆದಾಗ, ಯಾರೋ ಬಂದು ಜೀಪಿನ ಚಕ್ರದ ಗಾಳಿ ತೆಗೆದರೆ... ಎಂದು ಹೇಳಿ ಸಬ್ ಇನ್ಸ್‌ಪೆಕ್ಟರ್‌ರನ್ನು ಬೆರಗುಗೊಳಿಸಿದ.

''ಆಯ್ತು... ನೀನು ಅಲ್ಲೇ ಇರು'' ಎಂದು ಸಬ್ ಇನ್ಸ್‌ಪೆಕ್ಟರ್ ಹೇಳಿದಾಗ, ಚಾಲಕ ಗೆಲುವಿನ ನಗೆ ನಕ್ಕ.

ಪೊಲೀಸರು ಕಿರಿದಾದ ಕಾಲುದಾರಿ ಬಳಸಿ ಮೆಲ್ಲನೆ ಹೆಜ್ಜೆ ಹಾಕತೊಡಗಿದರು. ರಾತ್ರಿ ೨.೩೦ ಗಂಟೆಯಾಗಿತ್ತು. ಎಲ್ಲರೂ ಗಾಢ ನಿದ್ದೆಯಲ್ಲಿದ್ದರು. ಅವರು ಸುಮ್ಮನೆ ನಡೆದುಕೊಂಡು ಹೋಗುತ್ತಿದ್ದರೇ ವಿನಾ ಮಾತನಾಡುತ್ತಿರಲಿಲ್ಲ. ಮಾತಿಗೆ ಅದೆಷ್ಟೋ ವಿಷಯ ಇದ್ದರೂ ಅದು ತಮ್ಮ ಕೆಲಸಕ್ಕೆ ತೊಂದರೆಯಾದೀತು ಎಂದು ಬಗೆದು ನಡೆದುಕೊಂಡು ಹೋಗುತ್ತಿದ್ದರು.

ಈವತ್ತು ಖಂಡಿತಾ ಅವ ಅಲ್ಲೇ ಇರುತ್ತಾನೆ. ಮುಂಜಾನೆ ಐದರ ಮುಂಚೆಯೇ ಎದ್ದುಹೋಗುತ್ತಾನೆ. ಈ ರಾತ್ರಿ ನಮ್ಮ ಕೆಲಸ ಆಗದಿದ್ದರೆ, ಮತ್ತೆ ಜನ್ಮದಲ್ಲಿ ಅವನನ್ನು ಹಿಡಿಯಲು ಸಾಧ್ಯವಿಲ್ಲ. ಅವನ ತಲೆಗೆ ಆಗಲೇ ಬಹುಮಾನ ಘೋಷಿಸಲಾಗಿದೆ. ಜಿಲ್ಲಾ ದಂಡಾಧಿಕಾರಿ ಗಡಿಪಾರು ಆದೇಶ ಹೊರಡಿಸಿದ್ದಾರೆ. ಅಂಥ ಕುಖ್ಯಾತಿಗೊಳಗಾಗಿರುವ ದರೋಡೆಕೋರನನ್ನು ಹಿಡಿದರೆ, ನಮಗೆ ಈ ಬಾರಿ ರಾಜ್ಯ ಪೊಲೀಸ್ ಪ್ರಶಸ್ತಿ ಸಿಗಲಿದೆ ಎಂಬ ಆಶಾಭಾವನೆಯನ್ನು ಸಬ್ ಇನ್ಸ್‌ಪೆಕ್ಟರ್ ಆನಂದ್ ಹೊಂದಿದ್ದರು.

''ನಿನ್ನೆ ಅವನ ತಂಗಿಯ ಎಂಗೇಜ್‌ಮೆಂಟ್. ವರದಕ್ಷಿಣೆಯ ಹಣವನ್ನು ಖುದ್ದು ಅವನೇ ತಂದು ಕೊಡಲಿದ್ದಾನೆ. ಅವನು ನೋಡಲು ಹಿಂದಿನಂತೆ ಇಲ್ಲ. ಅಂದರೆ ಸಂಪೂರ್ಣ ವೇಷ ಮರೆಸಿದ್ದಾನೆ. ಅವನ ತಂಗಿಯ ಎಂಗೇಜ್‌ಮೆಂಟ್ ಚಂದದಲ್ಲೇ ಆಗಲಿ. ಆ ರಾತ್ರಿಯೂ ಅವನು ಆ ಮನೆಯಲ್ಲಿರುತ್ತಾನೆ. ಹಾಗಾಗಿ ನೀವು ರಾತ್ರಿ ೧೨ ನಂತರ ಅವನ ಮನೆಗೆ ನುಗ್ಗಿದರೆ, ಖಂಡಿತಾ ನಿಮ್ಮ ಕೆಲಸ ಯಶಸ್ವಿಯಾಗಲಿದೆ'' ಎಂದು ಮಾಹಿತಿದಾರ ಎರಡು ದಿನದ ಹಿಂದೆ ಬಂದು ಹೇಳಿದಾಗ, ಸಬ್ ಇನ್ಸ್‌ಪೆಕ್ಟರ್ ಆನಂದ್ ಅದನ್ನು ತನ್ನ ಮೇಲಿನ ಅಧಿಕಾರಿಗಳಿಗೂ ತಿಳಿಸಲಿಲ್ಲ. ತನ್ನ ನಂಬಿಗೆಯ ನಾಲ್ಕು ಮಂದಿ ಪೊಲೀಸರಿಗೆ ಮಾತ್ರ ತಿಳಿಸಿ ಅತ್ಯಂತ ಗುಪ್ತವಾಗಿಯೇ ಈ ಕೆಲಸವಾಗಬೇಕು. ಸರ್ಕಲ್ ಇನ್ಸ್‌ಪೆಕ್ಟರ್ ರಜೆಯಲ್ಲಿ ಊರಿಗೆ ಹೋಗಿದ್ದಾರೆ. ಅವರು ಮರಳಿ ಬರುವ ಮುನ್ನವೇ ಕುಖ್ಯಾತ ರೌಡಿಯನ್ನು ಸೆರೆಹಿಡಿಯಬೇಕು. ಮರುದಿನ ಪತ್ರಿಕಾಗೋಷ್ಠಿ ಕರೆಯಬೇಕು. ಸಖತ್ ಪ್ರಚಾರ ಪಡೆಯಬೇಕು. ಖುದ್ದು ನಿಮ್ಮನ್ನೇ ಫೋಟೋಗೆ ಪೋಸ್ ಕೊಡಿಸುವ ವ್ಯವಸ್ಥೆಯನ್ನು ಎಸ್‌ಪಿಯ ಗಮನಕ್ಕೆ ತಂದು ನಾನು ಮಾಡುತ್ತೇನೆ ಎಂದು ಸಬ್ ಇನ್ಸ್‌ಪೆಕ್ಟರ್ ಆನಂದ್ ಹೇಳಿದಾಗ, ಉಳಿದ ಪೊಲೀಸರು ತುದಿಗಾಲಲ್ಲಿ ನಿಂತರು. ನಮಗೆ ಪಾರ್ಟಿ ಕೊಡಬೇಕು ಎಂದು ಒಬ್ಬ ಆತುರಪಟ್ಟು ಕೇಳಿದ. ಬಹುಮಾನವನ್ನು ಸಮಾನವಾಗಿ ಹಂಚಬೇಕು ಎಂದು ಮತ್ತೊಬ್ಬ ಹೇಳಿದ. ಮುಂದಿನ ಬಾರಿಯ ಪ್ರಶಸ್ತಿಗೆ ನನ್ನನ್ನು ರೆಕಮೆಂಡ್ ಮಾಡಬೇಕು ಎಂದು ಇನ್ನೊಬ್ಬ ಹೇಳಿದ. ಹೀಗೆ ಒಬ್ಬೊಬ್ಬರು ಒಂದೊಂದು ಆಸೆ ವ್ಯಕ್ತಪಡಿಸಿದರು. ಸಬ್ ಇನ್ಸ್‌ಪೆಕ್ಟರ್ ಎಲ್ಲರ ಮಾತಿಗೂ ತಲೆ ಅಲ್ಲಾಡಿಸಿ, ನಿಮ್ಮ ಅಭಿಲಾಷೆಯಂತೆ ಆಗಲಿ ಎಂದು ನುಡಿದರು.



ಆ ಮನೆಯ ಹೊರಗಡೆ ವಿದ್ಯುತ್‌ನ ಬೆಳಕು ಕಾಣಿಸಲಿಲ್ಲ. ಆದರೂ ನಾಲ್ವರು ಮೆಲ್ಲನೆ ಅಂಗಳ ತುಳಿದರು. ಅದ್ಯಾವುದೋ ಮೂಲೆಯಲ್ಲಿದ್ದ ನಾಯಿಯೊಂದು ಬೊಗಳಿತು. ''ಥತ್... ನಾಯಿ ಕಂಡರೆ ಒಂದು ಮಾರು ದೂರ ಹೋಗುವ ಈ ಬ್ಯಾರಿಗಳ ಮನೆಯಲ್ಲಿ ನಾಯಿಯಾ ?'' ಎಂದು ಒಬ್ಬ ಪೊಲೀಸ್ ಉಸುರಿದ. ಹಾಗೇ ನಾಯಿಯ ಮುಖಕ್ಕೆ ಟಾರ್ಚ್ ಲೈಟ್ ಹಾಕಿದ. ನಾಯಿ ಮತ್ತೆ ಒಂದೆರಡು ಬಾರಿ ಬೊಗಳಿ ನಂತರ ಸುಮ್ಮನಾಯಿತು. ಒಬ್ಬ ಪೊಲೀಸ್ ಮೆಟ್ಟಲು ಹತ್ತಿ ಬಾಗಿಲು ಬಡಿದ. ಒಳಗಿನಿಂದ ಯಾವುದೇ ಪ್ರತಿಕ್ರಿಯೆ ಇಲ್ಲ. ಮತ್ತೊಮ್ಮೆ ಬಡಿದ. ಆವಾಗಲೂ ಸುದ್ದಿ ಇಲ್ಲ. ಅಷ್ಟರಲ್ಲಿ ಮತ್ತೊಬ್ಬ ಬೆಲ್ ಒತ್ತಿದ, ಇನ್ನೊಬ್ಬ ದಡಬಡ ಅಂತ ಬಾಗಿಲು ಬಡಿದ. ಆವಾಗ ಒಳಗಿನಿಂದ ಒಂದು ಶಬ್ದ ಕೇಳಿಸಿತು. ಅದು ಮುದುಕನದ್ದು ಎಂದು ತಿಳಿದುಕೊಂಡರು. ಮತ್ತೊಮ್ಮೆ ಬಾಗಿಲು ಬಡಿಯಲಾಯಿತು. ''ಯಾರದು ?'' ಎಂಬ ಮುದುಕನ ಧ್ವನಿ ಕೇಳಿಬಂತು. ಸಬ್ ಇನ್ಸ್‌ಪೆಕ್ಟರ್ ಮೆಲ್ಲನೆ ಕಿಟಕಿಯ ಬಾಗಿಲು ಸರಿಸಿ, ''ನಾವು... ಬಾಗಿಲು ತೆಗೆಯಿರಿ'' ಎಂದು ಹೇಳಿದೊಡನೆ, ಒಳಗಿನಿಂದ ಬಲ್ಬ್ ಉರಿಯುವುದು ಕಾಣಿಸಿತು. ಯಾರಿಗೋ ಎಚ್ಚರವಾಗಿರಬೇಕು. ಅದು ಆ ರೌಡಿ ಇಲ್ಯಾಸನೇ ಯಾಕೆ ಆಗಿರಬಾರದು. ನಾವು ಬಂದಿದ್ದನ್ನು ಗ್ರಹಿಸಿ ಹಿಂಬಾಗಿಲ ಮೂಲಕ ಓಡಿಹೋದರೆ ಎಂದು

ಆತಂಕಿಸಿದ ಸಬ್‌ಇನ್ಸ್‌ಪೆಕ್ಟರ್ ಇಬ್ಬರನ್ನು ಮನೆಯ ಹಿಂಭಾಗಕ್ಕೆ ಕಳುಹಿಸಿದರು.

''ಬಾಗಿಲು ತೆಗೆಯಿರಿ'' ಧ್ವನಿಯಲ್ಲಿ ಗಡುಸಿತ್ತು.

''ಯಾರು ನೀವು ?'' ಒಳಗಿನಿಂದ ಮಧ್ಯ ವಯಸ್ಕ ವ್ಯಕ್ತಿಯ ಪ್ರಶ್ನೆ.

''ನಾವು ಪೊಲೀಸರು. ಬಾಗಿಲು ತೆಗೆಯಿರಿ.''

ತನ್ನ ಮಗ ಇಲ್ಯಾಸ್‌ನನ್ನೇ ಹುಡುಕಿಕೊಂಡು ಬಂದಿದ್ದಾರೆ ಎಂದು ಭಾವಿಸಿದ ರಹಿಮಾನರು, ''ಯಾಕೆ, ಈ ರಾತ್ರಿ ಬಂದಿದ್ದೀರಿ, ಏನಾಯಿತು ಈಗ ?'' ಎಂದು ಕೇಳಿದರು.

''ಅದೆಲ್ಲಾ ಮತ್ತೆ ಹೇಳ್ತೇವೆ, ಮೊದಲು ಬಾಗಿಲು ತೆಗೆಯಿರಿ.''

''ನೀವು ಪೊಲೀಸರು ಅಂತ ನಂಬುವುದು ಹೇಗೆ ?''

''ಅಧಿಕಪ್ರಸಂಗ ಬೇಡ.''

''ಬಾಗಿಲು ತೆಗೆ... ಇಲ್ಲದಿದ್ದರೆ ಬಾಗಿಲು ಮುರಿದು ನುಗ್ಗಬೇಕಾದೀತು.'' ಪೊಲೀಸರು ಏಕವಚನ ಪ್ರಯೋಗಿಸಿದರು.

''ಇಲ್ಲ, ನಮಗೆ ಹೆದರಿಕೆಯಾಗುತ್ತಿದೆ. ನೀವು ಇಲ್ಯಾಸ್‌ನನ್ನು ಹುಡುಕಿಕೊಂಡು ಬಂದಿದ್ದೀರಿ. ಆದರೆ ಅವ ಇಲ್ಲಿ ಇಲ್ಲ.''

''ಇಲ್ಲ ಅಂತ ನೀವು ಹೇಳಿದ ತಕ್ಷಣ ಹೋಗಲು ನಾವು ರೆಡಿಯಾಗಿಲ್ಲ. ಒಳಗೆ ಬಂದು ಶೋಧಿಸಬೇಕು.''

''ಇಲ್ಲಿ ಮಹಿಳೆಯರಿದ್ದಾರೆ. ಮಹಿಳಾ ಪೊಲೀಸರು ಇದ್ದಾರಾ ?''

''ಹೇಯ್... ಬಾಗಿಲು ತೆಗೆಯುತ್ತೀಯಾ... ಅಥವಾ'' ಎನ್ನುತ್ತಾ ಒಬ್ಬ ಬಾಗಿಲಿಗೆ ತನ್ನ ಬೂಟುಗಾಲಿನಿಂದ ಒದ್ದ. 'ಲಟಕ್ಕ' ಅಂತ ಅದು ತುಂಡಾಗಿ ಬಿತ್ತು. ಸಬ್ ಇನ್ಸ್‌ಪೆಕ್ಟರ್ ಸಹಿತ ನಾಲ್ಕು ಮಂದಿ ಒಳಗೆ ನುಗ್ಗಿದರು. ಮೊದಲು ರಹಿಮಾನ್‌ರ ಕೆನ್ನೆಗೆ ಒಂದೇಟು ಕೊಟ್ಟ ಸಬ್ ಇನ್ಸ್‌ಪೆಕ್ಟರ್ ''ಭಾರೀ ಕಾನೂನು ಮಾತನಾಡುತ್ತೀಯಾ ?'' ಎಂದು ಕೇಳಿದರು. ಆ ಹೊಡೆತಕ್ಕೆ ಅವರಿಗೆ ಸ್ಮೃತಿ ತಪ್ಪಿದಂತಾಯಿತು. ಅಯ್ಯೋ... ಎಂದು ನೋವಿನಿಂದ ಚೀರಿದರು. ಒಬ್ಬ ಪೊಲೀಸ್, ರಹಿಮಾನ್ ಮತ್ತವರ ಹೆಂಡತಿ ಐಸಮ್ಮ, ಮಗಳು ತಾಹಿರಾಳನ್ನು ಒಂದು ಕೋಣೆಯೊಳಗೆ ಕೂಡಿಹಾಕಿದ. ಈ ಅನಿರೀಕ್ಷಿತ ದಾಳಿಯಿಂದ ಕಂಗಾಲಾದ ರಹಿಮಾನ್‌ರ ವೃದ್ಧ ತಂದೆ ''ಬಿಟ್ಟುಬಿಡಿ, ಬಿಟ್ಟುಬಿಡಿ... ಯಾರು ನೀವು ?'' ಎಂದು ಕೇಳತೊಡಗಿದರು. ಆದರೆ, ಕ್ಷಣಾರ್ಧದಲ್ಲಿ ಅಲ್ಲಿ ಆಗಬಾರದ್ದು ಆಗಿಹೋಯಿತು. ಶೋಧದ ನೆಪದಲ್ಲಿ ಅವರು ಮಾಡಬಾರದ್ದು ಮಾಡಿದರು. ಮನೆಯ ಸಾಮಗ್ರಿಗಳನ್ನು ಚೆಲ್ಲಾಪಿಲ್ಲಿ ಮಾಡಿದರು. ಕೆಲವು ಬೆಲೆಬಾಳುವ ಸೊತ್ತುಗಳನ್ನು ಕೈಗೆತ್ತಿಕೊಂಡರು. ಅದಷ್ಟೇ ಅಲ್ಲ, ರಹಿಮಾನ್‌ರಿಗೆ ಚೆನ್ನಾಗಿ ಬಾರಿಸಿದರೆ, ಅವರ ಹೆಂಡತಿ ಐಸಮ್ಮರ ಕುಪ್ಪಸ, ಸೀರೆಯನ್ನು ಹರಿಯುವ ಪ್ರಯತ್ನ ಮಾಡಿದರು. ಒಬ್ಬ ಪೊಲೀಸಂತೂ ಎಲ್ಲೆಮೀರಿ ವರ್ತಿಸತೊಡಗಿದ. ತಾಹಿರಾಳನ್ನು ಅಪ್ಪಿಹಿಡಿದು ಆಕೆಯ ಅಂಗಾಂಗಗಳ ಮೇಲೆ ಕೈಹಾಕಿ ವಿಕೃತ ಸುಖ ಕಂಡ. ಮಗಳ ಮೇಲೆ ಕೈಹಾಕುವುದನ್ನು ರಹಿಮಾನ್, ಐಸಮ್ಮರಿಗೆ ಸಹಿಸಲು ಆಗಲಿಲ್ಲ. ಅವರು, ಮಗಳನ್ನು ರಕ್ಷಿಸುವ ಸಲುವಾಗಿ ''ಅವಳನ್ನು ಬಿಟ್ಟುಬಿಡಿ... ಈವತ್ತಷ್ಟೇ ಅವಳಿಗೆ ಮದುವೆ ನಿಶ್ಚಯವಾಯಿತು. ಅವಳ ಬಾಳು ಹಾಳು ಮಾಡಬೇಡಿ. ಅವಳ ಮಾನ ಕಾಪಾಡಿ'' ಎಂದು ಗೋಗರೆದು ಪೊಲೀಸನನ್ನು ದೂಡುವ ಪ್ರಯತ್ನ ನಡೆಸಿದರು. ಅದರಿಂದ ಸಿಟ್ಟಿಗೆದ್ದ ಆ ಪೊಲೀಸ್ ರಹಿಮಾನ್ ಮತ್ತು ಐಸಮ್ಮರ ಮೇಲೆ ಎರಗಿದ. ತಂದೆಯ ಮೇಲೆ ಹಲ್ಲೆಯಾಗುತ್ತಿರುವುದನ್ನು ತಾಹಿರಾಳಿಗೆ ಸಹಿಸಲು ಆಗಲಿಲ್ಲ. ಅವಳು ಸಹಾಯಕ್ಕಾಗಿ ಜೋರಾಗಿ ಕಿರುಚಿದಳು. ಆ ಕಿರುಚಾಟಕ್ಕೆ ಸಬ್ ಇನ್ಸ್‌ಪೆಕ್ಟರ್ ಆನಂದ್ ಹೆದರಿದರು. ಯಾರಾದರು ಓಡಿಬಂದರೆ, ಈ ದೃಶ್ಯ ಕಂಡು ನಮ್ಮ ಮೇಲೆ ಕೈ ಎತ್ತಿಯಾರು ಎಂದು ಭಾವಿಸಿ ರಾಕ್ಷಸನಂತೆ ವರ್ತಿಸುವ ಪೊಲೀಸ್‌ನನ್ನು ಕರೆದು ಅವರನ್ನು ಬಿಟ್ಟುಬಿಡು ಎಂದು ಆಜ್ಞಾಪಿಸಿದರು. ಆದರೆ ಆ ಪೊಲೀಸ್‌ನ ಮದ ಇಳಿಯಲಿಲ್ಲ. ಅವ ಸಬ್ ಇನ್ಸ್‌ಪೆಕ್ಟರ್‌ನ ಮಾತು ಮೀರಿ ತಾಹಿರಾಳ ಹೆತ್ತವರಿಗೆ ಮತ್ತೆ ಹೊಡೆದನಲ್ಲದೆ, ಅವಳ ಮೈಮೇಲೆ ಕೈಹಾಕುವ ಪ್ರಯತ್ನ ನಡೆಸಿದ. ತಾಹಿರಾಳ ಮುಗ್ಧ ಮುಖವನ್ನು ಕಂಡು ಆ ತಂಡದಲ್ಲಿದ್ದ ಪೊಲೀಸ್‌ಗೆ ಎನನ್ನಿಸಿತ್ತೋ ಏನೋ...? ಆಕೆಯನ್ನು ಒಮ್ಮೆ ಇಡಿಯಾಗಿ ನೋಡುತ್ತಾ... ಸಿಕ್ಕಿದ ಅವಕಾಶವನ್ನು ಕಳೆದುಕೊಳ್ಳಲು ತಯಾರಿಲ್ಲವೆಂಬಂತೆ ವರ್ತಿಸುವ ಪೊಲೀಸನ ಬೆನ್ನಿಗೊಂದು ಗುದ್ದಿ ''ಹಲ್ಕಟ್ ನನ್ನ ಮಗನೇ.. ಬಿಟ್ಟುಬಿಡು'' ಎಂದು ಅಬ್ಬರಿಸಿದ. ಸಹೋದ್ಯೋಗಿ ಗೆಳೆಯ ಸಂದೀಪ್ ತನಗೆ ಹೊಡೆದುದು ವಿಕೃತ ಪೊಲೀಸ್‌ನಿಗೆ ಆಶ್ಚರ್ಯವಾಯಿತು. ಅವನು ತಿರುಗಿ ನೋಡಿದಾಗ, ''ಬಿಟ್ಟುಬಿಡು ಆ ಹುಡುಗಿಯನ್ನು. ನೀನು ಪೊಲೀಸೋ, ಅಲ್ಲೋ ರಾಕ್ಷಸನೋ... ನಿನಗೆ ಅಕ್ಕ ತಂಗಿ ಇಲ್ಲವಾ ?'' ಎಂದು ಸಂದೀಪ್ ಕೇಳಿದ.

ಈ ಅನಿರೀಕ್ಷಿತ ಮಾತಿನಿಂದ ತಾಹಿರಾಳಿಗೆ ಹೋದ ಜೀವ ಬಂದಂತಾಯಿತು. ತನ್ನ ರಕ್ಷಣೆಗೆ ಪೊಲೀಸರಲ್ಲೇ ಒಬ್ಬ ಇದ್ದುದು ಅವಳಿಗೆ ನಂಬಲಿಕ್ಕೆ ಆಗಲಿಲ್ಲ.

''ಇಲ್ಯಾಸ್ ಎಲ್ಲಿ? ನಿನ್ನೆ ಬಂದಿದ್ದನಲ್ಲ, ಯಾವಾಗ ಹೋದ ? ನಿನ್ನ ಮಗಳ ಮದುವೆಗೆ ಎಷ್ಟು ಹಣ ಕೊಟ್ಟ?'' ಎಂದು ಸಬ್ ಇನ್ಸ್‌ಪೆಕ್ಟರ್ ಆನಂದ್ ಅಬ್ಬರಿಸಿ ಮತ್ತೊಮ್ಮೆ ಮನೆಯನ್ನು ಜಾಲಾಡಿ ಹೊರಗಿಳಿದರು. ಒಬ್ಬ ಪುಕ್ಕಟೆಯಾಗಿ ಲೈಂಗಿಕ ತೃಪ್ತಿ ಸಿಕ್ಕಿದ ಖುಷಿಯಲ್ಲಿ ತೇಲಾಡುತ್ತಿದ್ದರೆ, ಉಳಿದವರು ಬೆಲೆಬಾಳುವ ಸೊತ್ತು ಸಿಕ್ಕಿದ ಖುಷಿಯಲ್ಲಿದ್ದರು. ಆದರೆ ಸಂದೀಪ್‌ಗೆ ಯಾಕೋ ಆ ಮನೆಗೆ ನುಗ್ಗಿ ವರ್ತಿಸಿದ ರೀತಿ ಸರಿ ಕಾಣಲಿಲ್ಲ. ಆತನ ತಲೆ ಗಿರ್ರನೆ ತಿರುಗತೊಡಗಿತು.

ಸುಮ್ಮನೆ ನಡೆದುಕೊಂಡು ಹೋಗುವಾಗಲೂ ಯಾರೂ ಮಾತನಾಡಲಿಲ್ಲ. ತನಗೆ ಈ ಬಾರಿ ಪ್ರಶಸ್ತಿ ಕೈ ತಪ್ಪಲಿದೆ ಎಂದು ಆನಂದ್ ತನ್ನಲ್ಲೇ ಹೇಳತೊಡಗಿದರು. ''ಸಂದೀಪ್... ನೀನ್ಯಾಕೆ ನನ್ನ ಬೆನ್ನಿಗೆ ಗುದ್ದಿದೆ ?'' – ವಿಕೃತ ಲೈಂಗಿಕ ಸುಖ ಪಡೆದ ಪೊಲೀಸ್ ಕೇಳಬೇಕೆಂದು ಬಾಯ್ತೆರೆದ. ಆದರೆ ಅವನಿಗೆ ಧೈರ್ಯ ಸಾಕಾಗಲಿಲ್ಲ. ಸ್ವಲ್ಪದರಲ್ಲೇ ಜೀಪು ಅಲ್ಲಿಂದ ಕಣ್ಮರೆಯಾಯಿತು.

ಪೊಲೀಸರ ಏಟು, ಅನಿರೀಕ್ಷಿತ ದಾಳಿಯಿಂದ ಅವರೆಲ್ಲರೂ ಮಾನಸಿಕ ಆಘಾತಕ್ಕೆ ಒಳಗಾಗಿದ್ದರು. ಮಗಳ ಜತೆ ಆ ಪೊಲೀಸ್ ವರ್ತಿಸಿದ್ದು ಅವರ ಮನಸ್ಸಿನಾಳಕ್ಕೆ ಹೊಕ್ಕಿತು. ಆ ರಾತ್ರಿ ಅವರು ನಿದ್ದೆ ಮಾಡಲಿಲ್ಲ. ಎಲ್ಲರ ಮೈ ಕೈ ನೋಯುತ್ತಿತ್ತು. ಎದ್ದು ನಿಲ್ಲಲೂ ಆಗದ ದುಃಸ್ಥಿತಿ. ತಾನು ತೊಟ್ಟಿದ್ದ ಬಟ್ಟೆಯ ಮೇಲೆ ಆ ಪೊಲೀಸನ ಬಿಳಿ ರಕ್ತ ಕಾಣಿಸಿದಾಗ ತಾಹಿರಾ ಸಂಪೂರ್ಣ ಅಧೀರಳಾದಳು. ''ಮೋಳೇ... ನಿನ್ನ ಅಣ್ಣನನ್ನು ಇದೇ ಪೊಲೀಸರು ಅಪರಾಧಿಯಾಗಿ ಚಿತ್ರಿಸಿದರು. ಎಲ್ಲೋ ಏನೋ ಆದರೆ, ಹೀಗೆ ಬಂದು ದಾಂಧಲೆ ಮಾಡುತ್ತಿದ್ದರು. ಆದರೆ ಈ ಬಾರಿ ಮಾತ್ರ ನಾವು ಊಹಿಸದ್ದು ನಡೆದಿದೆ. ಅದನ್ನು ನೀನು ಮನಸ್ಸಿಗೆ ಹಚ್ಚಬೇಡ. ನಿನ್ನ ಮದುವೆ ಆದಷ್ಟು ಬೇಗ ಮಾಡಿ ಮುಗಿಸುವೆ. ನೀನು ಅಲ್ಲಿ ಸುಖವಾಗಿರು. ರಾತ್ರಿ ನಡೆದ ಘಟನೆಯನ್ನು ನೀನು ಯಾರಲ್ಲೂ ಬಾಯಿಬಿಡಬೇಡ. ಅದು ನಿನ್ನ ಹಾಗೂ ನಮ್ಮ ಮರ್ಯಾದೆಯ ಪ್ರಶ್ನೆ'' ಎಂದು ರಹಿಮಾನ್ ಹೇಳಿ, ಮಗಳನ್ನು ಸಂತೈಸಿದರು. ತಾಹಿರಾ ಮಾತನಾಡಲಿಲ್ಲ. ನೋವು ತಾಳಲಾರದೆ ಕಣ್ಣೀರಿಳಿಸತೊಡಗಿದಳು.

ಸೂರ್ಯನ ಬೆಳಕು ಬಿದ್ದ ಮೇಲೆ ರಾತ್ರಿ ಪೊಲೀಸರು ಆ ಮನೆಗೆ ದಾಳಿ ನಡೆಸಿ, ವಸ್ತುಗಳನ್ನು ಚೆಲ್ಲಾಪಿಲ್ಲಿ ಮಾಡಿ, ಬೆಲೆಬಾಳುವ ಸೊತ್ತುಗಳನ್ನು ದೋಚಿದ್ದು ಅಕ್ಕಪಕ್ಕದವರ ಕಿವಿಗೆ ಬಿತ್ತು. ಅವರು ಓಡೋಡಿ ಬಂದು ಸಮಾಧಾನಪಡಿಸಿದರು. ಅನುಕಂಪದ ಮಾತುಗಳನ್ನಾಡಿದರು.

ತನ್ಮಧ್ಯೆ ಕೆಲವು ಯುವಕರು, ಪೊಲೀಸರ ಈ ರಾಕ್ಷಸಿ ವರ್ತನೆಯನ್ನು ಪತ್ರಿಕೆಯವರ ಗಮನಕ್ಕೆ ತರೋಣ, ಎಸ್‌ಪಿಗೂ ತಿಳಿಸೋಣ ಎಂದರು. ಆದರೆ ಮಗಳ ಹಿತದೃಷ್ಟಿಯಿಂದ ಅದ್ಯಾವುದೂ ಸುದ್ದಿಯಾಗುವುದು ರಹಿಮಾನ್‌ರಿಗೆ ಇಷ್ಟವಿಲ್ಲ. ಅವರು ಆದದ್ದಾಗಲಿ, ಈಗ ಅದನ್ನು ದೊಡ್ಡದು ಮಾಡಿದರೆ, ಪೊಲೀಸರು ಮತ್ತೆ ಬಂದು ಏನೇನೋ ಮಾಡಿಯಾರು ಎಂದು ಹೆದರಿದರು. ಆದರೆ ಯುವಕರು ಅವರಿಗೆ ಧೈರ್ಯನೀಡಿ ಏನಿದ್ದರೂ ನಾವಿದ್ದೇವೆ ಎಂದು ಆಶ್ವಾಸನೆ ನೀಡಿದರು.

ಒಬ್ಬ ಯುವಕ ಅಲ್ಲಿಂದಲೇ ಪತ್ರಿಕೆಗಳ ಕಚೇರಿಗೆ ದೂರವಾಣಿ ಮಾಡಿ

''ಪೊಲೀಸರಿಂದ ದೌರ್ಜನ್ಯವಾಗಿದೆ. ಬಂದು ಫೋಟೋ ತೆಗೆಯಿರಿ. ಸುದ್ದಿಮಾಡಿ'' ಎಂದು ವಿನಂತಿಸಿದ. ಇನ್ನೊಬ್ಬ ಎಸ್‌ಪಿಗೆ ದೂರು ಅರ್ಜಿ ಬರೆಯತೊಡಗಿದ.

ಆದರೆ ಯಾವೊಂದು ಪತ್ರಿಕೆಯವರೂ ಅತ್ತ ಸುಳಿಯಲಿಲ್ಲ. ಕಾದು ಕಾದು ಸುಸ್ತಾದ ಯುವಕರು ತಾವೇ ಫೋಟೋ ತೆಗೆದು ಪ್ರಿಂಟ್ ಹಾಕಿಸಿ, ಎಸ್‌ಪಿಗೆ ದೂರು ಕೊಟ್ಟರು. ಪೊಲೀಸರು ನಡೆಸಿದ ದೌರ್ಜನ್ಯದ ಫೋಟೋವನ್ನು ಅದರ ಜತೆ ಲಗತ್ತಿಸಿದರು. ಅಲ್ಲದೆ ಪತ್ರಿಕೆಗಳ ಕಚೇರಿಗೆ ತೆರಳಿ ಫೋಟೋ ಮತ್ತು ಎಸ್‌ಪಿಗೆ ನೀಡಿದ ದೂರಿನ ಪ್ರತಿಯನ್ನೂ ಕೊಟ್ಟರು. ಅದನ್ನು ಕೈಗೆತ್ತಿಕೊಂಡ ಪತ್ರಕರ್ತರು ''ಏನಾಯಿತು, ಹೇಗಾಯಿತು ?'' ಎಂದು ಕೇಳುವ ವ್ಯವಧಾನ ಮಾಡಲಿಲ್ಲ. ನೋಡುವ ಎಂದಷ್ಟೇ ಹೇಳಿ ಸುಮ್ಮನಾದರು. ಒಬ್ಬ ಪತ್ರಕರ್ತನಂತೂ ''ಮತ್ತೆ ಪೊಲೀಸರು ಹಾಗೆ ಮಾಡದೆ ಏನು ಮಾಡಬೇಕಾಗಿತ್ತು? ನಿಮ್ಮನ್ನು ಹೊತ್ತು ತಿರುಗಬೇಕಾಗಿತ್ತಾ ?'' ಎಂದು ಕೇಳಿ ತನ್ನ ಮನಃಸ್ಥಿತಿಯನ್ನು ಪ್ರದರ್ಶಿಸಿದ. ಅದನ್ನು ಅರ್ಥಮಾಡಿಕೊಂಡ ಯುವಕರು, ''ನಮ್ಮವರ ಕೈಗೂ ಒಂದು ಮೀಡಿಯಾ ಬೇಕು'' ಎಂದು ಹೇಳುತ್ತಲೇ ಮನೆಯತ್ತ ಹೆಜ್ಜೆ ಹಾಕಿದರು. ಮರುದಿನ ಒಂದೆರಡು ಪತ್ರಿಕೆಗಳ ಮೂಲೆಯಲ್ಲಿ ಒಂದೆರಡು ಪ್ಯಾರಾದ ಸುದ್ದಿ ಪ್ರಕಟವಾಗಿತ್ತು. ಆದರೆ ಒಂದು ಪತ್ರಿಕೆಯಲ್ಲಂತೂ ವಿಚಿತ್ರ ಸುದ್ದಿ ಪ್ರಕಟವಾಗಿತ್ತು. 'ಕುಖ್ಯಾತ ರೌಡಿ ಇಲ್ಯಾಸ್‌ನ ಮನೆಗೆ ಪೊಲೀಸರ ದಾಳಿ' ಎಂಬ ತಲೆಬರಹ ಕೊಟ್ಟು, ಪೊಲೀಸರು ದಾಳಿ ಮಾಡಿದಾಗ ಆರೋಪಿ ಪರಾರಿಯಾಗಿದ್ದಾನೆ. ಪೊಲೀಸರು ಮನೆಯವರನ್ನು ತರಾಟೆಗೆ ತೆಗೆದುಕೊಂಡದ್ದರಿಂದ ಹತಾಶರಾದ ಮನೆಯವರು ಇದೀಗ ಮನೆಯ ಸಾಮಗ್ರಿಗಳನ್ನು ತಾವೇ ಚೆಲ್ಲಾಪಿಲ್ಲಿಯಾಗಿ ಮಾಡಿ ಪೊಲೀಸರ ಮೇಲೆ ಗೂಬೆ ಕೂರಿಸಿದ್ದಾರೆ ಎಂದು ವರದಿ ಮಾಡಿತ್ತು. ಆ ವರದಿ ಓದಿದ ಯುವಕರು ಮತ್ತೆ ಆ ಪತ್ರಿಕೆಯ ಕಚೇರಿಗೆ ತೆರಳಿ ಯಾಕೆ ಈ ರೀತಿ ಬರೆದಿರಿ ? ಎಂದು ಕೇಳಬೇಕು ಎಂದು ಭಾವಿಸಿದರೂ ರಹಿಮಾನ್‌ರ ವಿನಂತಿ ಮೇರೆಗೆ ಸುಮ್ಮನಾದರು.

* * *

ಗೋಣಿ ಚೀಲದ ವ್ಯವಹಾರ ಮಾಡುವ ರಹಿಮಾನ್‌ರಿಗೆ ಹುಟ್ಟಿದ ಏಕೈಕ ಮಗ ಇಲ್ಯಾಸ್ ಪೊಲೀಸ್ ಠಾಣೆಯಲ್ಲಿ ತನ್ನ ಹೆಸರನ್ನು ಎಳೆಯ ಪ್ರಾಯದಲ್ಲೇ ದಾಖಲಿಸಿ ಕೊಳ್ಳುತ್ತಾನೆ ಎಂದು ಯಾರೂ ಭಾವಿಸಿರಲಿಲ್ಲ. ನೋಡಲು ತುಂಬಾ ಚೆಂದ ಇದ್ದ ಈತ ಕಲಿಯುವುದರಲ್ಲಿ ಹುಷಾರಿದ್ದ. ಆದರೆ ಕೆಟ್ಟವರ ಸಹವಾಸಕ್ಕೆ ಬಿದ್ದು ಕೆಲವೊಂದು ಅಪರಾಧ ಗಳಲ್ಲಿ ಭಾಗಿಯಾದ. ಇದನ್ನು ತಿಳಿದ ರಹಿಮಾನರು ಮಗನಿಗೆ ಬುದ್ಧಿ ಹೇಳಿದರೂ ಪ್ರಯೋಜನವಾಗಲಿಲ್ಲ. ಅವ ತನಗೆ ಎದುರಾಡತೊಡಗಿದಮೇಲಂತೂ ರಹಿಮಾನರು ಸಂಪೂರ್ಣ ಅಧೀರರಾದರು. ಕೊನೆಗೆ ಉಪಾಯವಿಲ್ಲದೆ, ಹತ್ತಿಪ್ಪತ್ತು ಕಿ.ಮೀ. ದೂರದಲ್ಲಿರುವ ಅಜ್ಜಿಯ ಮನೆಯಲ್ಲಿ ಉಳಕೊಳ್ಳುವ ವ್ಯವಸ್ಥೆ ಮಾಡಿದರು. ಅಲ್ಲಿ ಸೋದರ ಮಾವಂದಿರ ಮಾತಿಗೆ ತಲೆತೂಗಿಯಾನು ಎಂದು ಅವರು ಭಾವಿಸಿದ್ದೂ ತಪ್ಪಾಯಿತು. ಯಾಕೆಂದರೆ, ಅವನ ಗೆಳೆಯರು ಅಲ್ಲಿಗೂ ತೆರಳಿ ಅವನ ಸಂಪರ್ಕ ಸಾಧಿಸಿದರಲ್ಲದೆ, ತಮ್ಮ ದುಷ್ಕೃತ್ಯದಲ್ಲಿ ತೊಡಗಿಕೊಳ್ಳುವಂತೆ ಮಾಡಿದರು.

ಅವತ್ತೊಂದು ದಿನ ಆತ ಬಸ್‌ನಲ್ಲಿ ಪ್ರಯಾಣಿಸುತ್ತಿದ್ದ. ಅದೇ ಬಸ್‌ಗೆ ಮಗುವನ್ನು ಹೆಗಲಿಗೇರಿಸಿಕೊಂಡು ಮಹಿಳೆಯೊಬ್ಬರು ಹತ್ತಿದರು. ಇಲ್ಯಾಸ್ ಎದ್ದು ಸೀಟು ಬಿಟ್ಟು ಕೊಡಲು ಹಿಂದೆ ಮುಂದೆ ನೋಡಿದ. ಆತನ ಮನದ ಇಂಗಿತವನ್ನು ಅರಿತ ಆ ಮಹಿಳೆ ಮಗುವನ್ನೇ ಇಲ್ಯಾಸ್‌ನ ಕೈಗೆ ಕೊಟ್ಟರು. ನಾಲ್ಕು ವರ್ಷದ ಆ ಮಗು ಅಪರಿಚಿತನ ಮಡಿಲಲ್ಲಿ ಹಾಯಾಗಿ ನಿದ್ದೆಮಾಡಿತು. ಯಾವುದೇ ರಂಪಾಟ ಮಾಡದೆ, ನಿದ್ದೆಹೋದ ಮಗುವಿನ ಚೆಂದದ ಮುಖಕ್ಕೆ ಇಲ್ಯಾಸ್ ಪ್ರೀತಿಯ ಮುತ್ತಿಟ್ಟ ನನಗೂ ಇಂಥದ್ದೇ ಮಗು ಬೇಕು, ಮದುವೆಯಾಗಬೇಕು ಎಂದು ಹಂಬಲಿಸಿದ. ಆತ ಆ ಮಗುವಿನ ತಾಯಿಯನ್ನು ನೋಡಿದ. ಇನ್ನೂ ಇಪ್ಪತ್ತೈದು ದಾಟದ ಆ ಮಹಿಳೆ ಒಂಟಿಯಾಗಿ ಎಲ್ಲಿಗೆ ಹೋಗುತ್ತಾಳೆ ? ಗಂಡ ಎಲ್ಲಿ ? ಏನು ಮಾಡುತ್ತಾನೆ ? ಎಂದು ತನ್ನಲ್ಲೇ ಪ್ರಶ್ನಿಸಿ, 'ಛೆ... ನನಗೆ ಯಾಕೆ ಆಕೆಯ ಖಾಸಗಿ ಸಂಗತಿ ?' ಎನ್ನುತ್ತಾ ಮತ್ತೊಮ್ಮೆ ಆಕೆಯನ್ನು ಕದ್ದು ನೋಡಿದ.

ಆದರೆ ರಾತ್ರಿ ಪೊಲೀಸರು ಮನೆಗೆ ಕಾಲಿಟ್ಟಾಗ ಇಲ್ಯಾಸ್‌ಗೆ ಆಶ್ಚರ್ಯವಾಗಿತ್ತು. ಅವನಿಗೆ ಏನು ಹೇಳಬೇಕು ಎಂದು ತೋಚಲಿಲ್ಲ. ''ಕಳ್ಳ... ಆ ಮಗುವಿನ ಕತ್ತಿನ ಸರ ಕದ್ದು, ಈಗ ಏನೂ ಆಗಿಲ್ಲವೆಂಬಂತೆ ನಟಿಸುತ್ತೀಯಾ ?'' ಎಂದು ಪೊಲೀಸರು ಕೇಳಿ ಹೊಡೆಯ ತೊಡಗಿದರು. ಆವಾಗ ಮನೆಯಲ್ಲಿ ಸೋದರಮಾವಂದಿರು ಇರಲಿಲ್ಲ. ಮಹಿಳೆಯರ ಕೂಗಿಗೆ ಪೊಲೀಸರ ಮನ ಕರಗಲಿಲ್ಲ. ಪೊಲೀಸರು ಇಲ್ಯಾಸ್‌ನನ್ನು ಎಳೆದೊಯ್ದು ಜೀಪಲ್ಲಿ ಕುಳ್ಳಿರಿಸಿದರು. ಸಂಜೆ ಸೋದರಮಾವಂದಿರು ಬಂದಾಗ, ಇಲ್ಯಾಸ್‌ನನ್ನು ಪೊಲೀಸರು ಎಳೆದುಕೊಂಡುಹೋದುದು ಗೊತ್ತಾಯಿತು. ಅವರು ಒಂದಿಬ್ಬರು ಪುಢಾರಿಗಳನ್ನು ಠಾಣೆಗೆ ಕರೆದುಕೊಂಡುಹೋದರು. ''ಇಲ್ಲ, ಬಿಡಲಿಕ್ಕೆ ಸಾಧ್ಯವಿಲ್ಲ. ಇವ ಸರ ಕದ್ದಿದ್ದಾನೆ. ಆ ಮಹಿಳೆಯ ದೂರು ಇದೆ'' ಎಂದೆಲ್ಲಾ ಪೊಲೀಸರು ಹೇಳಿದರು. ಇಡೀ ರಾತ್ರಿ ಪ್ರಯತ್ನ ನಡೆಸಿದರೂ ಪ್ರಯೋಜನವಾಗಲಿಲ್ಲ. ಮರುದಿನ ಪತ್ರಿಕೆಯಲ್ಲಿ 'ಕುಖ್ಯಾತ ಸರಗಳ್ಳನ ಸೆರೆ' ಎಂಬ ತಲೆಬರಹ, ಸುದ್ದಿ, ಕೈಯಲ್ಲಿ ಸ್ಲೇಟು ಹಿಡಿದ ಫೋಟೋ ಕಂಡಾಗ ಅವನ ಮಾವಂದಿರು ನಾಚಿಕೆಯಿಂದ ತಲೆತಗ್ಗಿಸಿದರು. ಇತ್ತ ಅವನ ತಂದೆ, ತಾಯಿ, ತಂಗಿ ಕೂಡ ಅವಮಾನದಿಂದ ಕಂಗಾಲಾಗಿ ಕೂತರು.

ಇಲ್ಯಾಸ್ ಒಂದೆರಡು ಹೊಡೆದಾಟದಲ್ಲಿ ಭಾಗಿಯಾಗಿದ್ದಾನೆಯೇ ವಿನಾ ಕಳ್ಳತನ ಮಾಡಿದವನಲ್ಲ. ಆದರೆ ಇದೀಗ ಪೊಲೀಸರು ತನ್ನನ್ನು ಕಳ್ಳನನ್ನಾಗಿ ಬಿಂಬಿಸಿದ್ದು, ಅವನ ಮನಸ್ಸನ್ನು ಘಾಸಿಗೊಳಿಸಿತು. ಕಳ್ಳತನ ಮಾಡದ ನನ್ನನ್ನು ಕಳ್ಳ ಎಂದು ಚಿತ್ರಿಸಿದ ಮೇಲೆ ಕದ್ದರೆ ಏನು ? ಎಂದು ಇಲ್ಯಾಸ್‌ನ ಮನಸ್ಸು ಯೋಚಿಸತೊಡಗಿತು. ಜೈಲಲ್ಲಿದ್ದ ಒಂದಿಬ್ಬರು ಕಳ್ಳರು ಅವನ ಯೋಚನೆಗೆ ಬೆಣ್ಣೆ ಸವರಿದರು. ಕೊನೆಗೂ ಒಂದೆರಡು ದಿನದ ನಂತರ ಯಾರೋ

## ನನ್ನ ಜಗತ್ತು



ಇದು ನನ್ನ ಜಗತ್ತು
ಜಗತ್ತಷ್ಟೇ ಅಲ್ಲ,
ನನ್ನ ಕನ್ನಡಿ
ಇಲ್ಲಿ ನನ್ನ ನಿಜ
ರೂಪ ಕಾಣಿಸುತ್ತದೆ.

ಇದು ನನ್ನ ಜಗತ್ತು
ಜಗತ್ತಷ್ಟೇ ಅಲ್ಲ
ನನ್ನ ದನಿ,
ಸುಮ್ಮನಿದ್ದರೂ ನಾನು
ತಾನು ಮಾತನಾಡುತ್ತದೆ.

ಇದು ನನ್ನ ಜಗತ್ತು
ಜಗತ್ತಷ್ಟೇ ಅಲ್ಲ,
ನನ್ನ ಪ್ರೀತಿಯ ಸ್ವರ್ಗ
ಮತ್ತು ದ್ವೇಷದ ನರಕ
ಇಲ್ಲಿ ನನ್ನೆಲ್ಲ ಬದುಕು
ಮೂಡುತ್ತದೆ.

ಇದು ನನ್ನ ಜಗತ್ತು
ಜಗತ್ತಷ್ಟೇ ಅಲ್ಲ
ನನ್ನ ವಾಸ್ತವ,
ಕನಸಿನಲ್ಲಿಯೂ ಅದು
ನೆನಪಾಗಿರುತ್ತದೆ.

ಇದು ನನ್ನ ಜಗತ್ತು
ಜಗತ್ತಷ್ಟೇ ಅಲ್ಲ
ನನ್ನ ಜೀವ, ಮರಣವಾದರೂ
ನಾನು ಅದು
ಬದುಕಿ ಉಳಿಯುತ್ತದೆ !

ಗಣೇಶ ಹೊಸ್ಮನೆ, ಜಾನ್ಮನೆ - ೫೮೧ ೩೧೫, ಶಿರಸಿ (ಉತ್ತರ ಕನ್ನಡ)

ಜಾಮೀನು ಕೊಟ್ಟರು. ಇಲ್ಯಾಸ್ ಜೈಲಿನಿಂದ ಹೊರಬಂದ. ಆದರೆ ತನ್ನ ಮನೆ ಅಥವಾ ಸೋದರಮಾವಂದಿರ ಮನೆಗೆ ಹೋಗಲಾಗದೆ ಜೈಲಲ್ಲಿ ಪರಿಚಯವಾದ ಕಳ್ಳರ ಸಹವಾಸ ಬೆಳೆಸಿಕೊಂಡ. ಅವರು ಜೈಲಿನಿಂದ ಹೊರಬಂದಮೇಲೆ ಅವರ ಜತೆಗೂಡಿ ದೊಡ್ಡ ಮಟ್ಟದ ದರೋಡೆಗೆ ಇಳಿದ. ನಂತರ ಕುಖ್ಯಾತ ದರೋಡೆಕೋರನಾದ. ಲೂಟಿ, ಕೊಲೆ ಎಂಬುದು ಅವನಿಗೆ ನೀರು ಕುಡಿದಷ್ಟು ಸುಲಭವಾಗಿತ್ತು. ಹಾಡುಹಗಲೇ ಕೊಲೆ ಮಾಡಿ, ದರೋಡೆಗೈದು ಪೊಲೀಸರಿಗೆ ಸವಾಲಾಗಿ ನಿಂತ. ಮೊದಲು ಮನೆಯವರು ಇಲ್ಯಾಸ್‌ನ ವರ್ತನೆಯಿಂದ ಕಂಗಾಲಾಗಿ ಕೂತರು, ನಂತರ ಅವನ ಪರಿವರ್ತನೆ ತಮ್ಮ ಕೈಯಿಂದಾಗದು ಎಂದು ಭಾವಿಸಿ ಅವನನ್ನು ದೂರವೇ ಇಟ್ಟಿದ್ದರು. ಆರಂಭದಲ್ಲಿ ಪೊಲೀಸರು ಬಂದು ಇಲ್ಯಾಸ್ ಎಲ್ಲಿ? ಎಂದೆಲ್ಲಾ ಕೇಳಿ ಕಿರುಕುಳ ಕೊಟ್ಟರೂ ನಂತರ ಸುಮ್ಮನಿದ್ದರು. ಆ ಮನೆಯಲ್ಲೊಂದು ಚೆಂಕಿ ಮತ್ತು ಹೂವು ಇದೆ ಎಂದು ಅಕ್ಕಪಕ್ಕದ ಕೆಲವರು ಇಲ್ಯಾಸ್ ಮತ್ತು ತಾಹಿರಾಳನ್ನು ಉದ್ದೇಶಿಸಿ ಹೇಳುತ್ತಿದ್ದುದನ್ನೂ ರಹಿಮಾನ್ ಗಮನಿಸಿದ್ದರು.

ಆದರೆ ಇತ್ತೀಚೆಗೆ ಒಂದು ದಿನ, ಇಲ್ಯಾಸ್ ಮನೆಯವರನ್ನು ದೂರವಾಣಿ ಮೂಲಕ ಸಂಪರ್ಕಿಸಿದ. ಮಗನ ಅನಿರೀಕ್ಷಿತ ಕರೆಯಿಂದ ತಂದೆ, ತಾಯಿ ಮೂಕವಿಸ್ಮಿತರಾದರು. ಅವರು ಮಗನ ಎಲ್ಲಾ ದುಷ್ಕೃತ್ಯವನ್ನು ಕ್ಷಮಿಸಿದ್ದೇವೆ ಎಂಬಂತೆ, ಊರಿಗೆ ಬಾ... ಮನುಷ್ಯನಾಗಿ ಬಾಳು ಎಂದು ಆಹ್ವಾನ ನೀಡಿದರು. ಆದರೆ ತನ್ನನ್ನು ಪೊಲೀಸರು ಹಿಡಿಯಲು ನಡೆಸುತ್ತಿರುವ ಆತುರ, ಅವರೊಳಗೆ ನಡೆಯುವ ಪೈಪೋಟಿ ಇತ್ಯಾದಿಯನ್ನೆಲ್ಲಾ ಅರಿತಿದ್ದ ಇಲ್ಯಾಸ್ ಮನೆಯವರ ಮನವಿಯನ್ನು ನಯವಾಗಿ ತಿರಸ್ಕರಿಸಿದ್ದ. ''ತಾಹಿರಾ ಹೇಗಿದ್ದಾಳೆ, ಅವಳ ಮದುವೆಗೆ ಸಿದ್ಧತೆ ನಡೆಸಿದ್ದೀರಾ ? ನಾನು ಸ್ವಲ್ಪ ಹಣ ಕೊಡುವೆ. ಒಂದೋ ಬರುವೆ ಅಥವಾ ಕಳುಹಿಸುವೆ'' ಎಂದು ಇಲ್ಯಾಸ್ ಹೇಳಿದ್ದ. ಆದರೆ, ಅದನ್ನು ರಹಿಮಾನ್ ತಿರಸ್ಕರಿಸಿ, ನನಗೆ ಆ ಹರಾಮಿ ಹಣ ಬೇಡವೇ ಬೇಡ ಎಂದಿದ್ದರು.

ರಹಿಮಾನ್ ಮನೆಯ ಫೋನ್ ಕದ್ದಾಲಿಕೆಗೆ ಪೊಲೀಸರು ಆಗಲೇ ಸೂಕ್ತ ವ್ಯವಸ್ಥೆ ಮಾಡಿದ್ದ ಕಾರಣ, ಆ ಮಾತನ್ನು ಆಲಿಸಿದ್ದರು. ಎಲ್ಲಕ್ಕಿಂತ ಮುಖ್ಯವಾಗಿ ಮಾಹಿತಿದಾರನೊಬ್ಬ, ಸಬ್ ಇನ್ಸ್‌ಪೆಕ್ಟರ್ ಆನಂದ್‌ರಿಗೆ ಮಾಹಿತಿ ನೀಡಿದ್ದ. ಅದರಂತೆ ಪೊಲೀಸರು ದಾಳಿ ಮಾಡಿ ಇಲ್ಯಾಸ್ ಇಲ್ಲದ್ದನ್ನು ಕಂಡು ಮಾಡಬಾರದ್ದನ್ನು ಮಾಡಿ ಹತಾಶೆಯಿಂದ ಹೋಗಿದ್ದಾರೆ.

* * *

ಪೊಲೀಸರು ದಾಳಿ ಮಾಡಿದ ವಿಷಯ ಅದ್ಹೇಗೋ, ತಾಹಿರಾಳನ್ನು ವರಿಸಲಿರುವ ಹುಡುಗನಿಗೆ ಗೊತ್ತಾಯಿತು. ಅವನು ಆ ಕ್ಷಣಕ್ಕೆ ತನಗೆ ಆ ಹುಡುಗಿ ಬೇಡ ಎಂದುಬಿಟ್ಟ. ಅವನ ಮನೆಯವರೂ ತಮಗೀ ಸಂಬಂಧ ಬೇಡ ಎಂದು ದಲ್ಲಾಳಿಯ ಮೂಲಕ ಹೇಳಿ ಕಳುಹಿಸಿದರು.

ಒಟ್ಟಾರೆ, ಕೈಗೆ ಬಂದ ತುತ್ತು ಬಾಯಿಗೆ ಇಲ್ಲವಾಯಿತು. ತಾಹಿರಾ ಅತ್ತು ಅತ್ತು ಕಣ್ಣೀರಿಳಿಸಿದಳು. ಮೊದಲೇ ಪೊಲೀಸ್ ದೌರ್ಜನ್ಯಕ್ಕೆ ಈಡಾಗಿದ್ದ ರಹಿಮಾನ್ ಮತ್ತು ಐಸಮ್ಮ, ಮಗಳ ವಿವಾಹ ಸಂಬಂಧ ಕಡಿದುಹೋದ ಮೇಲಂತೂ ಭೂಮಿಗಿಳಿದು ಹೋಗಿದ್ದರು.

ಅವತ್ತು ಶನಿವಾರ. ರಹಿಮಾನರು ಮನೆಯಲ್ಲೇ ಇದ್ದರು. ಒಬ್ಬ ಆ ಮನೆಗೆ ಕಾಲಿಟ್ಟ. ಆತ ಪೊಲೀಸ್ ಎಂದು ಗುರುತಿಸಲು ರಹಿಮಾನರಿಗೆ ಕಷ್ಟವೇನೂ ಆಗಲಿಲ್ಲ. ಅವನ ದೇಹವನ್ನು ಕತ್ತಿಯಿಂದ ಸೀಳಬೇಕು ಎಂದು ಭಾವಿಸಿ ಆಕ್ರೋಶದಿಂದ ಕುದಿಯತೊಡಗಿದರು.

''ಮತ್ತೆ ಯಾಕೆ ಈ ಕಡೆ ಬಂದಿರಿ ?'' – ರಹಿಮಾನರು ಪ್ರಶ್ನಿಸಿದರು.

''ನಿಮಗೆ ಉಪಕಾರ ಮಾಡಲು''

''ಅವತ್ತಿನ ಉಪಕಾರವೇ ಸಾಕಲ್ಲ''

''ನನ್ನನ್ನು ನೀವು ತಪ್ಪಾಗಿ ತಿಳಿದುಕೊಂಡಿದ್ದೀರಿ, ನಾನು ಪೊಲೀಸ್ ನಿಜ. ಆದರೆ ಹೃದಯಹೀನನಲ್ಲ. ಅವತ್ತು ನಾನು ಆ ಪೊಲೀಸನ ಬೆನ್ನಿಗೆ ಗುದ್ದದೇ ಇದ್ದಿದ್ದರೆ, ಇಂದು ನಿಮ್ಮ ಮಗಳ ಬಾಳು ಬೀದಿಪಾಲಾಗುತ್ತಿತ್ತು.''

''ಈಗಾಗಲೇ ನನ್ನ ಮಗಳು ಬೀದಿಪಾಲಾಗಿದ್ದಾಳಲ್ಲ, ಇನ್ನೆಂಥದು ಆಗುವುದು ? ಅವಳ ವಿವಾಹ ಸಂಬಂಧ ತಪ್ಪಿಹೋಯಿತು. ಅದೂ ರಾಕ್ಷಸರಂತಹ ನೀವು ಬಂದ ಮೇಲೆ. ನೀವು ಮನೆಗೆ ನುಗ್ಗಿದ್ದು ಗೊತ್ತಾದ ಮೇಲೆ ನಮ್ಮ ಮೇಲೆ ಅವರಿಗೆ ಸಂಶಯ ಬರುವುದು ಸಹಜ ತಾನೆ. ಇಲ್ಯಾಸ್‌ಗೆ ಮಾಡದ ತಪ್ಪಿಗೆ ನೀವು ಶಿಕ್ಷೆ ನೀಡಿದಿರಿ. ನಂತರ ಅವ ನಿಮಗೆ ಸವಾಲಾದ. ನಮಗೆ ಮಾರಿಯಾದ. ತಾಹಿರಾಳಿಗೆ ವಿವಾಹ ಸಂಬಂಧ ಬಂದರೂ, ಇಲ್ಯಾಸ್‌ನ ತಂಗಿ ಎಂದು ಗೊತ್ತಾದೊಡನೆ ಮತ್ತೆ ಅವರ ಪತ್ತೆ ಇರುತ್ತಿರಲಿಲ್ಲ'' – ರಹಿಮಾನರು ಹೇಳುತ್ತಲೇ ಇದ್ದರು.

''ನಿಮ್ಮ ನೋವು ನನಗೆ ಅರ್ಥವಾಗಿದೆ. ನಿಮ್ಮ ನೋವಿನಲ್ಲೂ ನಾನು ಭಾಗಿ. ಅವತ್ತಿನ ಆ ಘಟನೆಗೆ ನಾನು ನಿಮ್ಮಲ್ಲಿ ಕ್ಷಮೆ ಕೋರುವೆ. ಅಂದಹಾಗೆ ನಾನು ಯಾಕೆ ಬಂದಿದ್ದೇನೆಂದರೆ, ಇನ್ನೊಂದೆರಡು ದಿನದಲ್ಲಿ ನಿಮ್ಮ ಮನೆಗೆ ಪೊಲೀಸರು ದಾಳಿ ಮಾಡಬಹುದು. ನಿಮ್ಮ ಮನೆಯಲ್ಲಿ ಅಕ್ರಮ ಸಾರಾಯಿ, ಅಕ್ರಮ ಶ್ರೀಗಂಧ ಅಂತ ಏನಾದರೂ ಸಿಕ್ಕಿದೆ ಎಂದು ಹೇಳಿ ನಿಮ್ಮನ್ನು ಅಪರಾಧಿಯನ್ನಾಗಿ ಚಿತ್ರಿಸುವ ಸಾಧ್ಯತೆ ಇದೆ. ಸ್ವಲ್ಪ ಎಚ್ಚರವಾಗಿರಿ. ಆದರೆ ಇದನ್ನು ನಾನು ಹೇಳಿದ್ದು ಅಂತ ಗೊತ್ತಾಗಬಾರದು'' – ಸಂದೀಪ್ ನುಡಿದ.

ಆ ಮಾತು ಕೇಳಿ ರಹಿಮಾನರು ಆಶ್ಚರ್ಯಚಕಿತರಾದರು. ಪೊಲೀಸ್ ಇಲಾಖೆಯಲ್ಲಿ ಇಂಥದ್ದೂ ಆಗಲು ಸಾಧ್ಯವಿದೆಯಾ ? ಎಂದು ತನ್ನಲ್ಲೇ ಕೇಳಿದರು. ಅಷ್ಟರಲ್ಲಿ ಐಸಮ್ಮ ಮತ್ತು ತಾಹಿರಾ ಕಿಟಕಿಯಿಂದ ಇಣುಕಿದರು. ಬಂದಾತ ಪೊಲೀಸ್ ಎಂದು ಇಬ್ಬರಿಗೂ ಗೊತ್ತಾಯಿತು. ''ಅವತ್ತು ಇದೇ ಪೊಲೀಸ್ ನಮಗೆ ಸ್ವಲ್ಪ ಸಹಾಯ ಮಾಡಿದ್ದ ಇಲ್ಲದಿದ್ದರೆ...'' ಎಂಬ ಮಾತು ಇಬ್ಬರ ಮನಸಲ್ಲೂ ತೇಲಾಡಿತು.

ಸಂದೀಪ್‌ನ ಕಣ್ಣು ತಾಹಿರಾಳನ್ನು ಹುಡುಕುತ್ತಿತ್ತು.

''ಅಂದ ಹಾಗೆ ನೀವು ಎಷ್ಟು ಮಂದಿ ?'' ಸಂದೀಪ್ ಕೇಳಿದ.

''ನಾವೀಗ ಮೂರು ಮಂದಿ, ಗಂಡ ಹೆಂಡತಿ ಮತ್ತು ಮಗಳು ತಾಹಿರಾ... ಇಲ್ಯಾಸ್‌ನನ್ನು ನಾನು ಎಂದೋ ಮರೆತಿದ್ದೇನೆ.''

ಸಂದೀಪ್‌ನಿಗೆ ತಾಹಿರಾಳ ಹೆಸರು ಕೇಳಿ ತಿಳಿಯಬೇಕಾಗಿತ್ತು. ಅದು ರಹಿಮಾನ್‌ರ ಬಾಯಿಯಿಂದಲೇ ಬಂತು.

''ಎಷ್ಟು ಓದಿದ್ದಾಳೆ...''

''ಅದೆಲ್ಲ ನಿಮಗೆ ಯಾಕೆ ?'' ರಹಿಮಾನರ ಕಣ್ಣು ಕೆಂಪಾಯಿತು.

''ಹಾಗೆಲ್ಲ ಕೋಪಗೊಳ್ಳಬೇಡಿ'' – ಸಂದೀಪ್‌ನ ಸಹಾಯಕ್ಕೆ ಐಸಮ್ಮ ಬಂದರು. ತಾಹಿರಾಳಿಗೂ ಸಂದೀಪ್‌ನ ಮೇಲೆ ವಿಶ್ವಾಸ ಮೂಡಿತು. ನೋಡಲು ಎಷ್ಟು ಚೆಂದ ಇದ್ದಾರೆ, ಇವರು ಸಂದೀಪ್‌ನ ಬದಲು ಮುತ್ತಲಿಬ್, ರವೂಫ್ ಅಥವಾ ಇನ್ನೇನೋ ಆಗಿದ್ದರೆ... ಎಂಬ ಮಾತು ತಾಹಿರಾಳ ಮನದ ಮೂಲೆಯಲ್ಲಿ ತೇಲಿಬಂತು. ರಹಿಮಾನರ ಪ್ರಶ್ನೆ ಸಂದೀಪ್‌ನ ಬಲವನ್ನು ಕುಗ್ಗಿಸಿತು. 'ಆಯ್ತು ನಾ ಬರ್ತೇನೆ' ಎಂಗು ಹೇಳಿ ಅಂಗಳವಿಳಿದ. ಆವಾಗಲೂ, ಅವನ ಕಣ್ಣು ತಾಹಿರಾಳನ್ನು ಹುಡುಕುತ್ತಿತ್ತು.

ಒಂದೆರಡು ದಿನದ ನಂತರ ರಾತ್ರಿ ಹೊತ್ತು ಮನೆಯ ಸುತ್ತ ಮುತ್ತ ನಾಲ್ಕೈದು ಮಂದಿ ಅಲೆದಾಡುವುದು ಕಾಣಿಸಿತು. ಪೊಲೀಸ್ ಕಾನ್ಸ್‌ಟೇಬಲ್ ಸಂದೀಪ್ ಬಂದು ಹೇಳಿದುದು ರಹಿಮಾನರಿಗೆ ನೆನಪಾಯಿತು. ತಕ್ಷಣ ಅವರು ಒಳಹೋಗಿ ಅಕ್ಕಪಕ್ಕ ನಾಲ್ಕೈದು ಮನೆಗೆ ದೂರವಾಣಿ ಕರೆಮಾಡಿ ಮನೆಯತ್ತ ಬರುವಂತೆ ಸೂಚಿಸಿದರು.

ಆ ಯುವಕರು ಓಡೋಡಿ ಬಂದಾಗ ಜೀಪು ಅಲ್ಲಿಂದ ಕಣ್ಮರೆಯಾಯಿತು. ರಹಿಮಾನರು ತನ್ನ ಆತಂಕವನ್ನು ವ್ಯಕ್ತಪಡಿಸಿದರು. ಆದರೆ ಪೊಲೀಸ್ ಕಾನ್ಸ್‌ಟೇಬಲ್ ಸಂದೀಪ್ ಹೇಳಿದ್ದನ್ನು ತಿಳಿಸಲಿಲ್ಲ. ಇದೀಗ ರಹಿಮಾನರಿಗೆ ಸಂದೀಪ್‌ನ ಮೇಲೆ ಪ್ರೀತಿ, ವಿಶ್ವಾಸ ಹೆಚ್ಚಾಯಿತು. ಇನ್ನೊಮ್ಮೆ ಬಂದರೆ, ಆದರದಿಂದ ಸ್ವಾಗತಿಸಬೇಕು ಎಂದು ನಿರ್ಧರಿಸಿದರು.

ಇತ್ತ ಸಂದೀಪ್ ಚಡಪಡಿಸತೊಡಗಿದ. ತಾಹಿರಾಳನ್ನು ಕಂಡು ಮಾತನಾಡದ ಕಾರಣ ಹಪಹಪಿಸತೊಡಗಿದ. ಕೊನೆಯ ಅಸ್ತ್ರವೆಂಬಂತೆ ಆ ಮನೆಯ ದೂರವಾಣಿ ನಂಬರ್ ಪತ್ತೆ ಹಚ್ಚಿ, ಕರೆಮಾಡತೊಡಗಿದ. ರಹಿಮಾನರು ಹಲೋ ಎಂದಾಗ ಸಂಪರ್ಕ ಕಡಿದುಹಾಕಿದ. ಮತ್ತೆ ಮತ್ತೆ ಮಾಡಿದಾಗಲೂ ಅವರೇ ಹಲೋ... ಹಲೋ... ಎನ್ನುತ್ತಿದ್ದರು. ಆದರೆ ಈ ಕಡೆಯಿಂದ ಮಾತು ಕೇಳಿಸದ ಕಾರಣ ಅವರು ಕೋಪದಿಂದ ಬಾಯಿಗೆ ಬಂದಂತೆ ಬೈಯುತ್ತಿದ್ದರು.

''ನಾನು ಸಂದೀಪ್ ಮಾತನಾಡುತ್ತಿದ್ದೇನೆ'' ಎಂದು ಹೇಳಲಾಗದೆ ಕಸಿವಿಸಿಗೊಂಡ. ತಾಹಿರಾ ಅಥವಾ ಐಸಮ್ಮ ರಿಸೀವರ್ ತೆಗೆದರೆ, ಖಂಡಿತಾ ಮಾತನಾಡುತ್ತೇನೆ ಎಂದೂ ಹೇಳಿಕೊಳ್ಳತೊಡಗಿದ. ಇದೀಗ ದಿನಕ್ಕೆ ಏಳೆಂಟು ಬಾರಿ ಆ ಮನೆಗೆ ದೂರವಾಣಿ ಕರೆ ಮಾಡುತ್ತಾನೆ. ಆದರೆ, ಹೆಚ್ಚಾಗಿ ರಹಿಮಾನರೇ ತೆಗೆಯುತ್ತಾರೆ. ತಾಹಿರಾ ತೆಗೆದರೆ, ತನ್ನ ಮನದಿಂಗಿತವನ್ನು ತಿಳಿಸಿ, ನಿನಗಾಗಿ ನಾನು ಏನು ಮಾಡಲೂ ಸಿದ್ಧ, ಯಾವ ಪರಿವರ್ತನೆಗೂ ಬದ್ಧ ಎಂದು ಹೇಳಬೇಕು ಎಂದು ನಿರ್ಧರಿಸಿದ. ಒಂದು ವೇಳೆ ತಾಹಿರಾ ನನ್ನ ಅಭಿಲಾಷೆಗೆ ಒಪ್ಪಿಗೆ ಕೊಟ್ಟರೆ ತನ್ನ ಹೆಸರನ್ನು ಹೇಗೆ ಬದಲಾಯಿಸಬೇಕು ಎಂದೂ ಸಂದೀಪ್ ನಿರ್ಧರಿಸಿದ್ದ. ಆದರೆ ತಾಹಿರಾ ಫೋನ್ ರಿಸೀವರ್ ಎತ್ತಲಿಲ್ಲ. ಸಂದೀಪ್‌ಗೆ ತನ್ನ ಮನದ ಇಂಗಿತ ಹೇಳಲು ಸಾಧ್ಯವಾಗಲೂ ಇಲ್ಲ. ಆದರೆ ತಾಹಿರಾ ಆಗಾಗ ಸಂದೀಪ್‌ನ ನೆನಪು ಮಾಡುತ್ತಾ, ಅವರು ಇತ್ತ ಮುತ್ತಲಿಬ್ ಅಥವಾ ರವೂಫ್ ಆಗಿ ಬರಬಾರದೇ... ? ಎಂದು ಆಶಿಸುತ್ತಿದ್ದಳು.




**ಹಂಝು ಮಲಾರ್**

ಅರಸ್ತಾನ, ಅಂಚೆ : ಪಾವೂರು - ೫೭೪ ೧೮೨

ಮಂಗಳೂರು ತಾಲೂಕು

ಎಲ್. ವಿ. ಶಾಂತಕುಮಾರಿ



ಅಮ್ಮ ಎನ್ನುವುದು ನಿತ್ಯ ಪ್ರಸ್ತುತ, ನಿತ್ಯವಾಸ್ತವ. ವ್ಯಕ್ತಿಯು ಈ ಭೂಮಿಗೆ ಬರುವ ಮೊದಲಿನ ಹಾಗೂ ನಂತರದ ಅನುಬಂಧ ಮತ್ತು ಅನುಭವ ಸತ್ಯ. ಅಪ್ಪ ಎನ್ನುವುದು ಹುಟ್ಟಿನ ನಂತರದ ಅನುಬಂಧ ಹಾಗೂ ಅನುಭವ ಸತ್ಯ. ಪ್ರಕೃತಿ ಗೋಚರ ಸತ್ಯ, ಪುರುಷ ಅಗೋಚರ ಸತ್ಯ ಎನ್ನಬಹುದಾದಂತೆ. ಪ್ರಕೃತಿಗೆ ಮಾತೆ ಎಂದೂ, ಸೃಷ್ಟಿಶಕ್ತಿಗೆ ಜಗನ್ಮಾತೆ ಎಂಬ ಶಬ್ದಗಳನ್ನು ಆರೋಪಿಸಿರುವುದರಲ್ಲಿ ಈ ಬ್ರಹ್ಮಾಂಡವನ್ನು ಹಡೆದವಳೂ ಹೆಣ್ಣು ಎಂಬ ಪರಿಕಲ್ಪನೆ ರೂಪುತಾಳಿದೆಯೆನಿಸುತ್ತದೆ. ಅದರಿಂದಲೇ ಇರಬಹುದು, "ಮಾತೃದೇವೋ ಭವ" ಎಂದು ಮಾತೆಯ ಸ್ಥಾನಕ್ಕೆ ಪ್ರಥಮ ಪ್ರಾಶಸ್ತ್ಯ ಕೊಟ್ಟಿರುವುದು.

# ಅಮ್ಮ ಮತ್ತು ಡಿ. ಎನ್. ಎ.

ಅಮ್ಮ ಎನ್ನುವಾಗ ಎಲ್ಲರಿಗೂ ತಮ್ಮ ತಮ್ಮ ಅಮ್ಮಂದಿರ ನೆನಪಾಗುವಂತೆ ನನ್ನ ಮನದ ಮುಂದೆಯೂ ನನ್ನ ಅಮ್ಮನ ಹಲವಾರು ಚಿತ್ರಗಳು ತೇಲಿಬರುತ್ತವೆ. ಅವುಗಳಲ್ಲಿ ಒಂದೆರಡು ಎಂದರೆ, ಹಬ್ಬಹರಿದಿನಗಳ ಸಡಗರ, ಹಾಗೂ ನಮ್ಮ ಮನೆಯಲ್ಲಿಯೇ ಹುಟ್ಟಿದ್ದ ಯಮುನೆ ಎಂಬ ಎಮ್ಮೆಯೊಡನೆ ಅಮ್ಮನಿಗಿದ್ದ ಪ್ರೀತಿಯ ಬಾಂಧವ್ಯ. ಹಬ್ಬದ ದಿನಗಳಲ್ಲಿ ಅಂದಿನ ಮಡಿ ಹುಡಿಗಳನ್ನನುಸರಿಸಿ, ಬಾವಿಯಿಂದ ನೀರು ಸೇದಿ ಹೊತ್ತು ತಂದು, ಸೌದೆ ಒಲೆ ಉರಿಸಿ, ಮುವ್ವತ್ತು ನಲವತ್ತು ಮಂದಿಗೆ ಅಡಿಗೆ ಮಾಡುವುದೇನು ಹುಡುಗಾಟ ವಾಗಿರಲಿಲ್ಲ. ಜೊತೆಗೆ ಒರಳು, ಒನಕೆ, ಹಾರೆ, ಬೀಸುವ ಕಲ್ಲಿನ ಉಪಯೋಗವೂ ಧಾರಾಳವಾಗಿರುತ್ತಿತ್ತು. ಅಮ್ಮನ ಮುಖದಲ್ಲಿ ಮಾತ್ರ ಇದರಿಂದಾಗಿ ಒಂದು ದಿನವೂ ಬೇಸರದ ಗೆರೆ ಮೂಡಿರಲಿಲ್ಲ. ಭೀಮನ ಅಮಾವಾಸ್ಯೆ, ಗೌರಿ, ಗಣೇಶ, ವರಮಹಾಲಕ್ಷ್ಮೀ, ಉಗಾದಿ, ದೀಪಾವಳಿ ಗಳಂತಹ ಸಡಗರದ ಹಬ್ಬಗಳಲ್ಲಿ ಅಮ್ಮನ ಉತ್ಸಾಹ, ಇಮ್ಮಡಿಸುತ್ತಿತ್ತು. ಉಗಾದಿ, ದೀಪಾವಳಿಗಳಲ್ಲಿ ಮಕ್ಕಳಿಗೆ ಪೂಜೆಯ ಕಾರ್ಯಕ್ರಮಗಳೇನೂ ಇರುತ್ತಿರಲಿಲ್ಲ. ಹಬ್ಬಗಳ ಹಿಂದಿನ ದಿನವೇ ಸಡಗರ ಆ ದೊಡ್ಡ ಮನೆಯನ್ನು ರಂಗವಲ್ಲಿಯಿಂದ ಸಿಂಗರಿಸುವುದರೊಂದಿಗೆ ಆರಂಭ ವಾಗುತ್ತಿತ್ತು. ರಂಗವಲ್ಲಿಯೆಂದರೆ, ಸೀಮೆಸುಣ್ಣ, ಪೇಂಟು, ಪುಡಿ ರಂಗೋಲಿಗಳಲ್ಲ. ಬೆಳಗಿನಿಂದಲೂ ನೆನೆಹಾಕಿದ್ದ ಬೆಳ್ಳನೆಯ ಅಕ್ಕಿಯನ್ನು ನುಣ್ಣಗೆ ರುಬ್ಬಿ, ಬಿಳಿ ಬಟ್ಟೆ ಚೂರನ್ನು ಬೆರಳುಗಳಲ್ಲಿ ಹಿಡಿದು ನಾಜೂಕಾಗಿ ಮನೆಯ ಒಳಗೋಡೆಗಳ ಸುತ್ತಲೂ ನಾಲ್ಕು ಎಳೆ ಎಳೆದು, ನಡುಮನೆಗೆ ಚಿತ್ತಾರದ ಚುಕ್ಕಿ ಹಸೆ ಬಿಡಿಸಿ, ಹೊರಗಿನ ಅಂಗಳ ತುಳಸೀಕಟ್ಟೆಗೆ ಬೇರೆಯೇ ವಿನ್ಯಾಸಗಳನ್ನು ಬಿಡಿಸುವ ವಿಶಿಷ್ಟ ಕಾರ್ಯಕ್ರಮ. ಇಷ್ಟು ಮುಗಿಸಿ ಅಮ್ಮ ಮಲಗುವ ವೇಳೆಗೆ ನಡುರಾತ್ರಿಯಾಗಿರುತ್ತಿತ್ತು. ಈ ರಂಗೋಲಿ ಕೆಲಸವನ್ನು ಅಮ್ಮ ಕೆಲಸದವರಿಂದಾಗಲೀ, ಬೇರೆ ಯಾರಿಂದಲಾಗಲೀ ಮಾಡಿಸುತ್ತಿರಲಿಲ್ಲ. ರಂಗೋಲಿ ಎಳೆಗಳು ನಾಜೂಕಾಗಿದ್ದರೆ ಚೆಂದ, ಬರೆ ಎಳೆದಂತೆ ಎಳೆದುಬಿಟ್ಟರೆ, ಅಷ್ಟು ಕಷ್ಟಪಟ್ಟು ನುಣ್ಣಗೆ ರುಬ್ಬಿ ಪ್ರಯೋಜನವೇನು ಎನ್ನುತ್ತಿದ್ದರು. ನಮ್ಮ ಹಿಂದಿನವರು ಇಡುತ್ತಿದ್ದ ಈ ಅಕ್ಕಿಹಿಟ್ಟಿನ ರಂಗೋಲಿ, ಮನೆತುಂಬ ಹರಿದಾಡುತ್ತಿದ್ದ ಸಣ್ಣ ಮಕ್ಕಳಿಗಾಗಲೀ, ಇರುವೆ ಮುಂತಾದ ಸಣ್ಣ ಜೀವಿಗಳಿಗಾಗಲೀ ಒಂದಿಷ್ಟೂ ಹಾನಿಕರವಾಗಿ ಇರುತ್ತಿರಲಿಲ್ಲ ಎಂಬುದನ್ನು ನೆನೆಯುವಾಗ, ಅವರ ಆಲೋಚನಾ ವಿಧಾನದ ಬಗೆಗೆ ಅಭಿಮಾನ, ಮೆಚ್ಚುಗೆಗಳು ಮೂಡುತ್ತವೆ. ರಂಗೋಲಿ ಬಿಡಿಸಿ ಅಮ್ಮ ಯಾವಾಗ ಮಲಗುತ್ತಿದ್ದರೋ, ಯಾವಾಗ ಏಳುತ್ತಿದ್ದರೋ ನಮಗಂತೂ ತಿಳಿಯುತ್ತಿರಲಿಲ್ಲ. ಬೆಳಗಿನ ಜಾವ ನಾಲ್ಕು ಗಂಟೆಗೇ ನಮ್ಮನ್ನು ಹೊರಳಿಸಿ ಹೊರಳಿಸಿ ಎಬ್ಬಿಸುತ್ತಿದ್ದ ಅಮ್ಮನನ್ನು ನಿದ್ರೆಗಣ್ಣು ತೆರೆದು ನೋಡಿದಾಗ ಯಾರೋ ದೇವತೆಯೊಬ್ಬಳು ಸ್ವರ್ಗದಿಂದಿಳಿದುಬಂದು ನಮ್ಮನ್ನು ಎಬ್ಬಿಸುತ್ತಿದ್ದಾಳೆ ಎನಿಸುತ್ತಿತ್ತು. ಮತ್ತೆ ಮತ್ತೆ ಕಣ್ಣುಜ್ಜಿಕೊಂಡು ನೋಡುತ್ತಿದ್ದೆವು. ಪ್ರತಿದಿನವೂ ಹಳೆಯ ಮಡಿಸೀರೆಯಲ್ಲಿ ಅಮ್ಮನನ್ನು ನೋಡುತ್ತಿದ್ದವರಿಗೆ, ರೇಷ್ಮೆ ಪೀತಾಂಬರ, ಪದಕ ಹಾರಗಳು, ಚಿನ್ನದ ಬಳೆಗಳ ನಡುವೆ ರಂಗಾಗಿ ಹೊಳೆಯುತ್ತಿದ್ದ ಹಸಿರು, ಕೆಂಪು ಗಾಜಿನ ಸಾಣೆಬಳೆಗಳು, ತಲೆತುಂಬ ಮುಡಿದ ಘಮಘಮಿಸುವ ಮಲ್ಲಿಗೆ ಮೋಡಿ ಮಾಡುತ್ತಿದ್ದವು. ಅಮ್ಮ ಎತ್ತರಕ್ಕೆ ದಪ್ಪಗಿದ್ದರೂ, ದಂತದಲ್ಲಿ ಕಡೆದಿದ್ದಂತಹ ರೂಪವಂತೆ. ಹಬ್ಬದ ದಿನಗಳಲ್ಲಂತೂ ಸಾಕ್ಷಾತ್ ಗೌರಿಯೋ, ಲಕ್ಷ್ಮಿಯೋ ಎನ್ನುವಂತಹ ದಿವ್ಯಕಳೆ

ತುಂಬಿರುತ್ತಿತ್ತು ಅವರ ಮುಖದಲ್ಲಿ. ನಾವು ಆಶ್ಚರ್ಯದಿಂದ ಕಣ್ಣು ಉಜ್ಜಿ ನೋಡುತ್ತಾ, ''ಅಮ್ಮ ನೀನಿವತ್ತು ಎಷ್ಟು ಚೆನ್ನಾಗಿ ಕಾಣ್ತೀ'' ಎಂದರೆ, ''ಏಳಿ ಏಳಿ ಹೊತ್ತಾಯ್ತು. ಬಚ್ಚಲಿಗೆ ನಡೀರಿ'' ಎನ್ನುತ್ತಾ, ಸ್ನಾನಮಾಡಿಸಿ, ನಾಗರ ಕುಚ್ಚುಗಳನ್ನು ಹಾಕಿ ಜಡೆ ಹೆಣೆದು, ಹೂ ಮುಡಿಸಿ ಹೊಸಬಟ್ಟೆ ಹಾಕಿ ನಮ್ಮನ್ನು ಪೂಜೆಗೆ ಅಣಿಮಾಡುತ್ತಿದ್ದರು. ಪೂಜೆಗೆಂದು ಹಸುವಿನ ಹಾಲು ಕರೆದುಕೊಂಡು ತಮ್ಮ ಪ್ರೀತಿಯ ಎಮ್ಮೆ ಯಮುನೆಗೆ ರಾಣಿಯುಪಚಾರ ಮಾಡಿ, ಹಾಲುಕರೆದು ನಂತರ, ಪೂಜೆಗೆ ಕೊಡುತ್ತಿದ್ದರು. ಎಷ್ಟೋ ವೇಳೆ ನಮಗೆ ಅಮ್ಮ ಯಕ್ಷಿಣಿ ವಿದ್ಯೆಯನ್ನೇನಾದರೂ ಕಲಿತಿದ್ದಾರೆಯೇ ಎಂಬ ಅನುಮಾನ ಮೂಡುತ್ತಿತ್ತು.

ಹಬ್ಬಗಳಂತೆಯೇ ಅಮ್ಮನ ನೆನಪುಗಳೊಡನೆ ತಳಕು ಹಾಕಿಕೊಂಡಿರುವುದು ಈ ಯಮುನೆಯ ನೆನಪು. ಇವಳದೊಂದು ಮಹಿಷಿಪುರಾಣವೇ ಸರಿ. ನಮ್ಮ ತಂದೆಯ ಕಕ್ಷಿಗಾರನೊಬ್ಬ ತನ್ನ ಫೀ ಎಂದು ಈ ಯಮುನೆಯ ತಾಯಿಯನ್ನು ನಮ್ಮ ಕೊಟ್ಟಿಗೆಯಲ್ಲಿ ಕಟ್ಟಿಹೋಗಿದ್ದ. ''ಭೋ ಏನಾತಿ ತಳಿ ಸಾಮಿ, ಇಂಡಿ ಆಕ್ದಂಗೆಲ್ಲಾ ಆಲ್ ಇಂಡ್ತೈತೆ. ನನ್ನ ನೆಪ್ಪಾಗಿ ಮಡಕ್ಕೊಳ್ಳಿ ಸಾಮಿ. ಮಕ್ಳೀಗೆ, ಬರೋರು ಓಗೋರ್ಗೆಲ್ಲಾ ಮಸ್ತಾಗಿ ಆಲು ಮೊಸರು ಆಗ್ತೈತೆ'' ಎಂದಿದ್ದ. ಬಿಳಿಯ ಬುಡ್ಡ ಹಸುವಿನೊಂದಿಗೆ, ಈ ಭೂತಾಕಾರದ ಕರಿ ಎಮ್ಮೆಯೂ ಕೊಟ್ಟಿಗೆಗೆ ಸೇರಿತು. ಈ ಅಮ್ಮನಿಗೋ, ಮನೆಯ ದನಕರುಗಳಿಗೆ ಮಕ್ಕಳಿಗಿಂತ ಒಂದು ಕೈ ಜಾಸ್ತಿಯೇ ಉಪಚಾರವಾಗಬೇಕು. ಎಮ್ಮೆ, ಹಸು ಗಬ್ಬವಾದರೆ ಅವಕ್ಕೆ ಬಿಸಿನೀರಿನ ಸ್ನಾನವೇನು, ರಾಗಿ ಅಂಬಲಿಯೇನು, ಅಕ್ಕಿಬೆಲ್ಲಗಳೇನು, ಎಲ್ಲರೂ ಅಮ್ಮನನ್ನು ತಮಾಷೆ ಮಾಡುತ್ತಿದ್ದರು. ಅಮ್ಮ ಕೇಳುತ್ತಿದ್ದರು ''ಅವುಗಳ ಹಾಲು ಮೊಸರು ಮಾತ್ರ ಬೇಕು, ಅವುಗಳಿಗೆ ಉಪಚಾರ ಮಾತ್ರ ಮಾಡಬಾರದಾ ?'' ಅಮ್ಮ ಮದುವೆಯಾಗಿ ನಮ್ಮ ತಂದೆಯ ಮನೆಗೆ ಬಂದಾಗ ಹದಿನಾಲ್ಕು ವರ್ಷದ ಹುಡುಗಿ. ಅಮ್ಮನ ತಂದೆಯ ಮನೆಯಲ್ಲಿ ಲಿಬರಲ್ ಆರ್ಥೋಡಾಕ್ಸ್ ಮತ್ತು ಅರಿಸ್ಟೋಕ್ರಾಟಿಕ್ ಬ್ರಿಟಿಷ್ ವಾತಾವರಣ ಮತ್ತು ಅದೇ ಶಿಸ್ತು. ಸಂಜೆ ಏಳುಗಂಟೆಗೇ ಊಟ, ವೀಣೆ ಅಭ್ಯಾಸ. ನಂತರ ಸ್ವಲ್ಪಹೊತ್ತು ಎಲ್ಲರೊಡನೆ ಕುಳಿತಿದ್ದು ಮಲಗಿಬಿಡಬೇಕು. ಮತ್ತೆ ಬೆಳಗಿನ ಜಾವ ನಾಲ್ಕು ಗಂಟೆಗೇ ಸ್ನಾನ ಮಾಡಿಸಿ, ವೀಣೆ ಅಭ್ಯಾಸಕ್ಕೆ ಕೂಡಿಸಿಬಿಡುತ್ತಿದ್ದರಂತೆ. ಶಾಲೆಗೆ ಕಳುಹಿಸುತ್ತಿರಲಿಲ್ಲ. ಮನೆಗೇ ಟ್ಯೂಟರ್ಸ್ ಬಂದು ಕಲಿಸುತ್ತಿದ್ದರು. ಅಮ್ಮ ಮತ್ತು ಅವರ ತಂಗಿಯರಿಗೆ ಕಾರ್ ಡ್ರೈವಿಂಗ್, ಷೂಟಿಂಗ್ ಎಲ್ಲ ಅಭ್ಯಾಸ ಮಾಡಿಸಿದ್ದರು ತಾತ. ಹೀಗೆ ಒಂದು ಕೆಲಸವೂ ಬಾರದಿದ್ದ ಅಮ್ಮ, ಹಾಲು ಕರೆಯುವುದು, ದನಗಳ ಮೈ ತೊಳೆಯುವುದು, ಕೊಟ್ಟಿಗೆ ಸ್ವಚ್ಛಗೊಳಿಸುವುದು, ಕೆಲಸದವರು ಬರದಿದ್ದರೆ ಸೆಗಣಿಯನ್ನು ತೆಗೆಯುವುದು ಇವನ್ನೆಲ್ಲಾ ಹೇಗೆ ಕಲಿತರು ಎಂಬುದು ಈಗಲೂ ನನಗೆ ಆಶ್ಚರ್ಯ. ನಮ್ಮ ಮನೆಗೆ ಬಂದ ಎಮ್ಮೆ ನಂದಿನಿ – ನಂದಿಹಳ್ಳಿಯಿಂದ ಬಂದಿತೆಂದು ಅದಕ್ಕೆ ನಂದಿನಿ ಎಂದು ನಾಮಕರಣ – ಮೊದಲ ಬಾರಿ ಗರ್ಭಧರಿಸಿ ಕಂದುಕರು ಹಾಕಿತು (ಗರ್ಭಪಾತ). ಅಮ್ಮನಿಗೆ ಅದೆಷ್ಟು ಬೇಸರವೋ, ಮಕ್ಕಳಿಗೆ ಸಮಾಧಾನ ಮಾಡುವಂತೆ ನಂದಿನಿಯ ಮೈ ಸವರುತ್ತಾ ''ಮುಂದಿನ ಸಾರಿ ಒಳ್ಳೆಯ ಕರು ಹುಟ್ಟುತ್ತೆ, ಸುಮ್ಮನಿರು'' ಎನ್ನುತ್ತಿದ್ದರು. ಪ್ರತಿದಿನ ರಾಗಿ ಅಂಬಲಿ ಮಾಡಿ, ಬೆಲ್ಲ ಹಾಕಿ ಕುಡಿಸುತ್ತಿದ್ದರು. ''ನಿನ್ನ ಮಕ್ಕಳು ಗರ್ಭಿಣಿಯರಾದರೆ ಅದಿನ್ನೆಷ್ಟು ಉಪಚಾರ ಮಾಡ್ತಿಯೋ'' ಎಂದು ಹಾಸ್ಯ ಮಾಡುತ್ತಿದ್ದ ನಮ್ಮ ತಂದೆಗೆ ಹೇಳುತ್ತಿದ್ದರು ''ಪಾಪ, ಮೂಕಪ್ರಾಣಿ, ತನ್ನ ಸಂಕಟಾನ ಹೇಗೆ ಯಾರ ಜೊತೆ ಹೇಳಿಕೊಳ್ಳುತ್ತೆ?'' ನಂದಿನಿ ಮತ್ತೆ ಗಬ್ಬವಾಗಿ, ಅದೇಕೋ ಅದರ ಹೆರಿಗೆ ಬಹಳ ಕಷ್ಟವಾಗಿ ಪಶುವೈದ್ಯರು ಬಂದು ಕರುವನ್ನು ಹೊರತೆಗೆದರು. ತನಗೆ ಹುಟ್ಟಿದ್ದ ಕರುವನ್ನು ನಂದಿನಿ ನೆಕ್ಕಿ ಒರೆಸದಿದ್ದಾಗ, ತಮ್ಮ ಹಳೆಯ ಸೀರೆಯನ್ನು ತಂದು, ಕರುವನ್ನು ತಿಕ್ಕಿ ಒರೆಸಿ ಸ್ವಚ್ಛಮಾಡಿ ಎತ್ತಿಕೊಂಡು ನಂದಿನಿಯ ಮುಂದೆ ನಿಲ್ಲಿಸಿದರು ಅಮ್ಮ. ಎಮ್ಮೆಯ ಕರುಗಳಲ್ಲಿ ಹಸುವಿನ ಕರುಗಳಷ್ಟು ಚುರುಕಾಗಲೀ, ಅಂದವಾಗಲೀ ಇರದಿದ್ದರೂ ಅಮ್ಮನಿಗೆ ಈ ಮಹಿಷಿ ಕುವರಿಯ ಮೇಲೆ ವಿಪರೀತ ಮಮತೆ. ಪ್ರೀತಿಯಿಂದ ಅದನ್ನು ಯಮುನೆ ಎಂದು ಕರೆದರು. ಹತ್ತು ಹನ್ನೆರಡು ದಿನಗಳಲ್ಲಿ ನಂದಿನಿ ಸತ್ತುಹೋದಾಗ ಈ ತಬ್ಬಲಿ ಯಮುನೆಯ ವಾಸ್ತವ್ಯ ಕೊಟ್ಟಿಗೆಯಿಂದ ಮನೆಯ ಮುಂದಿನ ವರಾಂಡಕ್ಕೆ ಬದಲಾಯಿಸಲ್ಪಟ್ಟಿತು. ಗೋಣೀಚೀಲಗಳು, ಹಳೆಯ ಬೆಡ್‌ಷೀಟ್‌ಗಳು ಎಲ್ಲ ಸಿದ್ಧವಾದವು. ಪುಟ್ಟ ಯಮುನೆಗೆ ಹಾಲು ಕುಡಿಸುವುದು ದೊಡ್ಡ ಸಮಸ್ಯೆಯಾಯಿತು. ಬಲವಂತವಾಗಿ ಕರುವನ್ನು ತೊಡೆಯ ಮೇಲೆ ಹಾಕಿಕೊಂಡು ಸಣ್ಣ ಫನಲ್‌ಗಳಲ್ಲಿ ಹಾಲು ಹಾಕಿ ಕುಡಿಸುತ್ತಿದ್ದ ಅಮ್ಮನನ್ನು ನೆನೆಸಿಕೊಂಡರೆ ಅಮ್ಮ ಎನ್ನುವ ಪ್ರೀತಿ-ತತ್ವ ಕೇವಲ ಮನುಷ್ಯ ಪ್ರಪಂಚಕ್ಕೆ ಮತ್ತು ತಮ್ಮ ಮಕ್ಕಳಿಗೆ ಮಾತ್ರ ಸೀಮಿತವಾಗಿರುವಂತಹುದಲ್ಲ ವೆನಿಸುತ್ತದೆ. ನ್ಯಾಷನಲ್ ಜಿಯೋಗ್ರಾಫಿಕ್ ಛಾನೆಲಿನಲ್ಲಿ ಪಶುಪಕ್ಷಿಗಳನ್ನು ಪ್ರೀತಿಯಿಂದ ಆರೈಕೆ ಮಾಡುವುದು ನೋಡುವಾಗೆಲ್ಲ ನನಗೆ ಅಮ್ಮ ಮತ್ತು ಯಮುನೆಯ ಬಾಂಧವ್ಯ ನೆನಪಾಗುತ್ತದೆ. ಮಧ್ಯಾಹ್ನ ಊಟ ಮುಗಿಸಿ ವೀಣೆ ನುಡಿಸಿಕೊಳ್ಳುವಾಗ ಈ ಯಮುನೆಯನ್ನು ತಮ್ಮ ಮುಂದೆಯೇ ತಂದು ಹಾಕಿಕೊಳ್ಳುತ್ತಿದ್ದರು ಅಮ್ಮ. ಮನೆಯೊಳಗೆಲ್ಲಾ ತಿರುಗಾಡಿಕೊಂಡಿದ್ದ ಯಮುನೆಯೂ ವೀಣೆಯ ಧ್ವನಿಗೆ ಅಡಿಕ್ಟ್ ಆಗಿದ್ದವಳಂತೆ ಕಿವಿ ನಿಮಿರಿಸಿಕೊಂಡು ನಿಂತಿರುತ್ತಿದ್ದಳು. ಎರಡು ಘಂಟೆಗೊಮ್ಮೆ ಹೊರಗೆ ಕರೆದುಕೊಂಡು ಹೋಗಿ ಗಂಜಳಹಾಕಿಸಿ ಬರುತ್ತಿದ್ದರು. ಅಮ್ಮನ ಚಿಕ್ಕ ಮಗಳಂತೆ ಬೆಳೆದ ಯಮುನೆ ಗರ್ಭ ತಳೆದಾಗ ಅಮ್ಮನಲ್ಲಿ ಆತಂಕ, ಸಂತೋಷ ತುಂಬಿಕೊಂಡವು. ಬಹುಶಃ ಅಮ್ಮನ ಆರೈಕೆಯಲ್ಲಿ ಬೆಳೆದಿದ್ದರಿಂದ ಇರಬೇಕು, ಎಮ್ಮೆಗಳಲ್ಲಿ ಕಂಡುಬರದಿದ್ದ ಸೂಕ್ಷ್ಮಸ್ವಭಾವ, ಸಂವೇದನಾಶೀಲತೆಗಳು ಯಮುನೆಯಲ್ಲಿ ಮನೆಮಾಡಿದ್ದವು. ಜೊತೆಗೆ ಅಮ್ಮನದೇ ರೂಢಿಯಾಗಿದ್ದ ರಿಂದಾಗಿ ಗಂಡಸರನ್ನು ಹತ್ತಿರ ಸುಳಿಯಗೊಡಿಸುತ್ತಿರಲಿಲ್ಲ. ಮೊದಲ ಬಾರಿ ಗರ್ಭಧರಿಸಿದ ಮೇಲಂತೂ ಯಮುನೆ ವಿಪರೀತ ಸಿಡುಕಿಯಾದಳು. ಈ ಯಮುನೆ ಮಹಿಷಿ ಲೋಕದ, ಮೊದಲ ಪುರುಷದ್ವೇಷಿ ಮಹಿಷಿ ಯೆನಿಸುತ್ತದೆ. ಮೂಗುದಾರ ಹಾಕುವ ದಿನವಂತೂ, ಇಬ್ಬರು ಮೂವರು ಹಿಡಿದರೂ ಬಿಡಿಸಿಕೊಂಡು ಓಡುತ್ತಿದ್ದ ಯಮುನೆಯನ್ನು ಸಮಾಧಾನಪಡಿಸುತ್ತಾ, ಅವಳ ಚೂಪಾಗಿದ್ದ ಉದ್ದನೆಯ ಕೊಂಬುಗಳನ್ನು ಹಿಡಿದು

ನಿಂತಿದ್ದರು ಅಮ್ಮ. ಯಾವ ಗಂಡಸನ್ನು ಕಂಡರೂ ಕೊಂಬುಗಳನ್ನು ಅಲ್ಲಾಡಿಸುತ್ತಾ ಸಿರ್ ಎಂದು ತಿವಿಯಲು ನುಗ್ಗುತ್ತಿದ್ದ ಯಮುನೆಯನ್ನು, ಅವಳು ಹೊಲಗಳಿಗೆ ನುಗ್ಗಿ, ಕಡಲೆ, ಹುರುಳಿ ಬೆಳೆಗಳನ್ನು ಮೇಯುತ್ತಿದ್ದರೂ, ಯಾರಿಗೂ ಕಟ್ಟಿಹಾಕಲಾಗುತ್ತಿರಲಿಲ್ಲ. ದೂರದಿಂದಲೇ ಹೆದರಿಸಿ ಓಡಿಸುತ್ತಿದ್ದರು. ಇಂತಹ 'ದುಷ್ಟಬುದ್ಧಿ'ಯ ಯಮುನೆ, ಮೇವು ಮುಗಿಸಿಕೊಂಡು ಬಂದು, ಎಷ್ಟೋ ದಿನಗಳು, ಅಮ್ಮ ವೀಣೆ ನುಡಿಸುತ್ತಿದ್ದ ಕೊಠಡಿಯ ಕಿಟಕಿಯ ಬಳಿ ಪರಮ ಸಾಧುವಾಗಿ ನಿಂತಿರುತ್ತಿದ್ದಳು. ಈ ಪುರುಷದ್ವೇಷಿಯ ಹೆರಿಗೆ ಮತ್ತೆಲ್ಲ ಉಪಚಾರಗಳೂ ಅಮ್ಮನಿಗೇ ಗಂಟುಬಿದ್ದು, ಅವರು ಬೇರೆ ಊರುಗಳಿಗೆ ಹೊರಡುವುದೇ ಕಷ್ಟವಾಯಿತು.

ನನ್ನ ತಂದೆಯ ಮರಣಾನಂತರ, ಅಮ್ಮ ಆ ದೊಡ್ಡ ಮನೆಯನ್ನು ಬಿಟ್ಟು ತಮ್ಮ ಮಗನ ಮನೆಗೆ ಬರಬೇಕಾಯಿತು. ಯಮುನೆಯನ್ನು ಜೊತೆಗೇ ಕರೆದುಕೊಂಡು ಹೋಗ ಬೇಕೆಂಬುದು ಅವರ ಒತ್ತಾಯ. ತುಮಕೂರಿನ ಬಾಡಿಗೆ ಮನೆಯಲ್ಲಿ ಎಮ್ಮೆಕಟ್ಟಲು ಜಾಗವಿರಲಿಲ್ಲವಾಗಿ, ಹಾಲು ತಂದುಕೊಡುವವಳ ಮನೆಯಲ್ಲಿ ಯಮುನೆಯನ್ನು ಬಿಡುವ ವ್ಯವಸ್ಥೆಯಾಯಿತು. ಹಾಗಾದರೂ ಯಮುನೆಯನ್ನು ಪ್ರತಿದಿನವೂ ನೋಡುತ್ತಿರ ಬಹುದೆಂದು ಅಮ್ಮನ ಆಶಯ. ಜೊತೆಗೆ, ಹಾಲು ಮೊಸರಿಗೂ ತೊಂದರೆ ಯಿರುವುದಿಲ್ಲವಲ್ಲ! ಮನೆ ಸಾಮಾನು ಸಾಗಿಸಲು ಎರಡು ಲಾರಿಗಳಾದರೆ, ಯಮುನೆ ಮತ್ತವಳ ಕರುವನ್ನು ಸಾಗಿಸಲು ಒಂದು ಲಾರಿ ಗೊತ್ತುಮಾಡಿದರು. ಈ ಯಮುನೆಯನ್ನು ಲಾರಿಗೆ ಹತ್ತಿಸುವ ಮಹಾಪ್ರಯತ್ನಗಳು, ಮಹಾಕಾವ್ಯದ ಒಂದು ಅಧ್ಯಾಯವಾಗ ಬಹುದಾಗಿತ್ತು. 'ಅಂಕಲ್ ಪಾಡ್ಜರ್ ಹ್ಯಾಂಗ್ಸ್ ಎ ಪಿಕ್ಚರ್' ಎಂಬ ಲೇಖನದ ನೆನಪಾಗುತ್ತದೆ, ಆ ದೃಶ್ಯಗಳನ್ನು ಜ್ಞಾಪಿಸಿಕೊಂಡಾಗ. ಆ ಪ್ರಾಣಿಯ ಪ್ರಜ್ಞಾಪಾತಳಿಯಲ್ಲಿ, ಈ ಎಲ್ಲ ಗಡಿಬಿಡಿಗಳನ್ನು ಕಂಡು ಯಾವ ಸಂಘರ್ಷ ನಡೆಯುತ್ತಿತ್ತೋ ಬಲ್ಲವರಾರು? ಕರುವನ್ನು ಲಾರಿಯಲ್ಲಿ ಕಟ್ಟಿಹಾಕಿದರು. ಅದನ್ನು ಕಂಡ ಯಮುನೆ ಒಂದೇ ಸಮ ಅರಚತೊಡಗಿದಳು. ಏನು ಮಾಡಿದರೂ ಲಾರಿ ಹತ್ತಿಸಲು ಸಾಧ್ಯವಾಗಲಿಲ್ಲ. ಅಲ್ಲಿ ಸೇರಿದ್ದವರೆಲ್ಲಾ ತಲೆಗೊಂದು ಸಲಹೆ ಕೊಡತೊಡಗಿದರು. ಲಾರಿಯ ಕೆಳಗೊಂದು ಬೆಂಚುಹಾಕಿ, ಕಲ್ಲುಮಣ್ಣು ಹರಡಿ, ಅದರ ಮೇಲೆ ಹುಲ್ಲು ಹಾಕಿ, ಯಮುನೆಯನ್ನು ಲಾರಿ ಹತ್ತಲು ಪುಸಲಾಯಿಸಿದರು. ಉಹುಂ, ಯಮುನೆ ಅಮ್ಮನನ್ನು ದಯನೀಯವಾಗಿ ನೋಡುತ್ತಾ ನಿಂತುಬಿಟ್ಟಳು. ಅವಳಿಗೆ ಹೆದರಿಕೆಯಾಗಿತ್ತೆನಿಸುತ್ತದೆ, ತನ್ನನ್ನು ದೂರ ಎಲ್ಲಿಗೋ ಸಾಗಿಸುತ್ತಾರೆಂದು. ಅಮ್ಮ ಯಮುನೆಯ ಪಕ್ಕದಲ್ಲಿ ನಿಂತು "ನಿನ್ನನ್ನೂ ಜೊತೆಯಲ್ಲಿ ಕರ್‍ಕೊಂಡು ಹೋಗ್ತೀನಿ ಕಣೆ, ಹತ್ತಮ್ಮ" ಎಂದಾಗ ಗೋಣು ಅಲ್ಲಾಡಿಸಿದಳು ಯಮುನೆ. ಅಮ್ಮನೂ ಬೆಂಚಿನ ಮೇಲೆ ಹತ್ತಿ ಯಮುನೆಯ ಮೂಗುದಾರ ಹಿಡಿದು ನಿಂತಾಗ, ಲಾರಿಯೊಳಗಿದ್ದ ಗಂಡಸರು ಧೈರ್ಯವಾಗಿ ಎಮ್ಮೆಯನ್ನು ಲಾರಿಯೊಳಕ್ಕೆ ಎಳೆಯುತ್ತಿದ್ದರು, ಕೆಳಗಿದ್ದವರು ಮೇಲಕ್ಕೆ ನೂಕುತ್ತಿದ್ದರು. ಕಡೆಗೊಮ್ಮೆ ಯಮುನೆ ಲಾರಿಯೊಳಗೆ ತನ್ನ ಕರುವಿನೊಂದಿಗೆ ಹುಲ್ಲು ಮೇಯುತ್ತಾ ನಿಂತಳು. ಹಾಲಿನವಳ ಮನೆಯ ಕೊಟ್ಟಿಗೆಗೆ ಕಷ್ಟದಿಂದಲೇ ಹೊಂದಿಕೊಂಡಳು.

ಪ್ರತಿನಿತ್ಯ ಎರಡುಬಾರಿ ಯಮುನೆಯನ್ನು ಮನೆಗೆ ಕರೆತರುತ್ತಿದ್ದಳು ಹಾಲಿನವಳು. ಅಮ್ಮ ಅಕ್ಕಿ, ಬೆಲ್ಲ, ಅಂಬಲಿ ತಿನ್ನಿಸಿ ಕಳಿಸುತ್ತಿದ್ದರು. ಜೀವನ ಅವಳಿಗೂ ಪಾಠ ಕಲಿಸಿತ್ತೇನೋ, ಒಂದು ಕರು ಹಾಕಿ ಆರೆಂಟು ತಿಂಗಳಲ್ಲಿ ಯಮುನೆ ಸತ್ತುಹೋದಳು.

ತನ್ನ ಮಕ್ಕಳನ್ನು ಪ್ರೀತಿಸಿದಂತೆಯೇ ಮನೆಯಲ್ಲಿ ಹುಟ್ಟಿದ ಯಮುನೆಯೆಂಬ ಎಮ್ಮೆಯನ್ನೂ ಪ್ರೀತಿಸಿದ ಅಮ್ಮ ತನ್ನ ಬದುಕಿನ ಪರಿಧಿಗೆ ಬಂದ ಎಲ್ಲ ಮಕ್ಕಳನ್ನೂ ಎಲ್ಲರನ್ನೂ ಪ್ರೀತಿಸಿದ್ದರು. ಅಮ್ಮನಿಗೆ ಇದು ಹೇಗೆ ಸಾಧ್ಯವಾಯಿತು? ಈ ಅಮ್ಮ-ತತ್ವ ಕೇವಲ ಮನುಷ್ಯಜೀವನ, ಮನುಷ್ಯಲೋಕಕ್ಕೆ ಮಾತ್ರ ಸೀಮಿತವಾದದ್ದಲ್ಲ. ಅಥವಾ ಕೇವಲ ಹೆಣ್ಣಿಗೆ ಮಾತ್ರವಾಗಲೀ, ತಾನು ಹಡೆದ ಸಂತಾನಕ್ಕೆ ಮಾತ್ರವಾಗಲೀ, ಸೀಮಿತವಾದದ್ದಲ್ಲ. ಹಕ್ಕಿಯೊಂದು ತನ್ನ ಸಂತಾನಕ್ಕಾಗಿ ಗೂಡು ಕಟ್ಟುವಾಗ ಅದರ ಜಾಣ್ಮೆಯೇನು, ಆ ಗೂಡಿನ ಸೊಗಸೇನು, ಬಲವಾದ ರಕ್ಷಣೆಯೇನು, ಗಂಡುಹಕ್ಕಿಯ ನೆರವೇನು, ಮೊಟ್ಟೆಯೊಡೆದು ಬಂದ ಪುಟ್ಟಮರಿಗಳಿಗೆ ಗುಟುಕು ಕೊಡುವ ಒಲವೇನು! ಹುಲಿ, ಸಿಂಹ, ಆನೆ, ಕೋತಿ, ಬೆಕ್ಕು, ನಾಯಿ ಮೊದಲಾಗಿ ಎಲ್ಲ ಜೀವಿಗಳಲ್ಲಿ ಅಂತರ್ಗತವಾಗಿ ಇರುವ ಈ ಅಮ್ಮ-ತನ ವನ್ನು ನೋಡುವಾಗ, ಅಮ್ಮ-ತತ್ವ, ಇದೇ ಜಗತ್ತನ್ನು ಆವರಿಸಿಕೊಂಡಿದೆಯೆನ್ನುವ ಪರಬ್ರಹ್ಮ ತತ್ವಕ್ಕಿಂತಲೂ ಮಿಗಿಲಾದದ್ದೆನಿಸುತ್ತದೆ. ಪರಬ್ರಹ್ಮ-ತತ್ವ, ಹೊರಗೆ ಕಾಣಿಸಿಕೊಳ್ಳದಿರುವ ಅಮೂರ್ತ ತತ್ವವಾದರೆ, ಅಮ್ಮ-ತತ್ವ, ಸಕಲ ಜೀವಿಗಳಲ್ಲಿಯೂ ವ್ಯಕ್ತವಾಗುವ ಪರಮಾದ್ಭುತ ಮೂರ್ತತತ್ವ. ಆದರೂ ಇಂದು, ಹೀಗೇಕೆ ಬೀದಿಬದಿಗಳಲ್ಲಿ, ಕಸದ ತೊಟ್ಟಿಗಳಲ್ಲಿ, ಆಸ್ಪತ್ರೆಗಳಲ್ಲಿ ಹಸುಗೂಸುಗಳು ಅನಾಥವಾಗಿ ಬಿದ್ದಿರುತ್ತವೆ? ಹೀಗೇಕೆ ಕೂಸುಗಳ, ಹೆಣ್ಣುಗಳ ಮಾರಾಟಗಳು ನಡೆಯುತ್ತವೆ? ಆ ಮಕ್ಕಳನ್ನು ಹಡೆದವರಲ್ಲಿ ಅಮ್ಮತನವೇ ಇರುವುದಿಲ್ಲವೇ? ಅಂದರೆ ಅಮ್ಮ-ಪ್ರಜ್ಞೆ ಜಾಗ್ರತವಾಗುವುದಕ್ಕೂ ಮಕ್ಕಳನ್ನು ಹಡೆಯುವುದಕ್ಕೂ ಸಂಬಂಧವಿಲ್ಲವೆನಿಸುತ್ತದೆ. ಅಮ್ಮ-ಪ್ರಜ್ಞೆ ಜಾಗ್ರತವಾಗುವ ಮೊದಲೇ, ವಿವಾಹಪೂರ್ವದಲ್ಲಿ ಆತುರ, ಕುತೂಹಲಗಳಿಂದ ತಾನು ಹಡೆದ ಕರ್ಣನನ್ನು ನದಿಯಲ್ಲಿ ತೇಲಿಬಿಟ್ಟ ಕುಂತಿ ಆ ಪ್ರಜ್ಞೆ ಜಾಗ್ರತವಾದ ಮೇಲೆ ಅನುಭವಿಸಿದ ವೇದನೆಗೆ ಮಿತಿಯಿದೆಯೇ? ಅಮ್ಮ-ಪ್ರಜ್ಞೆ ಜಾಗ್ರತವಾಗಿದ್ದಿದ್ದರೆ ಅಸೂಯೆ ಆತುರಗಳಿಂದ ಗಾಂಧಾರಿ ತನ್ನ ಬಸಿರನ್ನೊಡೆದುಕೊಳ್ಳುತ್ತಿದ್ದಳೇ? ಈ ಪ್ರಜ್ಞಾಗ್ರತವಾದರೆ, ಸಹನೆ, ತಾಳ್ಮೆ, ಔದಾರ್ಯಗಳು ಮೂಡುತ್ತವೆ. ಹೆಣ್ಣು ಗಂಡುಗಳ ದೈಹಿಕ ಸಂಪರ್ಕದಿಂದ ಮಕ್ಕಳು ಹುಟ್ಟುವುವು, ನಿಜ. ದೈಹಿಕ ಸಂಪರ್ಕ ಮಾಡುವ ಗಂಡು ಹೆಣ್ಣುಗಳಲ್ಲಿ ಅಮ್ಮ-ಪ್ರಜ್ಞೆ ಜಾಗ್ರತವಾಗಿದ್ದಿದ್ದರೆ, ಅನಾಥ ಮಕ್ಕಳಾಗಲೀ, ಅನಾಥಾಶ್ರಮಗಳಾಗಲೀ, ಗರ್ಭಪಾತ ಗಳಾಗಲೀ ಇಷ್ಟೊಂದು ಸಂಖ್ಯೆಯಲ್ಲಿ ಹೆಚ್ಚಾಗುತ್ತಿರಲಿಲ್ಲ. ಅಮ್ಮ-ಪ್ರಜ್ಞೆ ಜಾಗ್ರತವಾದ ವ್ಯಕ್ತಿಗಳಲ್ಲಿ ವೈಯಕ್ತಿಕ ಹಾಗೂ ಸಾಮಾಜಿಕ ಹೊಣೆಗಳ ಅರಿವಿರುತ್ತದೆ. ಅಮ್ಮ-ಪ್ರಜ್ಞೆ ಸಾಕ್ಷಾತ್ಕಾರವಾದ ವ್ಯಕ್ತಿಯಲ್ಲಿ ಜಗತ್ತಿನ ಎಲ್ಲ ಜೀವಿಗಳ ಬಗೆಗೆ ಪ್ರೀತಿ ವಾತ್ಸಲ್ಯಗಳು ಮೂಡುವುದಲ್ಲದೇ, ತನ್ನ ಬಗೆಗೇ ತನಗೆ ನಿಷ್ಠೆ, ಹಾಗೂ ಬದುಕಿನಲ್ಲಿ ಆಸ್ಥೆ ಮೂಡುತ್ತವೆ. ಇಂಥ ಪ್ರಜ್ಞೆಯ ಪೂರ್ಣ ಸಾಕ್ಷಾತ್ಕಾರವಾದವರು ಮದರ್ ಥೆರೇಸಾ, ಶಾರದಾ ಮಾತೆಯರಂತಾಗುತ್ತಾರೆ. ಅಮ್ಮ-ಪ್ರಜ್ಞೆ ಜಾಗ್ರತವಾದ ವ್ಯಕ್ತಿ ಕಾಡು ಪ್ರಾಣಿಗಳನ್ನೂ ಸಹ ಪಳಗಿಸಿ ಅವಕ್ಕೊಂದು ನಾಗರಿಕ ನೀತಿ, ನಿಯಮಗಳನ್ನು ಅಭ್ಯಾಸ ಮಾಡಿಸುತ್ತಾನೆಂಬುದು ನ್ಯಾಷನಲ್ ಜಿಯೋಗ್ರಫಿಕ್ ಛಾನೆಲ್ ವೀಕ್ಷಕರಿಗೆ ತಿಳಿದಿರುತ್ತದೆ. ಅದೆಷ್ಟು ಪ್ರೀತಿ, ಕಾಳಜಿ ಇದ್ದರೂ ನಿಯಮ ಶಿಸ್ತುಗಳನ್ನು ಕಲಿಸುವ ಹೊಣೆಯನ್ನು ಕಾಣುತ್ತೇವೆ ಅಲ್ಲಿ. ಆದರೆ ಇಲ್ಲಿ ಬೆಳಗಿನ ತಿರುಗಾಟಕ್ಕೆ ಹೊರಟಾಗ ನಾವು ಕಾಣುವುದೇನು? ಒಂದು ಕೈಲಿ ಟೀವಿಯಿಂದ ದಿನಪತ್ರಿಕೆ ಹಿಡಿದು, ಮತ್ತೊಂದು ಕೈಲಿ ತಮ್ಮ ಸಾಕುನಾಯಿಗಳ ಸರಪಳಿ ಹಿಡಿದು, ಶುಚಿಗೊಳಿಸಿದ ರಸ್ತೆಗಳ ನಡುವೆ ನಾಯಿಗಳಿಂದ ಹೊಲಸು ಮಾಡಿಸುವ ಮಹಿಳಾಮಣಿಗಳು ಹಾಗೂ ಮಹನೀಯರು. ನಡುರಸ್ತೆ, ಬೇರೆಯವರ ಮನೆಗಳ ಮುಂಭಾಗ ಇವರಿಗೆ, ಇವರ ನಾಯಿಗಳಿಗೆ ಅತ್ಯಾಕರ್ಷಕ. ಅಮ್ಮ-ಪ್ರಜ್ಞೆ ಜಾಗ್ರತವಾಗಿದ್ದಿದ್ದರೆ, ಇಂತಹ ಹೊಣೆಗೇಡಿತನ ವರ್ತನೆ ಸಾಧ್ಯವಾಗುತ್ತಿರಲಿಲ್ಲ. ಅಮ್ಮ-ಪ್ರಜ್ಞೆ ಜಾಗ್ರತವಾದ ಸಮಾಜದಲ್ಲಿ ಅನಾಥಾಲಯಗಳ, ವೃದ್ಧಾಶ್ರಮಗಳ ಅವಶ್ಯಕತೆ ಇರುವುದಿಲ್ಲ.

ಅಮ್ಮ-ಪ್ರಜ್ಞೆಯ ಸಾಕ್ಷಾತ್ಕಾರದಿಂದ ಎಲ್ಲೆಲ್ಲಿಯೂ ತನ್ನದೇ ಸಂತಾನವನ್ನು ಕಾಣುವಂತಹ ಪ್ರಜ್ಞಾಸ್ತರದ ಹಿಗ್ಗಲಿಕೆ ನಡೆದು, ದ್ರೋಹ, ವಂಚನೆ, ಹಿಂಸೆ, ಕೊಲೆ ಮೊದಲಾದ ನೆಗೆಟಿವ್ ಅಂಶಗಳು ಮರೆಯಾಗುತ್ತವೆ. ದೈಹಿಕವಾಗಿ ಗರ್ಭಧರಿಸಿಯೇ ಅಮ್ಮನಾಗಬೇಕಿಲ್ಲ. ಅಮ್ಮ ಎಂಬುದೊಂದು ಅಮೃತತತ್ವ, ಬೆಳದಿಂಗಳ ಅನುಬಂಧ. ಹೃದಯದಿಂದ ಹೃದಯಕ್ಕೆ, ಪೀಳಿಗೆಯಿಂದ ಪೀಳಿಗೆಗೆ ನಿರಂತರ ಹರಿದುಬರುವ ಭಾವಪ್ರವಾಹ. ವಿಜ್ಞಾನ ಪ್ರಪಂಚದಲ್ಲಿ D.N.A. ಹೇಗೆ ಅವಿನಾಶಿಯೋ, ಹಾಗೆ ಭಾವನೆಗಳ ಮತ್ತು ಹೃದಯಗಳ ಸಾಮ್ರಾಜ್ಯದಲ್ಲಿ ಅಮ್ಮ ಎನ್ನುವ ಅಮೃತತತ್ವ ಅವಿನಾಶಿ.



ಎಲ್. ವಿ. ಶಾಂತಕುಮಾರಿ
ನಂ. ೧೫೮, 'ರಾಮರಕ್ಷ', ೪ನೇ ಮುಖ್ಯರಸ್ತೆ, ೫ನೇ ಕ್ರಾಸ್
ಪೂರ್ಣಪ್ರಜ್ಞ ಲೇಔಟ್, ಬನಶಂಕರಿ ೩ನೆ ಹಂತ, ಬೆಂಗಳೂರು-೫೬೦ ೦೮೫

# ಗಾಂಧೀಜಿಯ ನೆನಪಿನಲ್ಲಿ



ಮೋಹನದಾಸ ಕರಮಚಂದ ಗಾಂಧೀಜಿ ಒಬ್ಬ ನಿಜವಾದ ರಾಜಕಾರಣಿ. ಗಾಂಧೀಜಿಗಿಂತ ಬುದ್ಧಿವಂತರು ನಮ್ಮ ದೇಶದಲ್ಲಿ ಇರಬಹುದು. ವಿವಿಧ ಕ್ಷೇತ್ರಗಳಲ್ಲಿ ಪರಿಣತರಿರಬಹುದು, ತಜ್ಞರಿರಬಹುದು. ಆದರೆ ಇಡೀ ದೇಶದ ಸರ್ವಾಂಗೀಣ ಅಭಿವೃದ್ಧಿಯನ್ನು ಗಮನದಲ್ಲಿರಿಸಿ ಕೊಂಡು ಅವರು ಮಾಡಿಸುವ ಚಿಂತನೆಗಳು ಅಲ್ಲಿರುವುದಿಲ್ಲ. ಹಾಗಾಗಿಯೇ ನಮ್ಮ ದೇಶದಲ್ಲಿ ಒಂದನ್ನು ಮಾಡಲು ಹೋದರೆ ಇನ್ನೊಂದೇ ಆಗಿರುತ್ತದೆ. ಉದ್ಯೋಗ ಸೃಷ್ಟಿಗೆಂದು ಬೃಹತ್ ಕೈಗಾರಿಕೆಗಳು ಸ್ಥಾಪನೆಯಾದವು. ಆದರಿಂದ ಯಂತ್ರಗಳಿಗೆ ಕೆಲಸ ವಾಯಿತೇ ಹೊರತು ಜನರಿಗಲ್ಲ. ಸರ್ಕಾರಿ ಸ್ವಾಮ್ಯದ ಎಷ್ಟೋ ಕೈಗಾರಿಕೆಗಳನ್ನು ದಿಢೀರ್ ಎಂದು ಮುಚ್ಚುವ ಮೂಲಕ ಅದನ್ನೇ ನಂಬಿದ್ದ ಎಷ್ಟೋ ಜನರ ಬದುಕನ್ನು ಬೀದಿಪಾಲು ಮಾಡಿದ್ದೂ ಆಯಿತು. ಹಾಗಾಗಿ ನಿರುದ್ಯೋಗವೇ ಹೆಚ್ಚಾಯಿತು. ಇವತ್ತು ನಮ್ಮ ದೇಶದಲ್ಲಿ ನಿರುದ್ಯೋಗ ಒಂದು ದೊಡ್ಡ ಸಮಸ್ಯೆಯಾಗಿದೆ.

ವಿಜ್ಞಾನದ ಹೊಸ ಆವಿಷ್ಕಾರಗಳಿಂದಾಗಿ ಭೂಮಿ ಬರಡಾಯಿತು. ಜನರ ಬದುಕು ನಿಸ್ಸಾರವಾಯಿತು. ಸಮಸ್ಯೆಗಳು ಹೆಚ್ಚಾದವು. ಭಾವನೆಗಳು ಬತ್ತಿಹೋದವು. ಸ್ವಾರ್ಥ, ಭ್ರಷ್ಟತೆ ತಾಂಡವವಾಡಿದವು. ಆದರೆ ಗಾಂಧೀಜಿಯ ಚಿಂತನೆಗಳು ಜನರ ಬದುಕಿಗೆ ಚೈತನ್ಯ ಕೊಡುವಂತಹವಾಗಿದ್ದವು. ಜೀವನ್ಮುಖಿಯಾಗಿದ್ದವು. ಅವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಚಿಂತನೆಗಳು ಇವತ್ತಿಗೂ ಪ್ರಸ್ತುತ.

ನಮ್ಮ ದೇಶದ ಸಮಸ್ಯೆಗಳು ಬಿಡಿಸಲಾರದ ಕಗ್ಗಂಟಾಗಿ ಇರುವಾಗ ಇವತ್ತೂ ಗಾಂಧೀಜಿಯವರ ಚಿಂತನೆಗಳ ಅನುಷ್ಠಾನವೇ ಅದಕ್ಕೆ ಪರಿಹಾರ. ಗಾಂಧೀಜಿಯವರ ಚಿಂತನೆಗಳು ಒಂದು ದೇಶದ ಜನರ ಬದುಕಿನ ಸಮಗ್ರ ನೋಟಗಳನ್ನು ಒಳಗೊಂಡಿತ್ತು. ಜನರ ಶಾಂತಿಯುತ ನೆಮ್ಮದಿಯ ಬದುಕೇ ಒಂದು ದೇಶದ ಅಭಿವೃದ್ಧಿಯೆಂದು ಭಾವಿಸಿದವರು ಗಾಂಧೀಜಿ. ಅದಕ್ಕಾಗಿಯೇ ಬಡತನ, ಅಸ್ಪೃಶ್ಯತೆಯಂತಹ ಪಿಡುಗುಗಳನ್ನು ನಿವಾರಿಸಲು ಹೋರಾಡಿದರು. ನಮ್ಮ ದೇಶದ ಕನಿಷ್ಠ ವ್ಯಕ್ತಿಯ ಮೈಮೇಲಿರುವಷ್ಟೇ ಬಟ್ಟೆಗಳನ್ನು ತಾವೂ ಧರಿಸಿದರು. ಯಾರೂ ಊಹಿಸಲಾರದಷ್ಟು ಸರಳ ಜೀವನವನ್ನು ತಾವು ನಡೆಸಿ ಇತರರಿಗೆ ಬೋಧಿಸಿದರು. ಚರಕವನ್ನು ಸುತ್ತಿ ಸ್ವಾಭಿಮಾನವನ್ನು ಮೆರೆದರು.

ಮಾತೃಭಾಷೆಯಲ್ಲಿ ಶಿಕ್ಷಣ ಕೊಡಬೇಕೆಂಬ ಚಿಂತನೆಗಳನ್ನು ಮುಂದಿಟ್ಟರು. ಇದರಿಂದ ದೇಶ ಭಾಷೆಗಳ ಮೇಲೆ ಪ್ರೀತಿ, ಅಭಿಮಾನಗಳುಂಟಾಗಿ ಜನರು ಸ್ವಾಭಿಮಾನಿಗಳಾದಾಗ ಸ್ವಾತಂತ್ರ್ಯದ ನಿಜ ಅರ್ಥ ಗೊತ್ತಾಗುತ್ತದೆಂದವರು. ಈ ದಿನ ಕೇವಲ ಹೊಟ್ಟೆಬಟ್ಟೆಗಾಗಿ ಆತ್ಮಾಭಿಮಾನವನ್ನು, ದೇಶಾಭಿಮಾನವನ್ನು ಮರೆತು, ವಿದೇಶಿ ಮೋಹ, ಇಂಗ್ಲಿಷ್ ಮೋಹಗಳನ್ನು ಬೆಳೆಸಿಕೊಂಡು, ಭೋಗ ಸಂಸ್ಕೃತಿಯ ಕಡೆಗೆ ದಾಪುಗಾಲು ಹಾಕುತ್ತ, ಗಾಂಧೀಜಿ ತತ್ವಗಳಿಗೆ ವಿರುದ್ಧವಾಗಿ ನಮಗೇ ಅರಿವಿಲ್ಲದೆ ಗುಲಾಮತನದ ಕಡೆಗೆ ಧಾವಿಸುತ್ತಿದ್ದೇವೆ. ಐವತ್ತೆಂಟು-ಅರುವತ್ತು ವರ್ಷಗಳ ಹಿಂದೆ ಗಾಂಧೀಜಿ ನಡೆಸಿದ ಸ್ವದೇಶಿ ಚಳುವಳಿ ಮಾಯವಾಗಿ ಜಾಗತೀಕರಣದ ನೆಪದಲ್ಲಿ ವಿದೇಶೀ ವಸ್ತುಗಳು ನಮ್ಮ ದೇಶದ ಒಂದು ಸಣ್ಣ ಕಿರಾಣಿ ಅಂಗಡಿಗಳಲ್ಲೂ ರಾರಾಜಿಸುತ್ತಿವೆ. ಮೆಟ್ರೊದಂತಹ ವೈಭವಯುತ ಅಂಗಡಿಗಳ ಸಾಲೇ ತೆರೆದು ನಿಂತಿವೆ. ಭ್ರಷ್ಟತೆ, ಅದಕ್ಷತೆಗಳ ಕಾರಣ ಗುಣಮಟ್ಟವನ್ನು ಕಳೆದುಕೊಂಡ ನಾವು, ಗುಣಮಟ್ಟದ ಹೆಸರಿನಲ್ಲಿ ವಿದೇಶಿ ವಸ್ತುಗಳಿಗೆ ಮಾರುಹೋಗಿ ಆತ್ಮವಂಚನೆಯ ಪ್ರಜ್ಞೆಗೆ ಪರದೆ ಎಳೆದು ನಮ್ಮನ್ನು ನಾವೇ ಸಮರ್ಥಿಸಿಕೊಳ್ಳುತ್ತೇವೆ.

ರಾಜಕಾರಣಿಗಳಿಗೆ ಕನಿಷ್ಠ ಶಿಕ್ಷಣ ಇರಲೇಬೇಕು ಎಂದು ವಾದಿಸುತ್ತೇವೆ. ಉನ್ನತ ಶಿಕ್ಷಣ ಇದ್ದರಂತೂ ಅವರು ಬಹಳ ತಜ್ಞರೆಂದೇ ವರ್ಣಿಸಿ ಮಹಾನ್ ನಾಯಕರಂತೆ ಬಿಂಬಿಸುವುದನ್ನು ಕಾಣುತ್ತಿದ್ದೇವೆ. ಆದರೆ ಇಂದೂ ಕೂಡ ರಾಜಕಾರಣಿಗಳಿಗೆ ಯಾವುದೇ ವಿದ್ಯಾಭ್ಯಾಸದ ಅರ್ಹತೆ ಇರಬೇಕೆಂದಿಲ್ಲ. ಆದರೆ ಗಾಂಧೀಜಿ ದೃಷ್ಟಿಯಲ್ಲಿ, ಅವರ ವಿದ್ಯಾಭ್ಯಾಸದ ಯಾವುದೇ ಅರ್ಹತೆಗಿಂತಲೂ ಅವರ ದೇಶ-ಭಾಷೆಗಳ ಪ್ರೀತಿಯೇ ಮುಖ್ಯ ಅರ್ಹತೆಯಾಗಿ ಇರುತ್ತದೆ. ಬದ್ಧತೆ ಅಥವಾ ಪ್ರೀತಿ ಇದ್ದವನು ದೇಶವನ್ನು ಕಾಪಾಡುತ್ತಾನೆ. ಭಾಷೆಯನ್ನು ಉಳಿಸುತ್ತಾನೆ. ಜನರನ್ನು ರಕ್ಷಿಸುತ್ತಾನೆ. ನಿಜವಾದ ನಾಯಕನಾಗುತ್ತಾನೆ. ಹೃದಯದಿಂದ ಬರುವ ಈ ಭಾವನೆಗೂ ಅವರ ವಿದ್ಯಾರ್ಹತೆಗೂ ಯಾವುದೇ ಸಂಬಂಧವಿಲ್ಲ. ಆದ್ದರಿಂದಲೇ ನಮ್ಮಲ್ಲಿ ರಾಜಕಾರಣಿಗಳಿಗೆ ವಿದ್ಯಾರ್ಹತೆಯ ಮಾನದಂಡವಿಲ್ಲ. ವಯಸ್ಸಿನ ಮಿತಿಯಿಲ್ಲ. ಇವತ್ತು ಗ್ರಾಮ ಪಂಚಾಯ್ತಿ, ತಾಲ್ಲೂಕು ಪಂಚಾಯ್ತಿ ಸದಸ್ಯರಿಗೆ ಅಕ್ಷರಾಭ್ಯಾಸ ಮಾಡಿಸಬೇಕೆಂದು ಸರ್ಕಾರ ಕಾರ್ಯಕ್ರಮವೊಂದನ್ನು ರೂಪಿಸುತ್ತದೆ. ಇದನ್ನು ನೋಡಿ ನಕ್ಕವರೂ ಉಂಟು, ಲೇವಡಿ ಮಾಡಿದವರೂ ಉಂಟು. ಆದರೆ ನಿಜಕ್ಕೂ ತನ್ನ ಹಳ್ಳಿಯ ಬಗ್ಗೆ ಪ್ರೀತಿ ಇರುವ, ತನ್ನ ಹಳ್ಳಿಯ ಜನರ ಬಗ್ಗೆ ಆದರ ಇರುವ ವ್ಯಕ್ತಿ, ತನ್ನ ಹಳ್ಳಿಯ ಉದ್ಧಾರ, ಮಕ್ಕಳಿಗೆ ಶಿಕ್ಷಣ, ಯುವಕರಿಗೆ ಉದ್ಯೋಗ, ರಸ್ತೆ, ನೀರು ಮುಂತಾದ ಮೂಲಭೂತ ಸೌಕರ್ಯಗಳನ್ನು ಒದಗಿಸಿ ಅಲ್ಲಿನ ಜನರ ನೆಮ್ಮದಿಯ ಬದುಕಿಗೆ ಆಸರೆಯಾಗುವಂತಹವರು ಗ್ರಾಮಗಳ ನಿಜವಾದ ಮುಖಂಡರಾಗುತ್ತಾರೆ.

ಅಕ್ಷರಾಭ್ಯಾಸವೇ ಅವರನ್ನು ಮುಖಂಡರನ್ನಾಗಿಸುವುದಿಲ್ಲ. ಅದು ಕೇವಲ ಹೆಚ್ಚಿನ ವಿಚಾರ, ಜ್ಞಾನವನ್ನು ಪಡೆಯಲು ಸಹಾಯಕ. ಸರ್ಕಾರದ ನೀತಿ ಕಾನೂನು ಪ್ರಪಂಚದ ಆಗುಹೋಗುಗಳು ಇವುಗಳನ್ನು ತಿಳಿದುಕೊಳ್ಳಲು, ಅವಲಂಬನೆಯಿಲ್ಲದೆ ವ್ಯವಹಾರಗಳನ್ನು ನಡೆಸಲು ಇದು ಅತ್ಯಗತ್ಯ ಕೂಡ. ಇದು ತಾಂತ್ರಿಕ ವಿಷಯ. ಆದರೆ ಎದೆಯಲ್ಲಿ ಗ್ರಾಮಗಳ ಬಗ್ಗೆ ಪ್ರೀತಿ ಇಲ್ಲದಿದ್ದಲ್ಲಿ, ಕೇವಲ ವಿದ್ಯಾವಂತರಾದ ಮಾತ್ರಕ್ಕೆ ದೇಶಕ್ಕಾಗಿ ಏನೂ ಮಾಡಲಾಗದು. ಇವತ್ತಿನ ಬಹಳಷ್ಟು ರಾಜಕಾರಣಿಗಳಂತೆ ಚುನಾವಣೆಗಳಲ್ಲಿ ಗೆಲ್ಲುವುದು, ಅಧಿಕಾರದ ಕುರ್ಚಿಗಳನ್ನು ಹಿಡಿಯುವುದು, ಗೆಲ್ಲಿಸಿದ ಜನರನ್ನು ಮರೆಯುವುದು. ತಮ್ಮ ಅಕ್ರಮ ದಂಧೆಗಳಿಗೆ ರಾಜಕೀಯ ಆಸರೆ ಪಡೆಯುವುದು, ತನ್ನ ಕ್ಷೇತ್ರದ ಕಡೆಗೆ ಮತ್ತೊಂದು ಚುನಾವಣೆ ಬರುವವರೆಗೆ ತಿರುಗಿ ನೋಡದಿರುವುದು, ಅಲ್ಲಿನ ಜನರ ಸಮಸ್ಯೆಯಾಗಲಿ ಊರು, ಗ್ರಾಮಗಳ, ಅಭಿವೃದ್ಧಿಯ ಬಗ್ಗೆ ಏನಾಗಬೇಕೆಂದಾಗಲಿ ಯೋಚಿಸದೆ ಇರುವ ಬೂಟಾಟಿಕೆ ನಾಯಕಮಣಿಗಳನ್ನು ಕಾಣುತ್ತಿದ್ದೇವೆ.

ಗಾಂಧೀಜಿ ಹೇಳಿದಂಥ ಗ್ರಾಮ ಸ್ವರಾಜ್ಯದ ಕಲ್ಪನೆಯನ್ನೇ ಮರೆತಿದ್ದೇವೆ. ಸಣ್ಣ ಸಣ್ಣ ಅವಶ್ಯಕತೆಗಳಿಗೂ ಎಲ್ಲಿಂದೆಲ್ಲಿಗೋ ಅವಲಂಬಿತರಾಗಿ – ವ್ಯವಸ್ಥೆಗಳು ಮುರಿದುಬಿದ್ದಲ್ಲಿ ಜನರ ಬದುಕು ಅಸ್ತವ್ಯಸ್ತವಾಗುವುದನ್ನು ಕಾಣುತ್ತಿದ್ದೇವೆ. ಹಾಗಾದ ಒಂದು ಕ್ಷಣದಲ್ಲಿ ಮಾತ್ರ ಗಾಂಧೀಜಿ ನೆನಪಾಗುತ್ತಾರೆ; ಮರುಕ್ಷಣದಲ್ಲಿ ಮತ್ತೆ ಮರೆಯುತ್ತೇವೆ. ಯಥಾಪ್ರಕಾರ ಅಕ್ಟೋಬರ್ ೨ರಂದು ಗಾಂಧಿ ಜಯಂತಿ ಆಚರಿಸುತ್ತೇವೆ ಯಾಂತ್ರಿಕವಾಗಿ.

ಗಾಂಧೀಜಿ ಹೇಳಿದಂಥ ಗ್ರಾಮ ಸ್ವರಾಜ್ಯದ ಕಲ್ಪನೆಯನ್ನೇ ಮರೆತಿದ್ದೇವೆ. ಸಣ್ಣ ಸಣ್ಣ ಅವಶ್ಯಕತೆಗಳಿಗೂ ಎಲ್ಲಿಂದೆಲ್ಲಿಗೋ ಅವಲಂಬಿತರಾಗಿ – ವ್ಯವಸ್ಥೆಗಳು ಮುರಿದುಬಿದ್ದಲ್ಲಿ ಜನರ ಬದುಕು ಅಸ್ತವ್ಯಸ್ತವಾಗುವುದನ್ನು ಕಾಣುತ್ತಿದ್ದೇವೆ. ಹಾಗಾದ ಒಂದು ಕ್ಷಣದಲ್ಲಿ ಮಾತ್ರ ಗಾಂಧೀಜಿ ನೆನಪಾಗುತ್ತಾರೆ; ಮರುಕ್ಷಣದಲ್ಲಿ ಮತ್ತೆ ಮರೆಯುತ್ತೇವೆ. ಯಥಾಪ್ರಕಾರ ಅಕ್ಟೋಬರ್ ೨ರಂದು ಗಾಂಧಿ ಜಯಂತಿ ಆಚರಿಸುತ್ತೇವೆ ಯಾಂತ್ರಿಕವಾಗಿ.

**ಕೆ. ಎಸ್. ಪ್ರಭಾ**
'ಅಭಯ', ಒಕ್ಕಲಿಗರ ಕಲ್ಯಾಣ ಮಂಟಪದ ಹತ್ತಿರ
ಸೋಮೇಶ್ವರ ದೇವಸ್ಥಾನದ ರಸ್ತೆ, ಗಂಗಾಧರಪುರ
ದೊಡ್ಡಬಳ್ಳಾಪುರ - ೫೬೧ ೨೦೩, ಬೆಂಗಳೂರು ಗ್ರಾಮಾಂತರ ಜಿಲ್ಲೆ

ಎಸ್. ಸುರೇಂದ್ರ

**ಬೆಂ**ಗಳೂರು ಸಾರಿಗೆ ವ್ಯವಸ್ಥೆ ಸಂಪೂರ್ಣವಾಗಿ ಕುಸಿದುಬಿದ್ದಿದೆ. ಇಲ್ಲಿನ ರಸ್ತೆಗಳು ವಾಹನಚಾಲಕರಿಗೆ ಪಾದಚಾರಿಗಳಿಗೆ ನರಕಸದೃಶವಾಗಿವೆ. ಪ್ರತಿದಿನವೂ ಸಾವಿರಕ್ಕೂ ಮೀರಿದ ವಿವಿಧ ಬಗೆಯ ವಾಹನಗಳು ರಸ್ತೆಗೆ ಬಂದಿಳಿಯುತ್ತಿರುವ ಇಂದಿನ ಗೊಂದಲಮಯ ವಾತಾವರಣವನ್ನು ಮತ್ತಷ್ಟು ಹದಗೆಡಿಸುತ್ತಿರುವುದು ಹಳ್ಳಿಗಾಡಿನ ಓಣಿಗಳನ್ನೂ ನಾಚಿಸುವ ನಗರದ ರಸ್ತೆಗಳು. ಕಳೆದ ವರ್ಷದ ಅಸಾಧಾರಣ ಮಳೆ ಇಲ್ಲಿನ ರಸ್ತೆಗಳ ಗುಣಮಟ್ಟ, ಗುತ್ತಿಗೆದಾರರ ಕಳಪೆ ಕಾಮಗಾರಿ, ನಗರಪಾಲಿಕೆ ಮತ್ತು ಆಡಳಿತ ವರ್ಗಗಳ ಅಲಕ್ಷ್ಯ ಮುಂತಾದ ಅಧ್ವಾನಗಳನ್ನು ಬಯಲುಗೊಳಿಸಿದೆ. ಅವಘಡಗಳು, ಅಪಾರ ಸಾವು ನೋವುಗಳು ದಿನನಿತ್ಯದ ಸುದ್ದಿಯಾಗಿದೆ. ನಾಗರಿಕ ಸೌಲಭ್ಯಗಳಿಗೆ ಕುರುಡಾಗಿರುವ ಮತ್ತು ಕೆಳಮಟ್ಟದ ರಾಜಕಾರಣದಲ್ಲೇ ನಿರತರಾಗಿರುವ ಹಾಗೂ ಯೋಜನಾಧಾರಿತ ಮುನ್ನೋಟವಿಲ್ಲದ ಸರಕಾರಗಳು ಮತ್ತು ಅಧಿಕಾರಶಾಹಿಗಳಿಂದಾಗಿ ಬೆಂಗಳೂರಿನ ನಾಗರಿಕರ ಬವಣೆ ಹೇಳತೀರದಂತಾಗಿದೆ.

೧೯೮೭ರಷ್ಟು ಹಿಂದೆಯೇ ಬೆಂಗಳೂರಿಗೆ ಪರ್ಯಾಯ ಸಾರಿಗೆ ವ್ಯವಸ್ಥೆಯ ಅಗತ್ಯವಿದೆ ಎಂಬ ಮಾತು ಕೇಳಿಬಂದಿತ್ತು. ಕಳೆದ ಎರಡು ಮೂರು ವರ್ಷಗಳಿಂದಲೂ ಮೆಟ್ರೋ ರೈಲು, ಮಾನೋ ರೈಲುಗಳ ಪ್ರಸ್ತಾಪ ತೀವ್ರ ಚರ್ಚೆಗೆ ಗುರಿಯಾಗಿದೆ. ಬೆಂಗಳೂರು ಮೆಟ್ರೋ ರೈಲು ಕಾರ್ಪೊರೇಷನ್ ಎಂಬ ಸಂಸ್ಥೆಯೂ ಅಸ್ತಿತ್ವಕ್ಕೆ ಬಂದಾಗಿದೆ. ಆ ಸಂಸ್ಥೆಯ 'ನಮ್ಮ ಮೆಟ್ರೋ' ಲಾಂಛನ ಸಮಾರಂಭ ಜರುಗಿದ್ದು ಕಳೆದ ತಿಂಗಳುಗಳರಂದು. ಮೆಟ್ರೋ ರೈಲು ಯೋಜನೆಗೆ ಸುಮಾರು ೬೩೦೦ ಕೋಟಿ ರೂಪಾಯಿಗಳಷ್ಟು ವೆಚ್ಚ ತಗಲುವ ಅಂದಾಜಿದೆ. ಈ ಯೋಜನೆಯ ಪರ-ವಿರೋಧದ ಅಭಿಪ್ರಾಯಗಳನ್ನು ತಜ್ಞರು ನಾಗರಿಕರು ವ್ಯಕ್ತಪಡಿಸುತ್ತಿದ್ದಾರೆ.

ಮೆಟ್ರೋ ರೈಲು ಯೋಜನೆಗೆ ತಾನು ಬದ್ಧ ಎಂದು ಸರಕಾರವು ಈಗಾಗಲೇ ಘೋಷಿಸುತ್ತಿರುವ ಸಂದರ್ಭದಲ್ಲೇ ಸಾರಿಗೆ ಕ್ಷೇತ್ರದಲ್ಲಿ ಪರಿಣತರಾಗಿರುವ ತಜ್ಞರು ಆರ್ಥಿಕತೆ ಮತ್ತು ಒಟ್ಟಾರೆಯ ಸೌಲಭ್ಯದ ದೃಷ್ಟಿಯಿಂದ ಮಾನೋ ರೈಲು ವ್ಯವಸ್ಥೆಯ ಉತ್ಕೃಷ್ಟತೆಯನ್ನು ಗಣನೆಗೆ ತೆಗೆದುಕೊಂಡು ಮೆಟ್ರೋ ರೈಲು, ಮಾನೋ ರೈಲು ಮತ್ತು ಈಗಾಗಲೇ ಇರುವ ಬಸ್ಸುಗಳು, ಮೂರನ್ನೂ ಬಳಸಿಕೊಳ್ಳಬಲ್ಲ ಒಂದು ಸಮಗ್ರ ಸಾರಿಗೆ ವ್ಯವಸ್ಥೆಯು ಬೆಂಗಳೂರು ನಗರಕ್ಕೆ ಹೆಚ್ಚು ಸೂಕ್ತ ಎಂಬ ಸಲಹೆಗಳನ್ನು ಅಂಕಿಅಂಶಗಳೊಂದಿಗೆ ಮುಂದಿಟ್ಟಿದ್ದಾರೆ.

ಈ ಹಿನ್ನೆಲೆಯಲ್ಲಿ ಮೆಟ್ರೋ ಮತ್ತು ಮಾನೋ ರೈಲುಗಳಿಂದುಂಟಾಗುವ ಅನುಕೂಲಗಳು ಅನಾನುಕೂಲಗಳು ಎರಡನ್ನೂ ವಸ್ತುನಿಷ್ಠವಾಗಿ ಮೌಲ್ಯಮಾಪನ ಮಾಡುವುದು ಆವಶ್ಯಕ. ನಿಜ, ಬಹುವೇಗದಲ್ಲಿ ಚಲಿಸುವ ಮೆಟ್ರೋನಲ್ಲಿ ಹೆಚ್ಚುಜನರು ಪ್ರಯಾಣಿಸಬಹುದಾಗಿದೆ. ಆದರೆ ಇದಕ್ಕೆ ತಗಲುವ ವೆಚ್ಚ ಅಪಾರ. ಇದಕ್ಕಾಗಿ ನಗರದ ಪ್ರಮುಖ ಬಡಾವಣೆಗಳಲ್ಲಿರುವ ಕಟ್ಟಡಗಳನ್ನು ಕೆಡವಬೇಕು; ಅಲ್ಲದೆ, ಅಷ್ಟೇ ಪ್ರಮುಖವಾಗಿರುವ ರಸ್ತೆಗಳನ್ನು ಅಗೆದು ಸುರಂಗ ಮಾರ್ಗಗಳನ್ನು ನಿರ್ಮಿಸಬೇಕಾದುದು ಅನಿವಾರ್ಯ. ಮಾನೋ ರೈಲು ಯೋಜನೆಗೆ ತಗಲುವ ವೆಚ್ಚ ಮೆಟ್ರೋಗಿಂತ ಶೇ. ೩೦ರಷ್ಟು ಕಡಿಮೆ. ಜತೆಗೆ, ರಸ್ತೆಗಳನ್ನು, ಕಟ್ಟಡಗಳನ್ನು ಹಾಲಿ ಇರುವಂತೆಯೇ ಉಳಿಸಿಕೊಂಡು, ಎಂದರೆ ಹೆಚ್ಚಿನ ಆಸ್ತಿಪಾಸ್ತಿಗಳ ನಷ್ಟವಿಲ್ಲದೆ, ಮಾನೋ ರೈಲಿಗೆ ಅಗತ್ಯವಿರುವ ಮೇಲುಸೇತುವೆಗಳನ್ನು ಕಡಿಮೆ ಅವಧಿಯಲ್ಲಿ ನಿರ್ಮಿಸಬಹುದು. ಮಲೇಷ್ಯಾ, ಅಮೆರಿಕಾ ಮತ್ತು ಯೂರೋಪಿನ ರಾಷ್ಟ್ರಗಳಲ್ಲಿ ಬಹಳ ದೂರದ ಪ್ರಯಾಣಕ್ಕೆ ಮೆಟ್ರೋ ಸಾರಿಗೆ ವ್ಯವಸ್ಥೆಯನ್ನು ಅಳವಡಿಸಿಕೊಂಡು ಹತ್ತಿರದ ಸಂಚಾರಕ್ಕೆ ಮಾನೋ ರೈಲನ್ನು ಯಶಸ್ವಿಯಾಗಿ ಬಳಸಿಕೊಂಡಿರುವ ನಿದರ್ಶನಗಳು ನಮ್ಮ ಮುಂದಿವೆ.

ಮೆಟ್ರೋ ರೈಲು ವ್ಯವಸ್ಥೆಯನ್ನು ದೆಹಲಿಯಲ್ಲಿ ಜಾರಿಗೆತರಲು ಸಾಧ್ಯವಾದದ್ದು ಅಲ್ಲಿನ ಅಗಲವಾದ ರಸ್ತೆಗಳಿಂದಾಗಿ. ಆದರೆ ಬೆಂಗಳೂರಿನಲ್ಲಿ ಅಂತಹ ಪರಿಸ್ಥಿತಿಯಿಲ್ಲ. ಇಲ್ಲಿ ಕಿರಿದಾದ, ಅಲ್ಲಲ್ಲಿ ತಿರುವುಗಳಿರುವ ಮತ್ತು ಇಕ್ಕೆಡೆಗಳಲ್ಲಿ ಕಟ್ಟಡಗಳಿರುವ ರಸ್ತೆಗಳೇ ಹೆಚ್ಚು. ಕೆಲವು ತಜ್ಞರ ಅಭಿಪ್ರಾಯದಂತೆ, ನಗರದ ಸುತ್ತಲೂ ಇರುವ ವರ್ತುಲ ರಸ್ತೆಗಳಿಗೆ ಸಮಾನಾಂತರವಾಗಿ ಮೆಟ್ರೋ ರೈಲುಮಾರ್ಗವನ್ನು ಮತ್ತು ಸೂಕ್ತ ಸ್ಥಳಗಳಲ್ಲಿ ನಿಲ್ದಾಣಗಳನ್ನು (nodals) ನಿರ್ಮಿಸಿ, ಅವುಗಳೊಡನೆ ನಗರದೊಳಗಿನ ಮಾನೋ ರೈಲುಗಳ ಸಂಪರ್ಕವೇರ್ಪಡಿಸುವುದು ಹೆಚ್ಚು ಅನುಕೂಲಕರ. ಮತ್ತು ಇದರಿಂದಾಗಿ ಇಂತಹ ಸಂಪರ್ಕಮಾರ್ಗಗಳು ಬೆಂಗಳೂರು ರೈಲು ನಿಲ್ದಾಣದ ಆಜುಬಾಜಿನ ಪ್ರದೇಶದಲ್ಲಿ ಒಂದೆಡೆ, ಎಂದರೆ ಒಂದು ಕೇಂದ್ರ ನಿಲುಗಡೆ ಸ್ಥಾನದಲ್ಲಿ ಸಂಧಿಸಿ, ಆ ಕೇಂದ್ರದಿಂದ ಪ್ರಯಾಣಿಕರು ತಮಗೆ ಅಗತ್ಯವಿರುವ ಮಾರ್ಗದ ಮಾನೋ ರೈಲನ್ನು ಹತ್ತಲು ಸಾಧ್ಯವಾಗುತ್ತದೆ. ಇಲ್ಲಿ ಒಂದು ಅಂಶ ಮುಖ್ಯ. ದೆಹಲಿ, ಚೆನ್ನೈ, ಮುಂಬಯಿನಂತಹ ಮಹಾನಗರಗಳಿಂದ ಬರುವ ರೈಲುಮಾರ್ಗಗಳನ್ನು ಹೊರತುಪಡಿಸಿ, ಮಿಕ್ಕೆಲ್ಲವೂ ಮೇಲೆ ಹೇಳಿದ ಸಣ್ಣ ನಿಲ್ದಾಣಗಳಲ್ಲಿ (nodal points) ಸಮಾಪ್ತಿಗೊಳ್ಳಬೇಕು. ಇದರಿಂದಾಗಿ ಇಂತಹ ನಿಲ್ದಾಣಗಳು ಉಪನಿಲ್ದಾಣಗಳ ಸ್ವರೂಪ ಪಡೆದುಕೊಳ್ಳುತ್ತವೆ. ಅಲ್ಲದೆ, ಇದರಿಂದಾಗಿ ಬೆಂಗಳೂರು ರೈಲುನಿಲ್ದಾಣದಲ್ಲಿನ ಒತ್ತಡ ನೀಗಿದಂತಾಗುತ್ತದೆ.

# ಬೆಂಗಳೂರು ಸಾರಿಗೆ ವ್ಯವಸ್ಥೆ

## ಮೆಟ್ರೋ ಮಾನೋ ರೈಲುಗಳ ಸುತ್ತಮುತ್ತ



ಮುಖ್ಯಮಂತ್ರಿ ಕುಮಾರಸ್ವಾಮಿ ಅವರ ಸಮ್ಮಿಶ್ರ ಸರಕಾರ ಅಧಿಕಾರ ದೊರಕಿದ ಉತ್ಸಾಹದ ಭರದಲ್ಲಿ ಸ್ವರ್ಗವನ್ನೇ ಧರೆಗೆ ಇಳಿಸಿಬಿಡುವಂತಹ ಹಲವಾರು ಭರವಸೆಗಳನ್ನು ಯೋಜನೆಗಳನ್ನು ಘೋಷಿಸಿಬಿಟ್ಟಿದೆ. ಮುಖ್ಯಮಂತ್ರಿಯವರು ಅಪ್ಪನ ಮಾತನ್ನು ಮೀರಿ ತಾವು ಮೆಟ್ರೋ ರೈಲು ಯೋಜನೆಗೆ ಬದ್ಧರೆಂದು ಸಾರಿ ಹೇಳಿದ್ದಾರೆ. ಕಳೆದ ಮಾರ್ಚ್ ೧೩ರಂದು ಜರುಗಿದ 'ನಮ್ಮ ಮೆಟ್ರೋ' ಲಾಂಛನ ಸಮಾರಂಭದಲ್ಲಿ ರಾಜ್ಯಪಾಲ ಚತುರ್ವೇದಿಯವರು, ನಮ್ಮಂತಹ ಪ್ರಜಾಪ್ರಭುತ್ವವಾದಿ ವ್ಯವಸ್ಥೆಗಳಲ್ಲಿ, ಮೆಟ್ರೋದಂತಹ ಯೋಜನೆಗಳನ್ನು ಜಾರಿಗೆ ತರುವುದು ಅಷ್ಟು ಸುಲಭವಲ್ಲ ಎಂಬ ಮಾರ್ಮಿಕವಾದ ಮಾತುಗಳನ್ನಾಡಿದ್ದಾರೆ. ಈ ಕುರಿತು ಅವರು ಇನ್ನೂ ಹೆಚ್ಚಿನ ವಿವರಣೆ ನೀಡುವ ಅಗತ್ಯವಿತ್ತು.

ಇಂತಹ ಕೋಟ್ಯಂತರ ರೂಪಾಯಿ ವೆಚ್ಚದ ಬೃಹತ್ ಯೋಜನೆಗಳನ್ನು ರೂಪಿಸುವಾಗ ಮತ್ತು ಕಾರ್ಯಗತಗೊಳಿಸುವಾಗ ರಾಜಕೀಯ ಪಕ್ಷಗಳು, ವ್ಯಕ್ತಿಗಳು ಜನತೆಯ ಹಿತದೃಷ್ಟಿಗೆ ಆದ್ಯತೆ ನೀಡಬೇಕೇ ಹೊರತು, ವೈಯಕ್ತಿಕ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳುವುದಕ್ಕಾಗಲಿ, ರಾಜಕೀಯ ಲಾಭ ಪಡೆಯುವುದಕ್ಕಾಗಲಿ ಅಲ್ಲ.

ಹಿಂದೊಮ್ಮೆ, ಇಂತಹ ಯೋಜನೆಗಳನ್ನು ಖಾಸಗಿಯವರಿಗೆ ಒಪ್ಪಿಸಿಬಿಡಬೇಕೆಂಬ ಸಲಹೆಯೂ ಬಂದಿತ್ತು. ಯಾವುದೇ ಬಗೆಯ ಸಾರಿಗೆ ವ್ಯವಸ್ಥೆಯಾಗಲಿ, ಅದು ಸಾರ್ವಜನಿಕ ವಲಯದಲ್ಲೇ ಇರಬೇಕೆಂಬುದು ಬಹು ಮುಖ್ಯ. ಇಲ್ಲದೇ ಹೋದಲ್ಲಿ ಬೆಂಗಳೂರಿನ ಶೇ. ೬೫ರಷ್ಟು ಜನರಿಗೆ (ಕೆಳವರ್ಗದ ಮತ್ತು ಮಧ್ಯಮ ವರ್ಗದವರು) ಕೇವಲ ಲಾಭದ ದೃಷ್ಟಿಯಿಂದಲೇ ವ್ಯವಹರಿಸುವ ಖಾಸಗಿ ಸಾರಿಗೆ ವಾಹನಗಳಲ್ಲಿ ದುಬಾರಿ ದರ ನೀಡಿ ಪ್ರಯಾಣಿಸುವುದು ಸಾಧ್ಯವಾಗುವುದಿಲ್ಲ. ಈಗಾಗಲೇ ವಿವಿಧ ಕ್ಷೇತ್ರಗಳಲ್ಲಿ ಜರುಗುತ್ತಿರುವ ಜಾಗತೀಕರಣ ಪ್ರಕ್ರಿಯೆಯ ಬಿಸಿ ಸಮಾಜದ ಎಲ್ಲ ಸ್ತರದ ಜನವಿಭಾಗಗಳಿಗೆ ತಟ್ಟುತ್ತಿದೆ.

ಮೆಟ್ರೋ ಮತ್ತು ಮಾನೋ ರೈಲುಗಳಂತಹ ವ್ಯವಸ್ಥೆಗಳು ಇಂದಿನ ಸಂದರ್ಭದಲ್ಲಿ ಬೆಂಗಳೂರಿಗೆ ಅತ್ಯಗತ್ಯ ಮತ್ತು ತುರ್ತಾಗಿ ಜಾರಿಗೆ ಬರಬೇಕಾಗಿದೆ ಎಂಬುದನ್ನು ಪರಿಗಣಿಸುತ್ತಲೇ ಇಲ್ಲಿ ವಸ್ತುಸ್ಥಿತಿ ಹಾಗೂ ನಾಗರಿಕರ ಅಗತ್ಯಗಳನ್ನು ಗಣನೆಗೆ ತೆಗೆದುಕೊಂಡಾಗ ನಮಗೆ ಕಂಡುಬರುವುದು ಬಸ್ಸುಗಳು ನಿರ್ವಹಿಸುತ್ತಿರುವ ಮಹತ್ತರವಾದ ಪಾತ್ರ. ಬೇರೆಲ್ಲ ವ್ಯವಸ್ಥೆಗಳಿಗಿಂತ ಶಾಲಾ ಮಕ್ಕಳು, ವಯಸ್ಕರು ಮತ್ತು ಮಹಿಳೆಯರಿಗೆ ತಂತಮ್ಮ ವಲಯಗಳಲ್ಲೇ ಬಸ್ಸು ಹತ್ತುವುದು ಸುಲಭ, ಅನುಕೂಲಕರ.

ಮಾನೋ ರೈಲಿನ ಹೆಗ್ಗಳಿಕೆಯೆಂದರೆ, ಅದಕ್ಕೆ ಅಗತ್ಯವಿರುವ ಮೇಲುಸೇತುವೆಯನ್ನು ಕಿರಿದಾದ ರಸ್ತೆಗಳಲ್ಲೂ, ಕಡಿಮೆ ವೆಚ್ಚದಲ್ಲಿ ಮತ್ತು ಅತಿ ಶೀಘ್ರ ಅವಧಿಯಲ್ಲಿ ಕಟ್ಟಲು ಸಾಧ್ಯವಿದೆ. ಮಾನೋ ರೈಲು ಅತ್ಯಂತ ಕಡಿಮೆ ಅವಧಿಯಲ್ಲಿ ತಿರುವುಗಳನ್ನು ಸುತ್ತಿ ಚಲಿಸಬಲ್ಲದೆಂದು ತಜ್ಞರು ಅಭಿಪ್ರಾಯಪಡುತ್ತಾರೆ. ಅದು ಇತರೆ ಸಾಧಾರಣ ರೈಲುಗಳಿಗಿಂತ ಶೇ. ೫೦ರಷ್ಟು ಕಡಿಮೆ ಅವಧಿಯಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳವನ್ನು ತಲುಪಬಲ್ಲುದು. ಇದರ ನಿರ್ಮಾಣದ ವೆಚ್ಚವೂ ಕಡಿಮೆಯೇ. ಮೆಟ್ರೋನಂತೆ ಈ ಸಾರಿಗೆ ವ್ಯವಸ್ಥೆಯಲ್ಲೂ ಅವಘಡಗಳಿಗೆ ಅವಕಾಶವಿಲ್ಲ; ಪರಿಸರಕ್ಕೆ ಯಾವ



ಹಾನಿಯೂ ಉಂಟಾಗದು. ಮಾನೋ ರೈಲು ಚಾಲ್ತಿಯಲ್ಲಿರುವ ಯಾವ ದೇಶದಲ್ಲಿಯೂ, ಕಳೆದ ಐವತ್ತು ವರ್ಷಗಳಿಂದ ಯಾವ ಅವಘಡವೂ ಸಂಭವಿಸಿಲ್ಲವೆಂಬುದಕ್ಕೆ ದಾಖಲೆಗಳಿವೆ. ಏರುತಗ್ಗಿನ ಪ್ರದೇಶಗಳಲ್ಲೂ ಸಲೀಸಾಗಿ ಚಲಿಸಬಲ್ಲದು.

ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಸರಕಾರವು ಬೆಂಗಳೂರು ನಾಗರಿಕರ ಸಾರಿಗೆ ಸಮಸ್ಯೆಗಳಿಗೆ ಕೂಡಲೇ ಸ್ಪಂದಿಸಿ ಈಗಾಗಲೇ ಕೈಗೆತ್ತಿಕೊಂಡಿರುವ ಮೆಟ್ರೋ ಯೋಜನೆಯನ್ನು ಪುನರ್‌ವಿಮರ್ಶಿಸಬೇಕಿದೆ. ಕಂಪನಿ ಲಾಬಿಗಳು ಮತ್ತು ಕ್ಷುಲ್ಲಕ ರಾಜಕೀಯ ಒತ್ತಾಸೆಗಳನ್ನು ದೂರವಿಟ್ಟು, ಈಗಾಗಲೇ ವಿವರಿಸಿದಂತೆ ಮೆಟ್ರೋ, ಮಾನೋ ಮತ್ತು ಬಸ್ಸು, ಮೂರೂ ವ್ಯವಸ್ಥೆಗಳು ಒಂದಕ್ಕೊಂದು ಪೂರಕವಾಗಿ ನಾಗರಿಕರ ಸಮಸ್ಯೆಗಳನ್ನು ನೀಗಿಸಬಲ್ಲಂತಹ ಸಮಗ್ರ ಸಾರಿಗೆ ಯೋಜನೆಯೊಂದನ್ನು ಜಾರಿಗೆ ತರಲು ಸಾಧ್ಯವಿದೆ. ಇದಕ್ಕಾಗಿ ತಜ್ಞರ ಸಮಿತಿಯೊಂದನ್ನು ನೇಮಿಸಲು ಸರಕಾರ ಮುಂದಾಗಬೇಕು. ಈ ಎಲ್ಲ ವ್ಯವಹಾರಗಳಲ್ಲಿಯೂ ಪಾರದರ್ಶಿಕತೆ ಇರಬೇಕೆಂದು ಜನತೆ ನಿರೀಕ್ಷಿಸುತ್ತಾರೆ. ಇಂತಹ ಒಂದು ಜನಪರ ಯೋಜನೆ ಜಾರಿಗೆ ಬರಬೇಕಾಗಿರುವುದು, ಕುಲಗೆಟ್ಟಿರುವ ರಸ್ತೆಗಳು ದುರಸ್ತಿ ಆಗಬೇಕಾಗಿರುವುದು ನಾರಾಯಣ ಮೂರ್ತಿ, ಪ್ರೇಮ್‌ಜಿ, ಕಿರಣ್ ಮಜುಂದಾರ್ ಅವರಂಥವರಿಗಲ್ಲ, ಜನಸಾಮಾನ್ಯರಿಗಾಗಿ ಎಂಬುದು ಮುಖ್ಯಮಂತ್ರಿಯವರು ನೆನಪಿನಲ್ಲಿಡಬೇಕು.

ಎಸ್. ಸುರೇಂದ್ರ
ನಂ. ೨೪, ೧ನೇ ಅಡ್ಡರಸ್ತೆ, ಕೆನರಾ ಬ್ಯಾಂಕ್ ಕಾಲೋನಿ, ಜಯನಗರ ಪೂರ್ವ, ಬೆಂಗಳೂರು - ೫೬೦ ೦೧೧




ಇದೇ ಮಾರ್ಚ್ ೧೭ರಂದು ಧಾರವಾಡದಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘದ ಸಾಹಿತ್ಯ ಮಂಟಪದ ಆಶ್ರಯದಲ್ಲಿ 'ಹೊಸತು' ಓದುಗರ ಸಭೆಯು ಸನ್ಮಾನ್ಯ ಶ್ರೀ ಚೆನ್ನವೀರ ಕಣವಿ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ ಶಂಕರ ಹಲಗತ್ತಿಯವರ ಸಹಕಾರದಿಂದ ಆಯೋಜಿಸಲ್ಪಟ್ಟಿದ್ದ ಈ ಸಭೆಯಲ್ಲಿ ಓದುಗರು ಅಧಿಕ ಸಂಖ್ಯೆಯಲ್ಲಿ ಪಾಲ್ಗೊಂಡು ತಮ್ಮ ಸಲಹೆಗಳನ್ನು ನೀಡಿದರು. ವಿಶ್ವವಿದ್ಯಾಲಯದ ಅನೇಕ ಪ್ರಾಧ್ಯಾಪಕರು, ವಿದ್ಯಾರ್ಥಿಗಳು ಹಾಗೂ ವಿವಿಧ ಕ್ಷೇತ್ರಗಳ ಗಣ್ಯರು ಪಾಲ್ಗೊಂಡಿದ್ದರು. ಪತ್ರಿಕೆಯ ವತಿಯಿಂದ ಡಾ॥ ಜಿ. ರಾಮಕೃಷ್ಣ, ಡಾ॥ ಎನ್. ಗಾಯತ್ರಿ ಮತ್ತು ಡಾ॥ ಸಿದ್ದನಗೌಡ ಪಾಟೀಲ ಅವರು ಭಾಗವಹಿಸಿದ್ದರು.

> ನಂಬಿ ಕೆಟ್ಟವರಿಲ್ಲವೆಂದು ವಚನಕಾರರು ಹೇಳಿದ್ದಾರೆ. ಆದರೆ ದಿನಕ್ಕೊಬ್ಬರಂತೆ ಪವಾಡಪುರುಷರು ಅವತರಿಸುವ ನಮ್ಮ ಭಾರತ ದೇಶದಲ್ಲಿ, ಇವರನ್ನು ನಂಬಿ ಕೆಡದವರಿದ್ದರೆ ಅದೇ ಒಂದು ಪವಾಡವಾದೀತು. ಇಂತಹವರನ್ನು ನಾವು ಸಂಶಯಿಸದಿರಬೇಕಾದರೆ ನಾವೂ ಒಬ್ಬ ಸನ್ಯಾಸಿಯಾಗಬೇಕಷ್ಟೆ. ಋಷಿಮೂಲ, ನದೀಮೂಲಗಳನ್ನು ಹುಡುಕಬಾರದೆಂದು ನಮ್ಮ ಹಿರಿಯರು ಸುಮ್ಮನೇ ಹೇಳಿಲ್ಲ

# ಸಂಶಯ ಹಾಗೂ ಭ್ರಮೆ

ಸುಬ್ರಹ್ಮಣ್ಯ ಎಸ್. ಆರ್. ಚೊಕ್ಕಾಡಿ

''ಸಂಶಯಾತ್ಮಾ ವಿನಶ್ಯತಿ'' ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣ ಹೇಳಿದ್ದಾನೆ. ಅವನ ದೈವತ್ವವನ್ನು ಇತರರು ಸಂಶಯಿಸದಂತೆ ಅವನೇನೋ ಪೂರ್ವಭಾವಿಯಾಗಿ ಹೀಗೆ ಹೇಳಿದ, ಎಷ್ಟೇ ಆದರೂ ಚತುರ ರಾಜತಂತ್ರಜ್ಞ! ಹಾಗೆಂದು ನಾವು ಇದನ್ನು ನಂಬಬೇಕಾದ ಅಗತ್ಯವೇನೂ ಇಲ್ಲ. ಹಾಗೆ ನಂಬಿದರೆ ನಾವು ಪ್ರಶ್ನಿಸುವ ಮನೋಭಾವವನ್ನೇ ಬಿಡಬೇಕಾಗುತ್ತದೆ. ಅಧ್ಯಾಪಕರಂತೂ ವಿದ್ಯಾರ್ಥಿಗಳು ಪ್ರಶ್ನಿಸದಿದ್ದರೆ 'ಪಾಠದ ಕಡೆಗೆ ಗಮನ ಕೊಡದಿದ್ದರೆ ಪ್ರಶ್ನೆ ಹುಟ್ಟುವುದಾದರೂ ಹೇಗೆ?' ಎಂದು ಮೂಲಕ್ಕೆ ಹೋಗಿ ಅವರ ಜನ್ಮ ಜಾಲಾಡಿಬಿಡುತ್ತಾರೆ.

ಶ್ರೀಕೃಷ್ಣನ ಮಾತನ್ನು ಇನ್ನೂ ಪುಷ್ಟೀಕರಿಸುತ್ತಿರುವವರು ವೈದ್ಯರು. ಸರಿಯೇ! ''ವೈದ್ಯೋ ನಾರಾಯಣೋ ಹರಿಃ'' ಅಲ್ಲವೆ? ಶ್ರೀಕೃಷ್ಣನೂ ಹರಿಯ ಅವತಾರ! ಮಾತಿಗೆ ತಪ್ಪಬಾರದು! ವೈದ್ಯರು ಕೊಟ್ಟ ಮದ್ದಿನ ಮೇಲೆ ನಾವು ಸಂಶಯಿಸಿ ಏನಾದರೂ ಪ್ರಶ್ನಿಸಿದರೆ, 'ನಿಮಗ್ಯಾಕ್ರೀ ಅದೆಲ್ಲ ತರ್ಲೆ ಪ್ರಶ್ನೆಗಳು, ಹೇಳಿದಷ್ಟು ಮಾಡಿ, ಆ ಮದ್ದು ಸೇವಿಸಿ ನಾಲ್ಕು ದಿನ ಕಳೆದು ಬನ್ನಿ' ಎನ್ನುತ್ತಾರೆ. ಮೇಲಾಗಿ ವಿದೇಶೀ ತಜ್ಞರ ಪ್ರಕಾರ ಮದ್ದಿಗಿಂತಲೂ ಹೆಚ್ಚಾಗಿ 'ನಂಬುಗೆ'ಯೇ ಅರ್ಧ ಕಾಯಿಲೆಯನ್ನು ವಾಸಿಮಾಡುತ್ತದೆ. ಆದರೆ ನನ್ನ ಸ್ವಾನುಭವ ಹೇಳುವುದೇ ಬೇರೆ. ನಾನು ನನ್ನ ಕಾಯಿಲೆಗಳಿಗೆ ವೈದ್ಯರಲ್ಲಿಗೆ ಹೋಗಿ ಅವರು ಕೊಟ್ಟ ಮದ್ದನ್ನು 'ಈ ವೈದ್ಯರ ಮದ್ದಿನಿಂದ ನನ್ನ ಆರೋಗ್ಯ ಸಂಪೂರ್ಣವಾಗಿ ಮರುಕಳಿಸುತ್ತದೆ' ಎಂಬ ದೃಢವಾದ ನಂಬುಗೆಯಿಂದಲೇ ಸೇವಿಸುತ್ತೇನೆ. ಆದರೆ ಬಂದ ಕಾಯಿಲೆ ಮಾತ್ರ ಪ್ರೀತಿಯಿಂದ ನನ್ನಲ್ಲೇ ನಂಬುಗೆ ಇಟ್ಟು ಸ್ಥಿರವಾಗಿ ಕುಳಿತುಕೊಳ್ಳುತ್ತವೆ! ಈ ಜಗತ್ತಿನ ಎಲ್ಲರೂ ಹೇಳುವುದು 'ನನ್ನನ್ನು ನಂಬಿ' ಎಂದು ಮಾತ್ರ! 'ನನ್ನನ್ನು ಸಂಶಯಿಸಿ' ಎಂದು ಹೇಳುವ ಭೂಪರು ಯಾರೂ ಇಲ್ಲ. ನಮ್ಮ ತುಳುನಾಡಿನ ಭೂತಗಳೂ ಕೂಡ ಹೇಳುವುದು 'ನಂಬುನಾಯಗ್ ಇಂಬು ಕೊರ್ಪೆ' (ನಂಬಿದವನನ್ನು ಕಾಪಾಡುವೆ) ಎಂದೇ!

ನಂಬಿ ಕೆಟ್ಟವರಿಲ್ಲವೆಂದು ವಚನಕಾರರು ಹೇಳಿದ್ದಾರೆ. ಆದರೆ ದಿನಕ್ಕೊಬ್ಬರಂತೆ ಪವಾಡಪುರುಷರು ಅವತರಿಸುವ ನಮ್ಮ ಭಾರತ ದೇಶದಲ್ಲಿ, ಇವರನ್ನು ನಂಬಿ ಕೆಡದವರಿದ್ದರೆ ಅದೇ ಒಂದು ಪವಾಡವಾದೀತು. ಇಂತಹವರನ್ನು ನಾವು ಸಂಶಯಿಸದಿರಬೇಕಾದರೆ ನಾವೂ ಒಬ್ಬ ಸನ್ಯಾಸಿಯಾಗಬೇಕಷ್ಟೆ. ಋಷಿಮೂಲ, ನದೀಮೂಲಗಳನ್ನು ಹುಡುಕಬಾರದೆಂದು ನಮ್ಮ ಹಿರಿಯರು ಸುಮ್ಮನೇ ಹೇಳಿಲ್ಲ. ಅವುಗಳ ಮೂಲ ತಿಳಿದರೆ ಋಷಿವಾಕ್ಯವನ್ನು ನಂಬುವವರು ಮತ್ತು ನದೀನೀರನ್ನು ಕುಡಿಯುವವರು ಇರಲಾರರು ಎಂಬುದು ನಿಸ್ಸಂಶಯ. ನಾವೆಲ್ಲರೂ ಸಂಶಯದ ನುಡಿಗಳನ್ನು ನಂಬುವವರು. ಹೆಣ್ಣಿನ ಶೀಲದ ಬಗ್ಗೆ ಸಂಶಯಪಡುವುದು ತೀರಾ ಸಾಮಾನ್ಯ. ಆಕೆಯ ನಡೆನುಡಿಗಳನ್ನು ಸಂಶಯಗ್ರಸ್ತ ಕಣ್ಣಿನಿಂದ ಗಮನಿಸುವ ಸಮಾಜ ಗಂಡಿನ ಬಗ್ಗೆ ಒಂದು ವಿಚಿತ್ರವಾದ ಭ್ರಮೆಯನ್ನಿಟ್ಟುಕೊಂಡಿರುವುದೂ ಸತ್ಯ. ಹೆಣ್ಣು, ಗಂಡು ಎನ್ನುವಾಗ ದಂಪತಿಗಳ ಮಾತು ಬರುವುದು ಸಹಜ. ಇವರಲ್ಲಿ ಪರಸ್ಪರ ಪ್ರೀತಿ ಜಾಸ್ತಿ ಇದ್ದಾಗ ಸಂಶಯ ಹುಟ್ಟುತ್ತದೆ ಎಂದು ತಿಳಿದವರು ಹೇಳುತ್ತಾರೆ. ಆಗ ಮನಸ್ತಾಪ ಬರುತ್ತದೆ. ಹಾಗಾದರೆ ಮನಸ್ತಾಪ ಉಂಟಾಗದಂತಹ ದಂಪತಿಗಳಲ್ಲಿ ಪ್ರೀತಿಯ ಅನ್ಯೋನ್ಯತೆ ಇಲ್ಲವೆಂದರ್ಥವೆ? ಅಥವಾ 'ಪ್ರೀತಿ ಜಾಸ್ತಿ' ಎಂದರೆ ಅಗತ್ಯಕ್ಕಿಂತ ಹೆಚ್ಚಾದ ಪ್ರೀತಿ ಎಂದರ್ಥವೆ? ಇರಲಿ, ಸಂಶಯಿಸುವುದು ಘನಸ್ತಿಕೆಯ ಲಕ್ಷಣವಲ್ಲ ಎಂಬ ಭ್ರಮೆಯಲ್ಲಿ ನಾನು ಹಲವು ಸಲ ಮಂಗನಾಗಿದ್ದೇನೆ. ನಾನು ಪದವಿ ಶಿಕ್ಷಣ ಮುಗಿಸಿದ ಹೊಸತರಲ್ಲಿ ಒಬ್ಬ ಹಾಲಕ್ಕಿ ಶಕುನದವನು ನಮ್ಮ ಮನೆಗೆ ಬಂದಿದ್ದ. ಆತ ಬಂದವನೇ ಅವನ ಚಿಕ್ಕ ಡಮರುಗವನ್ನು 'ಕುಟುಂ ಕುಟುಂ' ಎಂದು ಬಾರಿಸುತ್ತಾ ''ನೋಡಿ ಸ್ವಾಮಿ, ನೀವು ನಿಂತ ಭಂಗಿಯಲ್ಲೇ ನಿಮ್ಮ ಲಕ್ಷಣ ತಿಳೀತೈತೆ. ಓದೆಲ್ಲಾ ಮುಗಿಸಿ ಕೆಲಸದ ಚಿಂತೆಯಲ್ಲಿದ್ದೀರಿ. ಇನ್ನಾರು ತಿಂಗಳಲ್ಲಿ ನಿಮಗೆ ಸರ್ಕಾರೀ ನೌಕರಿ ಸಿಗತೈತೆ. ನಿಮ್ಮ ತಲೆಗೆ ಮೂರುಸುತ್ತು ತಂದು ನೂರು ರೂಪಾಯಿಯನ್ನು ನನ್ನ ಕೈಯಲ್ಲಿ ಹಾಕಿ ಸ್ವಾಮಿ'' ಎಂದ. ಆಹಾ! ಯಾರಿಗುಂಟು ಈ ಭಾಗ್ಯವೆನ್ನುತ್ತಾ ಆತನಿಗೆ ನೂರು ರೂಪಾಯಿ ಕೊಟ್ಟುಬಿಟ್ಟೆ. ನಾನು ಇತ್ತ ವರ್ಷವೊಂದು ಕಳೆದರೂ ಕೆಲಸ ಸಿಗದೆ ಒದ್ದಾಟದಲ್ಲಿದ್ದಾಗ ನನ್ನ ತಂದೆ ಕೈಗೆ ಬುಟ್ಟಿಯನ್ನು ಕೊಡುತ್ತಾ 'ಹೋಗು, ತೋಟದಿಂದ ಅಡಿಕೆ ಆರಿಸಿಕೊಂಡು ಬಾ' ಎಂದು ಆದೇಶ ನೀಡಿದರು! ನಂಬಿ ಕೆಟ್ಟಮೇಲೆ ಬುದ್ಧಿಬಂದು ನಾನೀಗ ಎಲ್ಲವನ್ನೂ, ಎಲ್ಲರನ್ನೂ ಸಂಶಯಿಸುತ್ತೇನೆ! ನಂಬುಗೆಯೆಂಬುದು ನೀರಮೇಲಣ ಗುಳ್ಳೆ. ಆಧುನಿಕರಾಗಿ, ನಾಗರಿಕರಾಗಿ ನಾವು ಬದಲಾದಂತೆಲ್ಲಾ ಸಂಶಯವನ್ನು ಜೊತೆಜೊತೆಯಾಗಿ ಪ್ರೀತಿಯಿಂದ ಸಾಕಿ ಸಲಹಬೇಕು. ಇಲ್ಲವಾದರೆ ನಾವು ಸಂಘಜೀವನಕ್ಕೆ ಅರ್ಹರಲ್ಲ. ಸಾಲ ಕೇಳಿದವರನ್ನೆಲ್ಲಾ ನಂಬಿ ಸಾಲಕೊಟ್ಟರೆ ಅದು ತಿರುಗಿ ಬಂದೀತೆ? ಕೇಳಿದವರ ಹಿನ್ನೆಲೆ, ಅವರಿಗಿರುವ ಆಸ್ತಿಯನ್ನರಿಯದೆ ಸಾಲ ಕೊಡುತ್ತಾ ಹೋದರೆ ಬ್ಯಾಂಕುಗಳೂ ಕೂಡ ದಿವಾಳಿ ಎದ್ದಾವು. ನಾನು ನನ್ನೊರ್ವ ಸ್ನೇಹಿತನಿಗೆ ಕಷ್ಟಕಾಲದಲ್ಲಿ ಸಾಲ ಕೊಟ್ಟು ಆತ ನನಗೇ ನಾಮಹಾಕಿ, ಈಗ ರಾಮಾ, ಕೃಷ್ಣಾ ಎನ್ನುವಂತಾಗಿದೆ! ಹಾಗಾಗಿ ಸಂಶಯವನ್ನು ಸದಾಕಾಲ ನಾವು ಜಾಗೃತ ಸ್ಥಿತಿಯಲ್ಲಿರಿಸಿಕೊಂಡು ಬೇಕಾದಾಗ ಅದರ ಉಪಯೋಗವನ್ನು ಪಡೆದುಕೊಳ್ಳಬೇಕು. ಸಂಶಯವು ನಮ್ಮಲ್ಲಿ ಅನೇಕ ಪ್ರಶ್ನೆಗಳನ್ನು ಹುಟ್ಟುಹಾಕುವುದರ ಜೊತೆ ಜೊತೆಗೇ ವೈಚಾರಿಕತೆಯ ಪ್ರಜ್ಞೆಯನ್ನು ಬೆಳೆಸುತ್ತದೆ. ಪುರೋಹಿತಶಾಹೀ ದಬ್ಬಾಳಿಕೆ, ಶೋಷಣೆಯ ಅರಿವು ನಮ್ಮ ಸಮಾಜದಲ್ಲಿ ಈಗ ಉಂಟಾಗಿರಲು ಕಾರಣ ಸಂಶಯವೇ ಹೊರತು ಬೇರೇನೂ ಅಲ್ಲ. ಇದೇ ಸಂಶಯ ಜಾಸ್ತಿಯಾಗಿ ಮಿತಿಮೀರಿದರೆ ಸಿನಿಕತನವಾಗಬಹುದು.

ಅಂತೂ ಸಂಶಯಿಸುವುದು ಮಾನವನ ಮೂಲಭೂತ ಸ್ವಭಾವವೆಂದು ಹೇಳಿದರೆ ತಪ್ಪಾಗಲಾರದು. ನಮ್ಮೂರಿನ ಗುಂಡನ ಪತ್ನಿಯಂತೂ ಇದರಲ್ಲಿ ಅಗ್ರಗಣ್ಯಳು! ದಾರಿಯಲ್ಲಿ ನಡೆದುಕೊಂಡು ಹೋಗುವಾಗ ಏನನ್ನಾದರೂ ತುಳಿದು ಹತ್ತು ಹೆಜ್ಜೆ ನಡೆದ ಮೇಲೆ, 'ಅರೆ, ನಾನೇನಾದರೂ ಹಾವೇ ಮುಂತಾದ ವಿಷಜಂತುಗಳನ್ನು ಮೆಟ್ಟಿರಬಹುದೆ? ನಾನು ತುಳಿದ ಕಡೆ ಹೇಸಿಗೆಯೇನಾದರೂ ಇದ್ದಿರಬಹುದೆ?' ಎಂದು ಸಂಶಯ ಪಡುತ್ತಾಳೆ, ಮಾತ್ರವಲ್ಲ ಜೊತೆಯಲ್ಲಿರುವ ಗುಂಡನನ್ನು ಎಳೆದುಕೊಂಡು ಹೋಗಿ ತಾನು ಹಿಂದೆ ಮೆಟ್ಟಿರಬಹುದಾದಲ್ಲೆಲ್ಲ ಸುತ್ತಾಡಿಸುತ್ತಾಳೆ. ಹೀಗಾಗಿ ಇವರಿಗೆ ಐದು ನಿಮಿಷದ ನಡಿಗೆಗೆ ಹದಿನೈದು ನಿಮಿಷ ಹಿಡಿಯುತ್ತಿತ್ತು! ಈ ದಂಪತಿಗಳ ಸಂಶಯದ ನಡಿಗೆಯನ್ನು ಸವಿಯಲೋಸುಗ ನಾನು ಹಲವಾರು ಸಲ ಇವರ ಹಿಂದೆಯೇ ನಡೆಯುತ್ತಿದ್ದೆ! ಆದರೆ ನನ್ನ ದುರ್ದೈವ; ಮದುವೆಯಾದ ಹೊಸದರಲ್ಲಿ ಗುಂಡನೂ ಗಾಬರಿಪಟ್ಟು ಪತ್ನಿಯ ಹಿಂದೆಯೇ ಓಡುತ್ತಿದ್ದವನು, ಈಗೀಗ ಪತ್ನಿ ತಾನು ನಡೆದ ಹಾದಿಯಲ್ಲಿ ಹಿಂತಿರುಗಿ ನಡೆದರೂ ಈ ಗುಂಡ ಮಾತ್ರ ವಿಚಲಿತನಾಗದೆ ತನ್ನ ಗುರಿಯೆಡೆಗೆ ಮುಂದೆ ಸಾಗುವುದರಲ್ಲೇ ತಲ್ಲೀನನಾಗುತ್ತಿದ್ದಾನೆ. ಹೀಗಾಗಿ ಇವರ ಹಿಂದೆ ನಡೆಯುವುದೆಂದರೆ ನನಗೀಗ ಮೊದಲಿನ ಉಲ್ಲಾಸವೇ ಇರುವುದಿಲ್ಲ. ಬಹುಶಃ ಶ್ರೀಕೃಷ್ಣ ತನ್ನ ಹದಿನಾರು ಸಾವಿರ ಪತ್ನಿಯರಿಂದ ಈ ರೀತಿ ಬಸವಳಿದ ಮೇಲೆಯೇ 'ಸಂಶಯಾತ್ಮಾ ವಿನಶ್ಯತಿ' ಎಂದು ಹೇಳಿದ್ದಿರಬಹುದೆ? ಅದೂ ಅಲ್ಲದೆ ಮತ್ತೂ ಹಿಂದೆ, ಅಂದರೆ ತ್ರೇತಾಯುಗದಲ್ಲಿ ಜನರ ಸಂಶಯದ ನುಡಿಯನ್ನು ನಂಬಿ ಸೀತಾಮಾತೆಗೆ ಕಷ್ಟಗಳನ್ನುಣ್ಣಿಸಿದ್ದಕ್ಕಾಗಿ ಪಶ್ಚಾತ್ತಾಪರೂಪವಾಗಿ ಈ ವೇದವಾಕ್ಯ ಬಂದದ್ದಿರಬಹುದೆ?

ಭ್ರಮೆ ಮತ್ತು ಸಂಶಯಗಳಿಗೆ ಮೂಲ ನಾವು ಕಟ್ಟುವ ಕನಸುಗಳು. ಕನಸುಗಳ ಆರಂಭದಲ್ಲಿ ಸಂಶಯಗಳಿರುತ್ತವೆ. ಕೆಲವು ಕನಸುಗಳು ಸಾಕಾರಗೊಂಡಾಗ ನಮ್ಮಲ್ಲಿ ಅತಿಯಾದ ನಂಬುಗೆ, ಅತಿಯಾದ

ಭ್ರಮೆ ಮತ್ತು ಸಂಶಯಗಳಿಗೆ ಮೂಲ ನಾವು ಕಟ್ಟುವ ಕನಸುಗಳು. ಕನಸುಗಳ ಆರಂಭದಲ್ಲಿ ಸಂಶಯಗಳಿರುತ್ತವೆ. ಕೆಲವು ಕನಸುಗಳು ಸಾಕಾರಗೊಂಡಾಗ ನಮ್ಮಲ್ಲಿ ಅತಿಯಾದ ನಂಬುಗೆ, ಅತಿಯಾದ ಆತ್ಮವಿಶ್ವಾಸ ಹುಟ್ಟಿಕೊಳ್ಳುತ್ತದೆ. ಆಗ ನಮ್ಮನ್ನು ಮೆಲ್ಲನೆ ಭ್ರಮೆ ಆವರಿಸಿಕೊಳ್ಳುತ್ತದೆ. ಇನ್ನು ಸಂಶಯಕ್ಕೆ ಅತಿ ಬುದ್ಧಿವಂತಿಕೆ ಮತ್ತು ಕೀಳರಿಮೆ ಎರಡೂ ಕಾರಣವಾಗಬಹುದು.

---

ಆತ್ಮವಿಶ್ವಾಸ ಹುಟ್ಟಿಕೊಳ್ಳುತ್ತದೆ. ಆಗ ನಮ್ಮನ್ನು ಮೆಲ್ಲನೆ ಭ್ರಮೆ ಆವರಿಸಿಕೊಳ್ಳುತ್ತದೆ. ಇನ್ನು ಸಂಶಯಕ್ಕೆ ಅತಿ ಬುದ್ಧಿವಂತಿಕೆ ಮತ್ತು ಕೀಳರಿಮೆ ಎರಡೂ ಕಾರಣವಾಗ ಬಹುದು. ಭ್ರಮೆ ಮತ್ತು ಸಂಶಯಗಳಿಗೆ ದಂಪತಿಗಳ ಸಾಮರಸ್ಯ. ಭ್ರಮೆ ಗಂಡನಾದರೆ ಸಂಶಯ ಹೆಂಡತಿ. ಸಾಧಾರಣವಾಗಿ ಗಂಡಂದಿರು ತಾವು ಏನೋ ಮಹಾನ್ ತಿಳಿದವರಂತೆ ಭ್ರಮೆಯಲ್ಲಿದ್ದರೆ, ಹೆಂಡಂದಿರು ತಮಗೇನೂ ತಿಳಿದಿರಲಾರದು ಎಂಬ ಸಂಶಯದಲ್ಲಿರುತ್ತಾರೆ! ಇದು ಪುರುಷರ ಅಹಂ ಮತ್ತು ಸ್ತ್ರೀಯರ ವಿನೀತ ಭಾವ ಗಳಿಗೊಂದು ಉದಾಹರಣೆ. ಕೆಲವೊಮ್ಮೆ ಇದು ತಿರುವು ಮುರುವಾಗುವುದೂ ಇದೆ. ಭ್ರಮೆಯ ಒಳಪದರಿನಲ್ಲಿ ಸಂಶಯ ಇಣುಕಿದರೂ ಸಕಾರಾತ್ಮಕ ಚಿಂತನೆಯಿಂದ ಅದನ್ನು ಅಲ್ಲೇ ಸಾರಿಸಿಬಿಡುವ ಕಲೆಯನ್ನು ಭ್ರಮಾಧೀನರು ಅರಗಿಸಿಕೊಂಡಿರುತ್ತಾರೆ. ಹಾಗೆಯೇ ತೀರಾ ಸಂಶಯಗ್ರಸ್ತರನ್ನೂ ನಾವು ಭ್ರಮಾಧೀನರೆಂದೇ ಹೇಳುತ್ತೇವೆ. ಇವರಲ್ಲಿ ಸಕಾರಾತ್ಮಕ ಸಂಶಯಗಳು ಇಣುಕಿದಾಗ ನಕಾರಾತ್ಮಕ ಚಿಂತನೆಯಿಂದ ಪುನಃ ಭ್ರಮೆಗೇ ಹಿಂದಿರುಗುತ್ತಾರೆ. ಸಕಾರಾತ್ಮಕ ಭ್ರಮೆ ನಮಗೆ ಸುಖವನ್ನು ಕೊಟ್ಟರೆ, ನಕಾರಾತ್ಮಕ ಭ್ರಮೆ ದುಃಖ ಕೊಡುತ್ತದೆ. ನಮ್ಮನ್ನು ಭ್ರಮಾಧೀನರನ್ನಾಗಿಸಲು ಟೊಂಕಕಟ್ಟಿ ನಿಂತವರಿಗೇನೂ ಕೊರತೆ ಇಲ್ಲ. ಚಲನಚಿತ್ರಗಳು ನಮ್ಮನ್ನು ಕನಸಿನ ಲೋಕದಲ್ಲಿ ವಿಹರಿಸುವಂತೆ ಮಾಡುತ್ತವೆ. ದೃಶ್ಯ ಮಾಧ್ಯಮಗಳಲ್ಲಿ ಮೂಡಿಬರುತ್ತಿರುವ ಚೆಲುವೆಯರ ಮೈಕಾಂತಿಗೆ, ಅವರ ಹಲ್ಲಿನ ಬಿಳುಪಿಗೆ, ಕೊನೆಗೆ ಅವರ ಎಲ್ಲಾ ಚಟುವಟಿಕೆ ಗಳಿಗೂ ತಮ್ಮ ಉತ್ಪನ್ನಗಳೇ ಕಾರಣ ಎಂದು ಬಿಂಬಿಸುತ್ತಿರುವ ಉತ್ಪಾದಕರ ಜಾಹೀರಾತಿನ ಜಾಣ್ಮೆ ನಮ್ಮನ್ನು ಕನಸಿನ ಭ್ರಮೆಗೆ ಸಿಲುಕಿಸಿಬಿಡುತ್ತವೆ.

ಸಂಶಯ ಮತ್ತು ಭ್ರಮೆಗಳು ಸರ್ವವ್ಯಾಪಿ. ಪೊಲೀಸರ ಮೂಲಭೂತ ಕರ್ತವ್ಯವೇ ಇತರರನ್ನು ಸಂಶಯಿಸುವುದು! ನಾವೇನಾದರೂ ದೂರು ಕೊಟ್ಟರೆ ಅವರ ಮೊದಲ ಪ್ರಶ್ನೆ, 'ಯಾರಲ್ಲಾದರೂ ಸಂಶಯವಿದೆಯೇನು?' ಎಂದಾಗಿರುತ್ತದೆ. ಇನ್ನು ಅಪಘಾತವನ್ನು, ಕೊಲೆಯನ್ನು ಪೊಲೀಸರಿಗೆ ತಿಳಿಸಿದರೆ, ತಿಳಿಸಿದಾತನನ್ನೇ ಸಂಶಯಿಸುವುದು ಪೊಲೀಸರ ಕರ್ತವ್ಯ ಪ್ರಜ್ಞೆಗೆ ಜ್ವಲಂತ ನಿದರ್ಶನವಾಗುತ್ತದೆ! ಇದೇ ತಳಹದಿಯಲ್ಲಿ ನಿಂತ ಸರ್ಕಾರೀ ಅಧಿಕಾರಿಗಳಿಗೆ ನಮ್ಮ ಭಾರತದಲ್ಲೇನೂ ಕೊರತೆಯಿಲ್ಲ. ಬಹಳ ವಿಚಿತ್ರವೆಂದರೆ ಅಹಂಕಾರಜನ್ಯ ಭ್ರಮೆ ತನ್ನ ಬಗ್ಗೆ ಮತ್ತು ತಿರಸ್ಕಾರ ಸಹಿತವಾದ ಸಂಶಯ ಸಮಾಜಬಾಂಧವರ ಮೇಲೆ ಇರುವುದು ಸರ್ಕಾರಿ ಅಧಿಕಾರಿಗಳ common trend ಆಗಿಹೋಗಿದೆ. ಇನ್ನು ಕೋರ್ಟು ಕಲಾಪಗಳಲ್ಲಿ ಆಪಾದಿತರು ಸಂಶಯಪೀಡಿತರು. ಕೊನೆಗೆ ನಿಜವಾದ ಕೊಲೆಗಾರನೇ 'benefit of doubt'ನ ಆಧಾರದಲ್ಲಿ ಬಿಡುಗಡೆಯಾಗಿ ಅಮಾಯಕನಿಗೆ ಶಿಕ್ಷೆ ಕಾದಿರುವುದೂ ಇದೆ. ಅಂತೂ ಸಂಶಯದಲ್ಲೂ ಲಾಭವಿದೆಯೆಂಬುದು ಇದರಿಂದ ತಿಳಿಯುತ್ತದೆ! ಈ ನಮ್ಮ ಜಗತ್ತಿನ ವಿವಿಧ ದೇಶಗಳು ಪರಸ್ಪರ ಸಂಶಯದಲ್ಲೇ ಕೈಕುಲುಕಿ ಕೊಳ್ಳುತ್ತವೆ. ಅಮೆರಿಕಾವಂತೂ ಇಡೀ ಜಗತ್ತಿಗೇ ತಾನೊಡೆಯನೆಂಬ ಭ್ರಮೆಯಲ್ಲಿ ತನ್ನನ್ನು ಬಿಟ್ಟು ಉಳಿದೆಲ್ಲರನ್ನೂ ಸಂಶಯಿಸಿ ಕೊಳ್ಳೆಹೊಡೆಯುವ ಹುನ್ನಾರದಲ್ಲಿದೆ. ಭ್ರಮೆಯ ಪೊರೆ ಕಳಚಿದರೂ ಅಲ್ಲೇ ಮತ್ತಷ್ಟು ಮುದುಡಿಕೊಳ್ಳುವ ಆಸೆ! ಸಂಶಯದ ಬೀಜ ಎಂದಿಗೂ ಗೊಡ್ಡಾಗಿರುವುದಿಲ್ಲ, ಎಲ್ಲವೂ ಮೊಳಕೆ ಬರುವಂತಹವೇ ಆಗಿರುವುದು ಸಂಶಯದ ಹೆಗ್ಗಳಿಕೆ. ಇತರರು ಮಾಡಿದ ಒಳ್ಳೆಯ ಕೆಲಸಗಳಲ್ಲೂ ಹುಳುಕನ್ನು ಹುಡುಕಲು ನೆರವಾಗುವುದು ಸಂಶಯವೇ. ನಮ್ಮ ಸಂಶಯ ಇತರರಿಗೆ ಕಿರಿಕಿರಿಯುಂಟುಮಾಡುವುದೂ ಉಂಟು. ನಮ್ಮೂರಿನ ಸಂಚಾರಿ ವೈದ್ಯರೊಬ್ಬರು Dr. Doubt ಎಂದೇ ಪ್ರಸಿದ್ಧರು ಎಂದು ನನ್ನ ತಾಯಿ ಹೇಳುತ್ತಿರುತ್ತಾರೆ. ಆ ವೈದ್ಯರು ಮನೆಗೆ ಬಂದಾಗ ಕುಡಿಯಲು ಬಿಸಿನೀರು ಕೊಟ್ಟರೆ, ಅವರು ಅದನ್ನು ಮೂಸಿನೋಡುತ್ತಾ ಮುಖದಲ್ಲಿ ಒಂದು ಸಂಶಯದ ಎಳೆಯನ್ನು ಬಿಂಬಿಸುತ್ತಾ 'ಇದು ಬಿಸಿನೀರು ತಾನೆ? ಸರಿಯಾಗಿ ಕುದ್ದಿದೆಯಾ? ಪಾತ್ರೆ ಸರಿಯಾಗಿ ತೊಳೆದಿತ್ತಾ?' ಎಂದು ಮುಂತಾಗಿ ತರಲೆ ಪ್ರಶ್ನೆಗಳನ್ನು ಕೇಳಿ ತಂದವರ ತಲೆ ತಿಂದುಬಿಡುತ್ತಿದ್ದರಂತೆ. (ಅಂದ ಹಾಗೆ ಇವರು ಪಶುವೈದ್ಯರಂತೆ. ಆದ್ದರಿಂದಲೇ ಇರ ಬಹುದೆ, ಇವರು ಕೊಟ್ಟದ್ದೆಲ್ಲವನ್ನು ಮೂಸಿ ನೋಡಿಯೇ ಪರೀಕ್ಷಿಸುತ್ತಾ ಇದ್ದದ್ದು?) ಹೀಗೆ ಪ್ರತಿಯೊಂದು ವಿಷಯಕ್ಕೂ ಸಂಶಯಪಡುತ್ತಿದ್ದ ಈ ವೈದ್ಯರಿಗೆ ಬುದ್ಧಿಕಲಿಸಲು ನನ್ನಜ್ಜಿ ಒಮ್ಮೆ ಕೊಳೆತು ನಾರುತ್ತಿರುವ ಕ್ಯಾಬೇಜ್ ಬೆರೆತ ನೀರನ್ನು ಕೊಟ್ಟರಂತೆ. ಎಂದಿನಂತೆ ಮೂಸಿನೋಡಿದ ವೈದ್ಯರು, ಪ್ರಶ್ನಿಸಲು ತೆರೆದ ಬಾಯಿಂದ ವಾಂತಿಮಾಡಲು ಹೊರಟರಂತೆ. ಅಂದಿಗೇ ಕೊನೆಯಾದ ಅವರ ಪ್ರಶ್ನಾವಳಿ ಮತ್ತೆಂದಿಗೂ ಮರುಕಳಿಸಲಿಲ್ಲವಂತೆ! ಈ ವೈದ್ಯರಿಗೆ ಸಂಶಯಪಿಶಾಚಿ ಹಿಡಿದ ಕತೆಗೆ ಇವರ ಪರಿಸರ ಪ್ರೇಮವೇ ಕಾರಣವಂತೆ. ಹಿಂದೊಮ್ಮೆ ತಮ್ಮ ಪತ್ನಿ ಕೊಟ್ಟ ಚಹಾವನ್ನು ಇವರು ಸಂಜೆಯ ವಿರಾಮಕುರ್ಚಿಯಲ್ಲಿ ಕುಳಿತು ಆನಂದದಿಂದ ಕುಡಿಯಲು ಆರಂಭಿಸಿದರಂತೆ. ನಾಲ್ಕಾರು ಗುಟುಕು ಚಹಾ ಕುಡಿದಿರಬಹುದು, ಅಷ್ಟರಲ್ಲಿ ಮೇಲೆ ಗೆಲ್ಲಿನಲ್ಲಿ ಕುಳಿತಿದ್ದ ಕಾಗೆಯೊಂದು ಹಾಕಿದ ಹಿಕ್ಕೆ ಇವರ ಮೂಗಿನ ತುದಿಗೆ ಬಿದ್ದು ಅಲ್ಲಿಂದ ಸೀದಾ ಚಹಾದ ಗ್ಲಾಸಿಗೇ ಬಿತ್ತಂತೆ! ಈ ಪ್ರಕರಣದ ನಂತರ ಗ್ಲಾಸಿನಲ್ಲಿ ಕೊಡುವ ಯಾವುದೇ ಪಾನೀಯವನ್ನಾದರೂ ಮೂಸಿನೋಡಿ ಸಂಶಯಿಸುವ ಅಭ್ಯಾಸ ಈ ವೈದ್ಯರದ್ದಂತೆ!



..."ಇನ್ನು ಮುಂದೆ ರಾಜ್ಯದಲ್ಲಿ ಜಾತ್ಯಾತೀತವಾದಂತಹ ಕೋಮುವಾದ!"

ಒಟ್ಟಿನಲ್ಲಿ ಭ್ರಮೆಯ ಭೂತ ಎಲ್ಲರನ್ನೂ ಕಾಡಿದೆ. ದುರ್ಯೋಧನ ಮಯನಿರ್ಮಿತ ಸಭಾಮಂಟಪದ ನೆಲವನ್ನು ಜಲವೆಂದು, ಜಲವನ್ನು ನೆಲವೆಂದು, ಬಾಗಿಲನ್ನು ಗೋಡೆ ಎಂದು, ಗೋಡೆಯನ್ನು ಬಾಗಿಲೆಂದು ಭ್ರಮಿಸಿ ಹಣೆಯಲ್ಲಿ ಬುಗುಟ ಬರಿಸಿಕೊಂಡು, ಮುಗುಟವನ್ನು ನೆನೆಸಿಕೊಂಡು ಪೇಚಿಗೀಡಾದ. ಅಲ್ಲಿ ಭ್ರಮೆಯಲ್ಲದ್ದು ಹಣೆಯ ಬುಗುಟ ಮಾತ್ರ! ಇನ್ನು ದ್ರೋಣ, ಮಗ ಚಿರಂಜೀವಿ ಎಂದು ತಿಳಿದಿದ್ದರೂ ಕೂಡ ಧರ್ಮಜನ ಮಾತನ್ನೇ ಸತ್ಯ ಎಂದು ಭ್ರಮಿಸಿದ ದ್ರೋಣ, ಧರ್ಮರಾಯನನ್ನು ನಂಬಿ ಮೋಸಹೋದ. ಇದರಿಂದ ನಾವು ಕಲಿಯಬಹುದಾದ ಸರಳಪಾಠ ವೆಂದರೆ, 'ಯಾರನ್ನೇ ಆಗಲಿ ನೀನು ನಂಬಬೇಡ, ಸಂಶಯಿಸು' ಎಂದು! ಶಿವ ತನ್ನ ಸಹೋದ್ಯೋಗಿ ವಿಷ್ಣುವಿನ ಮೋಹಿನಿ ವೇಷವನ್ನು ನಿಜವೆಂದು ಭ್ರಮಿಸಿ ಅವಳನ್ನೇ ಮೋಹಿಸಿದ. ಹೀಗೆ ಇನ್ನೂ ಅನೇಕ ನಿದರ್ಶನಗಳು ನಮ್ಮೆದುರಿಗಿವೆ. ಹೀಗಾಗಿ ಭ್ರಮೆ ಭದ್ರವಾದ ಅಡಿಪಾಯ ಹಾಕಿಯೇ ನಮ್ಮ ಮೇಲೇರಿ ಕುಳಿತಿದೆ. ವಯಸ್ಸಾದ ಹಿರಿಯರಿಗೆ ತಾವು 'ಮಾಗಿದವರು' ಎಂಬ ಭ್ರಮೆಯಿದ್ದರೆ, ಕೆಚ್ಚೆದೆಯ ಯುವಕರಿಗೆ ಹಳತೆಲ್ಲವೂ ಕೊಳೆತ ಹಣ್ಣೆಂಬ ಭ್ರಮೆ! ಬಾಲ್ಯದ ಹಲವು ನಂಬುಗೆಗಳ ಬಂಧನದಲ್ಲಿ ಸಿಲುಕಿ ಆಸ್ತಿಕ ನಾಗಿರುವ ಬಾಲಕ ಯುವಕನಾದಾಗ ಸಂಪ್ರದಾಯ, ದೇವರು, ಡಂಭಾಚಾರ ಮುಂತಾದುವೆಲ್ಲವನ್ನೂ ಹರಿದೊಗೆದು ಭ್ರಮೆಯಿಂದ ಕಳಚಿಕೊಳ್ಳುತ್ತಾನೆ. ಆದರೆ ಕಾಲ ಉರುಳಿದಂತೆ ಪುನಃ ಮೊದಲಿನ ಭ್ರಮಾ ಪ್ರಪಂಚಕ್ಕೆ ತೆವಳಿ ಮುದುಡಿಕೊಳ್ಳುತ್ತಾನೆ.

ಭ್ರಮೆಯಲ್ಲಿ ಮಾತು ಬರದೆ ತಲೆಯಲ್ಲೇ ಘನವಾಗಿ ಕುಳಿತಿರುತ್ತದೆ. ಆದರೆ ಸಂಶಯದಲ್ಲಿ ಮಾತು ಪಿಸುದನಿ ಯಾಗಿ ಹೊರಹೊಮ್ಮುತ್ತದೆ. ಹೀಗೆ ಭ್ರಮೆ ಮಾತನ್ನು

ಘನೀಕರಿಸಿದರೆ ಸಂಶಯ ಮಾತನ್ನು ದ್ರವೀಕರಿಸುತ್ತದೆ. ಈ ಭ್ರಮೆ ಮನುಷ್ಯನನ್ನೇ ಅಹಂಕಾರದ ಅಮಲಿಗೇರಿಸಿ ಲೋಕವನ್ನೇ ಹಾಳುಮಾಡಬಲ್ಲದು. ನಮ್ಮ ದೇಶದ ನಾಯಕರು ಹಲವು ಸಲ ಇಂತಹ ಅಮಲಿಗೇರುವುದನ್ನು, ಆ ಮೂಲಕ ನಮ್ಮ ನೆಮ್ಮದಿ ಹಾಳಾಗುವುದನ್ನು ದಿನನಿತ್ಯ ಗಮನಿಸಬಹುದು.

ನಾನು ಮೊನ್ನೆ ತಾನೇ ಒಂದು ಕವಿಗೋಷ್ಠಿಗೆ ಹೋಗಿದ್ದೆ. ಕವನ ಎಂದರೇನೆಂದು ತಿಳಿಯದವರೂ ಕೂಡ ಕವನ ವಾಚಿಸುತ್ತಿದ್ದಾಗ ನನಗೆ ಫಕ್ಕನೆ ನೆನಪಾದದ್ದು ಕವಿರಾಜಮಾರ್ಗದ "ಕುಱಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್" ಎಂಬ ವಾಕ್ಯ! ಬಹುಶಃ ಇಂತಹ ಅಪಕ್ವ ಕಾವ್ಯಪ್ರಯೋಗಗಳನ್ನು ಗಮನಿಸಿ, ಕಾವ್ಯದ ಬಗ್ಗೆ ಏನೂ ತಿಳಿಯದಿದ್ದರೂ, ತಿಳಿದಿದೆ ಎಂಬ ಭ್ರಮೆಯಲ್ಲಿ ಕಾವ್ಯ ರಚಿಸುತ್ತಿದ್ದರು ಎಂದು ವ್ಯಂಗ್ಯವಾಗಿ ಕವಿ ಹೀಗೆ ಹೇಳಿದ್ದಿರಬಹುದೆ ಎಂಬ ಸಂಶಯ ನನಗೆ ಬರುತ್ತಿದೆ!

ಕೊನೆಯದಾಗಿ, ಸಾಹಿತ್ಯಲೋಕದತ್ತ ಸಂಶಯದಿಂದ ನೋಡಿದರೆ ತಮ್ಮಷ್ಟು ದೊಡ್ಡ ಸಾಹಿತಿಗಳು ಇನ್ನಾರೂ ಇಲ್ಲವೆಂಬ ಭ್ರಮೆಯಲ್ಲಿ ತೇಲಾಡುವ ಸಾಹಿತಿಗಳನ್ನು, ತಾವು ಮಹಾನ್ ವಿಶ್ಲೇಷಕರೆಂಬ ಭ್ರಮೆಯಲ್ಲಿ ಇರುವ ವಿಮರ್ಶಕರನ್ನು ಕಾಣಬಹುದು. ಸಂಶಯ ಇಲ್ಲದೆ ಇದ್ದರಂತೂ ವಿಮರ್ಶಕರ ಅಸ್ಮಿತೆಯೇ ನಾಶವಾದಂತೆ! ಹಾಗೆಯೇ ಸಾಹಿತಿಗೆ ಹಲವು ಸಲ ವಸ್ತುನಿಷ್ಠ ವಿಮರ್ಶೆ ಕೂಡ ಪೂರ್ವಗ್ರಹಪೀಡಿತ ಎಂಬ ಸಂಶಯವೇ ಕಾಡುತ್ತದೆ. ಈಚೆಗೆ ನನ್ನ ಸ್ನೇಹಿತನೊಬ್ಬ ಕಥಾಸಂಕಲನವೊಂದನ್ನು ಪೀಠಸ್ಥಗೊಳಿಸಿದ್ದಾನೆ. ಮುನ್ನುಡಿ, ಬಿಚ್ಚುನುಡಿ, ನೇರನುಡಿ, ಒಳನುಡಿ, ಒಲವಿನ ನುಡಿ, ಚೆನ್ನುಡಿ, ನಲ್ಮೆಯನುಡಿ, ಬೆನ್ನುಡಿ – ಹೀಗೆ ಬೇರೆ ಬೇರೆ ಸಾಹಿತಿ ವರೇಣ್ಯರಿಂದ 'ಅಷ್ಟದಿಗ್ಬಂಧನ'ಗೊಳಿಸಿಕೊಂಡ ಕಥಾ ಸಂಕಲನವನ್ನು ಭೇದಿಸಿ ಅದ್ಯಾವ ವಿಮರ್ಶಕನೂ ಕಿಡಿನುಡಿಯನ್ನು ಬರೆಯಲಾರನೆಂಬ ಭ್ರಮೆಯಲ್ಲಿ ನನ್ನ ಸ್ನೇಹಿತ ಬೀಗಿಕೊಂಡಿದ್ದಾನೆ.

ಕವಿಗೋಷ್ಠಿ ಅಥವಾ ಸಾಹಿತ್ಯಗೋಷ್ಠಿಯಲ್ಲಿ ಕವನ ಯಾ ಪ್ರಬಂಧ ಮಂಡನೆಗೆ ನೀವು ಹೊರಟಾಗ ಕಾರ್ಯಕ್ರಮ ನಿರ್ವಾಹಕರು ನಿಮ್ಮನ್ನು 'ರಾಜ್ಯಕ್ಕೇ ಮೇರುಪುರುಷ'ರೆಂಬ ಭ್ರಮೆಯಲ್ಲಿ ಸಿಲುಕಿಸಲು ಇನ್ನಿಲ್ಲವೆಂಬಂತೆ ಹೊಗಳುತ್ತಾರೆ. ಅರೆರೆ, ಎಲ್ಲವನ್ನೂ ಸಂಶಯಿಸುವ ನೀವು ಈ ಹೊಗಳಿಕೆಯನ್ನು ಮಾತ್ರ ನಂಬಿಬಿಡುತ್ತೀರಾ! ಆದರೆ ಪ್ರೇಕ್ಷಕರು ನಿಮ್ಮಂತಲ್ಲ ಸ್ವಾಮಿ, ಅವರು ಸಂಶಯ ಪೀಡಿತರೇ, ನಿಮ್ಮ ಕುರಿತಾದ ಹೊಗಳಿಕೆಯನ್ನು ನಂಬುವುದೇ ಇಲ್ಲ! ಇರಲಿ, ನೀವು ನಿರ್ವಾಹಕನ ಮಾತನ್ನು ನಂಬಿ ಸಂಭ್ರಮಿಸಿದರೆ ಭ್ರಮಾಲೋಕಕ್ಕೆ ಹೋಗುತ್ತೀರಿ, ನಂಬದಿದ್ದರೆ ಸಂಶಯದ ಲೋಕಕ್ಕೆ ಹೋಗುತ್ತೀರಿ, ಆಯ್ಕೆ ನಿಮ್ಮದೇ. ನನ್ನನ್ನು ಕೇಳುವುದಾದರೆ ಸಂಶಯಕ್ಕೆ ಕೊನೆಹಾಡಿ ವಿಶ್ರಾಂತಿ ಪಡೆಯುವುದೇ ಲೇಸು, ಯಾಕೆಂದರೆ Petrarch ಹೇಳಿದಂತೆ "The end of doubt is the beginning of repose".

**ಸುಬ್ರಹ್ಮಣ್ಯ ಎಸ್. ಆರ್. ಚೊಕ್ಕಾಡಿ**
ನೇಣಾರು ಮನೆ, ಚೊಕ್ಕಾಡಿ ಅಂಚೆ
ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ - ೫೭೪ ೨೧೨

## ನನ್ನ ಸೃಷ್ಟಿಗೆ ಬೆಂಕಿ ಬೀಳಲಿ



**ಅ**ವರು ಅಲ್ಲಿ ರಕ್ತ ಸಿಕ್ತ ಕೈಗಳಲ್ಲಿ
ಪ್ರೇತಗಳ ಚಿತ್ರಬಿಡಿಸದಿರುತ್ತಿದ್ದರೆ
ನಾನಿಲ್ಲಿ ಬರೆಯುವುದೇನನ್ನು ?

ಅವರು ಅಲ್ಲಿ ಪಾಪಗಳ ಸುಳಿಗೆ ಸಿಕ್ಕಿ
ಕೊರಳಿಗೆ ಉರುಳಾಗಿ ಉಸಿರು ನಿಲ್ಲಿಸದಿರುತ್ತಿದ್ದರೆ
ನಾನಿಲ್ಲಿ ಹೇಳುವುದೇನಿತ್ತು ?

ಅವರು ಅಲ್ಲಿ ಮೇಜಿನಡಿ
ಬಡವರ ಅಸ್ಥಿಪಂಜರವನ್ನು ಕುಕ್ಕಿತಿಂದು
ಮೇಜವಾನಿ ನಡೆಸದಿರುತ್ತಿದ್ದರೆ
ನಾನಿಲ್ಲಿ ಹಾಡುತ್ತಿದ್ದೆನೆ ?

ಅವರು ಅಲ್ಲಿ ಹಸಿರು ಚಪ್ಪರವನ್ನು
ಕೆಳಗೆ ಬೀಳಿಸಿ ತರಗೆಲೆಯಲ್ಲಿ
ತಮ್ಮ ಗೊಬ್ಬರ ತಯಾರಿಸದಿರುತ್ತಿದ್ದರೆ
ನಾನಿಲ್ಲಿ ನುಡಿಸಲು ಸಾಧ್ಯವಿತ್ತೆ ?

ಅವರು ಅಲ್ಲಿ ಜೇನುಗೂಡಿಗೆ ಕಿಚ್ಚಿಟ್ಟು
ಮಧುಪಾನದಲಿ ಮದೋನ್ಮತ್ತರಾಗಿ
ಕೇಕೆಹಾಕಿ ಕುಣಿದಾಡದಿರುತ್ತಿದ್ದರೆ
ನಾನಿಲ್ಲಿ ಚಿತ್ರಿಸಲು ಆಗುತ್ತಿತ್ತೆ ?

* * *

ನನ್ನ ಸೃಷ್ಟಿಗೆ ಬೆಂಕಿ ಬೀಳಲಿ
ಓ ದೇವರೆ ದಯಮಾಡಿ
ಅವರು ಮಾತ್ರ ಹಾಗೆ ಮಾಡದಿರಲಿ.

■ ರವಿಶಂಕರ ಒಡ್ಡಂಬೆಟ್ಟು, ಅಭ್ಯುದಯ ಪ್ರೆಸ್ ಬಳಿ, ಅಂಚೆ : ಕನ್ಯಾನ - ೫೭೪ ೨೭೯, ಬಂಟ್ವಾಳ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ

# 'ಚುಕ್ಕಿಚಿನ್ನ' ಎಂಬ ಕಿಂದರಿಜೋಗಿ

ಶಿಕ್ಷಣ ನಿಂತ ನೀರಲ್ಲ, ಅದು ತನ್ನ ಆಯಾಮಗಳನ್ನು ಬದಲಿಸಿಕೊಳ್ಳುತ್ತಾ ಇಂದು ವಿವಿಧ ಮಾಧ್ಯಮಗಳ ಮೂಲಕ, ವಿವಿಧ ವಿನ್ಯಾಸಗಳಲ್ಲಿ ರೂಪಾಂತರಗೊಳ್ಳುತ್ತಾ ಸಾಗಿದೆ : ಒಂದೆಡೆ ದೇಶೀಯ ಅರಿವಿನ ಕಡೆಗೆ ಒಲವು ತೋರಿಸುತ್ತ, ಪ್ರಾಥಮಿಕ ಶಿಕ್ಷಣವು ಜಾಗತೀಕರಣ ಗೊಳ್ಳುತ್ತಾ ಸಾಗಿದೆ. ಪ್ರಾಥಮಿಕ ಶಿಕ್ಷಣಕ್ಕೆ ಒತ್ತಾಸೆ ನೀಡಬೇಕೆಂಬ ಕಾರಣದಿಂದ ಅನೇಕ ಯೋಜನೆಗಳು ಜಾರಿಗೆ ಬಂದಿವೆ. ಇದಕ್ಕೆ ಪೂರಕವಾಗಿ, ಶಿಕ್ಷಕರಿಗೆ ಪೂರಕವಾದ ತರಬೇತಿಗಳು, ಚಟುವಟಿಕೆಗಳು ವಿಭಿನ್ನವಾಗಿ ಕಂಡುಬರತೊಡಗಿವೆ. ಅಂಥವುಗಳಲ್ಲಿ ಕಳೆದ ಶೈಕ್ಷಣಿಕ ವರ್ಷದಿಂದ ಆರಂಭವಾದ ''ಚುಕ್ಕಿ ಚಿನ್ನ'' ಎಂಬ ಕಾರ್ಯಕ್ರಮವೂ ಒಂದು. ರಾಜ್ಯದ ರಾಯಚೂರಿನ ದೇವದುರ್ಗ, ಗುಲಬರ್ಗಾದ ಸೇಡಂ, ಚಾಮರಾಜನಗರ, ಮತ್ತು ಹೆಗ್ಗಡದೇವನಕೋಟೆ ತಾಲೂಕುಗಳ ವ್ಯಾಪ್ತಿಯ ಪ್ರಾಥಮಿಕ ಶಾಲೆಗಳಲ್ಲಿ ಪ್ರಾಯೋಗಿಕವಾಗಿ ಆರಂಭವಾಯಿತು. ೪ ಮತ್ತು ೫ನೇ ತರಗತಿಯ ಮಕ್ಕಳಿಗೆ ರೂಪಿತವಾದ ಚುಕ್ಕಿ ಚಿನ್ನ 'ಅಂತರ್ ಕ್ರಿಯಾತ್ಮಕ ರೇಡಿಯೋ ಶಿಕ್ಷಣ' ಕಾರ್ಯಕ್ರಮ. ಇದು ತರಗತಿಯ ಕೋಣೆಯಲ್ಲಿ ಬದಲಾವಣೆಗೆ ಹೊಸ ಗಾಳಿ ಬೀಸತೊಡಗಿದೆ. ಅದು ಹೇಗೆಂದರೆ ಕುವೆಂಪುರವರ ಬೊಮ್ಮನ ಹಳ್ಳಿಯ ಕಿಂದರಿಜೋಗಿಯಂತೆ

*'... ಕಿಂದರಿ ಬಾರಿಸಿದನು ಇಂಪಾಗಿ*
*ಟಿಂಗ್ ಟಿಂಗ್ ಟಿಂಗ್ ನಾದವಕೇಳಿ*
*ಚಂಗ್ ಚಂಗ್ ನೆಗೆದರು ಬಾಲಕರೋಡಿ...'*

ಈ ರೇಡಿಯೋ ಶಿಕ್ಷಣ ಎಂಬುದು ತರಗತಿಯಲ್ಲಿ ಮತ್ತು ಹೊರಗೆ ಇದ್ದ ಏಕಮುಖ ಕಲಿಕಾ ತಂತ್ರಜ್ಞಾನವನ್ನು ಕ್ರಿಯಾತ್ಮಕ ಕಲಿಕಾ ಸಾಧನವಾಗಿ ಬಳಸುವ ತಂತ್ರಜ್ಞಾನ, ಅಂದರೆ ತರಗತಿಯಲ್ಲಿ ಮಕ್ಕಳು ರೇಡಿಯೋ ಪಾಠವನ್ನು ಆಲಿಸುವುದು ಮಾತ್ರವಲ್ಲ, ಪಾಠವನ್ನು ಕೇಳಿ, ಶಿಕ್ಷಕರ ಸಹಾಯದಿಂದ ಕೇಳುವ ಪ್ರಶ್ನೆಗಳಿಗೆ ಉತ್ತರಿಸುವುದು, ನಿರ್ದೇಶಿಸಿದ ರೀತಿಯಲ್ಲಿ ಚಟುವಟಿಕೆ ಮಾಡುತ್ತಾ ರೇಡಿಯೋ ಪಾಠದಲ್ಲಿ ಸೂಚಿಸಲ್ಪಡುವ ಕಲಿಕಾ ಚಟುವಟಿಕೆಗಳಲ್ಲಿ ನೇರವಾಗಿ ಸ್ಪಂದಿಸುತ್ತಾರೆ. ಇದು ಬಹುರೂಪಿ ಕಲಿಕಾ ವಿಧಾನ. ಏಕೆಂದರೆ ಮಕ್ಕಳ ಅಭಿರುಚಿಗಳು ವಿಭಿನ್ನವಾಗಿರುತ್ತವೆ. ''ಕೆಲ ಮಕ್ಕಳು ಕೇಳಿ ಕಲಿಯುತ್ತಾರೆ, ಕೆಲವರು ಓದಿ ಕಲಿಯುತ್ತಾರೆ, ಕೆಲವರು ಪ್ರಾಯೋಗಿಕ ವಿಧಾನದಿಂದ ಕಲಿಯುತ್ತಾರೆ.'' ಹೀಗೆ ಸಾಧ್ಯವಾದ ಎಲ್ಲ ವಿಧಾನಗಳಿಂದ ಪಾಠಕ್ರಮ ರೂಪಿಸಲಾಗಿರುತ್ತದೆ. ಇದರಿಂದ ಎಲ್ಲವರ್ಗದ ಮಕ್ಕಳು ಕಲಿಕೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೆ.

**ಈ ಮಾಧ್ಯಮದ ಮೂಲಕ ತರಗತಿಯಲ್ಲಿ ಕೆಲಸ ಮಾಡುವುದು ಹೀಗೆ**

* ಆಟದ ಮೂಲಕ, ಅನ್ವೇಷಣೆಯಿಂದ, ಎಲ್ಲ ಜ್ಞಾನೇಂದ್ರಿಯಗಳ ಬಳಕೆಯಿಂದ.
* ಕಥೆ ಹೇಳುವದು, ಹಾಡು, ನಟನೆ, ಅನುಕರಣೆ, ಒಗಟು ಬಿಡಿಸುವಿಕೆಯಿಂದ.
* ಬಣ್ಣ ತುಂಬುವಿಕೆ, ಕಾಗದ ಕತ್ತರಿಸುವಿಕೆ ಮತ್ತು ಹಸ್ತ ಕೌಶಲ್ಯದಿಂದ.
* ಪ್ರಶ್ನೆ ಕೇಳುವುದು, ಪರಿಹಾರ ಹುಡುಕುವುದರಿಂದ.
* ಪ್ರಾಯೋಗಿಕ ವಿಧಾನ, ಭೂಪಟ ಓದುವುದರಿಂದ.

**ಇದರಿಂದ ಅನೂಕೂಲತೆ ಏನು ಮತ್ತು ಹೇಗೆ ?**

* ಶಿಕ್ಷಣದ ಗುಣಮಟ್ಟ ಹೆಚ್ಚಿಸಲು ಹಾಗೂ ವಿಸ್ತರಿಸಲು
* ಬೋಧನಾ ವಿಧಾನದಲ್ಲಿ ಕ್ರಿಯಾತ್ಮಕ ಕಲಿಕೆಗೆ ಉತ್ತೇಜನ
* ಅಸಮಾನತೆ (ಗಂಡು-ಹೆಣ್ಣು) ಕಡಿಮೆಯಾಗುವ ಸಾಧ್ಯತೆ.
* ಚಟುವಟಿಕೆಗೆ ಸಮಯಾವಕಾಶ.
* ಸ್ಥಳೀಯ ಸನ್ನಿವೇಶಕ್ಕೆ ವಿನ್ಯಾಸ/ ಹೊಂದಾಣಿಕೆ.
* ಶಿಕ್ಷಕ ಮತ್ತು ವಿದ್ಯಾರ್ಥಿಗಳೆಂಬ ಎರಡು ವಿಧದ ಶ್ರೋತೃಗಳನ್ನು ತಲುಪುತ್ತದೆ.
* ಹಾಜರಾತಿಯ ಹೆಚ್ಚಳ.
* ಬಹುಸಂಖ್ಯಾತ ಗುಂಪುಗಳಿಗೆ ಏಕಕಾಲಕ್ಕೆ ವ್ಯಾಪಿಸುತ್ತದೆ.
* ಶಿಕ್ಷಣದ ಜೊತೆಗೆ ಮನರಂಜನೆ.
* ಶಿಕ್ಷಕ ಮತ್ತು ವಿದ್ಯಾರ್ಥಿಗಳ ಹೊರತಾಗಿ ಕನಿಷ್ಠ ಸಂಪನ್ಮೂಲಗಳ ಬಳಕೆ
* ಇದು ಶಿಕ್ಷಕನಿಗೆ ನಿರಂತರ ತರಬೇತಿ ನೀಡುತ್ತದೆ.
* ಇದು ದೂರದೂರದ ಪ್ರದೇಶಗಳಿಗೆ ತಲುಪುವ ಸಂವಹನ ಮಾಧ್ಯಮ
* ಸಾಧನೆ ಮಟ್ಟ ಮುಟ್ಟದಿರುವ ಬಡ ಗ್ರಾಮೀಣ ಮಕ್ಕಳಿಗೆ ಕಲಿಯುವ ಅವಕಾಶ ಒದಗಿಸುವಿಕೆ.
* ತೀರಾ ಗಂಭೀರವಾದ ತೊಡಕುಗಳಿಗೂ ಸ್ಪಂದಿಸುವ ಅವಕಾಶ.

ಈ ಮೇಲಿನ ಅಂಶಗಳನ್ನು ಗಮನಿಸಿದಾಗ ನಮಗೆ ಅಂತರಕ್ರಿಯಾತ್ಮಕ ರೇಡಿಯೋ ಶಿಕ್ಷಣದ ಅಗತ್ಯವಿದೆ. ಏಕೆಂದರೆ ನಮ್ಮ ನಿತ್ಯದ ಬದುಕಿನಲ್ಲಿ ವಿವಿಧ ಮಾಧ್ಯಮಗಳ ಮೂಲಕ ಕಲಿಕೆ ಯಾಗುತ್ತಲೇ ಇರುತ್ತದೆ. ಆದರೂ, ಮುಂದುವರೆದ ಪ್ರದೇಶಗಳಲ್ಲಿ ಕಂಪ್ಯೂಟರ್ ಮತ್ತಿತರ ಸಾಧನೆಗಳಂತಹ ಆಧುನಿಕ ತಂತ್ರಜ್ಞಾನ ಶೈಕ್ಷಣಿಕ ವ್ಯವಸ್ಥೆಯ ಪ್ರಮುಖ ಭಾಗವಾಗಿಬಿಟ್ಟಿದೆ.

ಇಂತಹ ಪರಿಸ್ಥಿತಿಯಲ್ಲಿ ''ಮೂಲ ಸೌಕರ್ಯ ವ್ಯವಸ್ಥೆ ಅತ್ಯಂತ ದುರ್ಬಲವಾಗಿರುವ, ಶಿಕ್ಷಣದ ಗುಣಮಟ್ಟದಲ್ಲಿ ಭಾರಿ ಸುಧಾರಣೆ ಅಗತ್ಯವಿರುವ ಬಡರಾಷ್ಟ್ರಗಳ ಮುಂದಿರುವ ಕಡಿಮೆ ವೆಚ್ಚದ ಪರ್ಯಾಯ ವ್ಯವಸ್ಥೆ ಎಂದರೆ ರೇಡಿಯೋ ಮಾತ್ರ. ಕೆಲವು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ರೇಡಿಯೋ ದೂರದ ಪ್ರದೇಶಗಳಿಗೂ ತಲುಪಬಲ್ಲ ಅತ್ಯಂತ ಮಹತ್ವದ ಸಂವಹನ ಮಾಧ್ಯಮ (ಆ್ಯಂಜಿಯಾ).'' ಹೀಗಾಗಿ ಇಂದು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಪ್ರಚಲಿತದಲ್ಲಿದೆ.

ಇದರ ಇತಿಹಾಸವನ್ನು ಅವಲೋಕಿಸಿದರೆ, ೧೯೫೦ರ ದಶಕದಲ್ಲಿ ಅಮೆರಿಕದ ವಾಷಿಂಗ್ಟನ್‌ನಲ್ಲಿ ವಿಜ್ಞಾನ ಮತ್ತು ಗಣಿತ ಬೋಧಕರು, ಆಸಕ್ತ ಶಿಕ್ಷಣ ಪ್ರೇಮಿಗಳಿಂದ ಆರಂಭವಾಯಿತು. ಶಿಕ್ಷಣ ಕ್ಷೇತ್ರದಲ್ಲಿ ಅಮೇರಿಕಾದ ಸಹಯೋಗದಲ್ಲಿ ಪ್ರಚಲಿತ ಸಂದರ್ಭದಲ್ಲಿ ಈ ಕಾರ್ಯಕ್ರಮ ಜಾರಿಯಲ್ಲಿದೆ. ಇದು ವಿಶ್ವದಾದ್ಯಂತ ೪೫ ದೇಶಗಳಲ್ಲಿ ೬೦೦ಕ್ಕಿಂತಲೂ ಹೆಚ್ಚು ಕಾರ್ಯಕ್ರಮಗಳ ಮೂಲಕ ವಿಸ್ತಾರಗೊಂಡಿತು. ನಿಕಾರಾಗುವ, ಬೊಲಿವಿಯ, ಗ್ವಾಟೆಮಾಲ, ಥಾಯ್ಲೆಂಡ್, ವೆನಿಜುವೆಲಾ, ಹೈಟಿ, ಹೊಂಡುರಾಸ್, ಸೊಮಾಲಿಯಾ, ಎಲ್ ಸಾಲ್ವಡೋರ್, ಕೀನ್ಯ, ದಕ್ಷಿಣ ಆಫ್ರಿಕಾ, ಡೋಮಿನಿಕನ್ ಗಣರಾಜ್ಯ, ಜಾಂಬಿಯ, ಗಿನಿ ದೇಶಗಳಲ್ಲಿ – **''ಗಣಿತ ವಿಷಯ, ಪ್ರಾಥಮಿಕ ದ್ವಿತೀಯ ಭಾಷೆ , ಪರಿಸರ ಅಧ್ಯಯನ** ಹಾಗೂ ಒಂದಕ್ಕಿಂತ ಹೆಚ್ಚು ವಿಷಯಗಳನ್ನು ಒಳಗೊಳ್ಳುವಂತೆ ಮೂರು ವರ್ಷ ಪ್ರಾಯದಿಂದ ಪ್ರೌಢ ಹಂತದವರೆಗಿನವರಿಗೆ ತಲುಪುವಂತೆ ಕ್ರಿಯಾವಿಧಾನ ರೂಪಿಸಲಾಗಿದೆ.''

ನಮ್ಮ ರಾಜ್ಯದಲ್ಲಿ ನಾಲ್ಕು ಮತ್ತು ಐದನೇ ತರಗತಿಗಳಿಗಾಗಿ ಗಣಿತ. ಪರಿಸರ ವಿಜ್ಞಾನ, ಸಮಾಜ ಅಧ್ಯಯನ ವಿಷಯಗಳನ್ನು ಈಗಾಗಲೇ ಎ.ಐ.ಆರ್. ಗ ಅಳವಡಿಸಲಾಗಿದೆ. ಇದೇ ಶೈಕ್ಷಣಿಕ ವರ್ಷದಿಂದ I, II, III ನೇ ತರಗತಿಗಳಿಗೂ ಈ ರೇಡಿಯೋ ಶಿಕ್ಷಣ ಅಳವಡಿಸಲಾಗುತ್ತಿದೆ. ಜಾರ್ಖಂಡ, ಛತ್ತೀಸ್‌ಗಡ, ರಾಜ್ಯಗಳಲ್ಲಿ ಒಂದು ಮತ್ತು ಎರಡನೇ ತರಗತಿಯ ಮಕ್ಕಳಿಗಾಗಿ ಆಂಗ್ಲ ಭಾಷೆಯನ್ನು ರೇಡಿಯೋ ಶಿಕ್ಷಣ ಕಾರ್ಯಕ್ರಮಕ್ಕೆ ಈಗಾಗಲೇ ಒಳಪಡಿಸಲಾಗಿದೆ.

ಒಂದಂಶ ನಾವು ಗಮನಿಸಬೇಕು, ನಮ್ಮಲ್ಲೂ ಇಂತಹ ಪ್ರಯೋಗಗಳು ಆಗಿರಲಿಲ್ಲವೇ ? ನಮ್ಮ ನಡುವೆ ಇನ್ನೂ ಇಲ್ಲಿಯತನಕ ಜೀವಂತವಾಗಿರುವ ಕೃಷಿರಂಗದ (ಗುಲಬರ್ಗಾ ಆಕಾಶವಾಣಿ) ''ಕರಿ ಎತ್ತು ಕಾಳಿಂಗಾ ಬಿಳಿ ಎತ್ತು ಮಾಲಿಂಗಾ'' ನಮ್ಮ ಶಿಕ್ಷಣದ ಚಿಂತಕರಿಗೆ ನೆನಪಾಗಲಿಲ್ಲವೇ ? ಅಕ್ಕನ ಬಳಗದ ಅಕ್ಕನವರ ಹಾಡುಗಳು ಕಿವಿಗೆ ಕೇಳಿಸಲಿಲ್ಲವೇ ? ಇಂತಹ ಅನೇಕ ಕಾರ್ಯಕ್ರಮ ನಮ್ಮ ನಡುವೆ ಕ್ರಿಯಾಶೀಲವಾಗಿದ್ದಾಗ್ಯೂ ನಮಗೇಕೆ ಅರಿವಾಗಲಿಲ್ಲ? ನಾವು ನಮ್ಮ ದೇಶೀಯ ಜ್ಞಾನದ ಕಡೆಗೆ ಲಕ್ಷ್ಯ ಕೊಡಲಿಲ್ಲ. ಅದನ್ನು ಅಳವಡಿಸುವ ಬಗ್ಗೆ ಚಿಂತನೆಯಾಗಲಿಲ್ಲ ಏಕೆ ? ಆದರೆ ವಿದೇಶೀಯ ತಿಳುವಳಿಕೆಯನ್ನು ಅನ್ವಯಿಸಿಕೊಳ್ಳುವಾಗ ಅದಷ್ಟು ಎಚ್ಚರವಾಗಿರುವುದು ಒಳಿತು. (ಇಲ್ಲಿ ವಿದೇಶಿ ತಿಳುವಳಿಕೆ ಯನ್ನು ದೂಷಿಸುತ್ತಿಲ್ಲ, ನಮ್ಮತನದ ಮರೆವಿನ ಅಪಾಯವನ್ನು ನೆನಪಿಸುತ್ತಿದ್ದೇನೆ.) ಇಂದು ನಮ್ಮ ನಡುವೆ ಇನ್ನೂ ಉಳಿದಿರುವ ಸ್ವದೇಶಿ ಚಿಂತನೆಯ ಜ್ಞಾನವನ್ನು ಪ್ರಾಯೋಗಿಕವಾಗಿ ಬಳಸುತ್ತ ಉಳಿಸಿಕೊಳ್ಳಬೇಕಾಗಿದೆ, ಬೆಳೆಸಬೇಕಾಗಿದೆ. ಇಲ್ಲವಾದರೆ,

*... ಕಿಂದರಿಜೋಗಿಯು ಹೊರಟನು ಮುಂದೆ*
*ಬಾಲಕರೆಲ್ಲರು ಹರಿದರು ಹಿಂದೆ !...*
*... ಬಾಯನು ತೆರೆಯಿತು ಆ ಗಿರಿಯು*
*ಜೋಗಿಯು ನುಗ್ಗಿದನದರಲ್ಲಿ*
*ಹಿಂದೆಯೆ ಹೋದರು ಬಾಲಕರು.*
*– ಹೀಗಾಗಬಾರದಲ್ಲವೇ !*

**ರಾಮರೆಡ್ಡಿ ಜಿ. ಮದರಕಲ್**
'ಬೆಳ್ಳಿಚುಕ್ಕಿ' ನಂ. ೩೦೦, ಅಂಚೆ : ಮದರಕಲ್, ವಯಾ ಗಬ್ಬೂರು
ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲಾ - ೫೮೪ ೧೧೩

# ಸುಳ್ಳಿನ ಸಂತೆಯಲ್ಲಿ ಕಳೆದುಕೊಂಡ ಸತ್ಯಗಳು

**ಯಾ**ವುದು ಸತ್ಯ ? ಯಾವುದು ಸುಳ್ಳು ? ಎರಡೂ ಒಂದೂ ಗೊತ್ತಾಗದಷ್ಟು, ಒಂದಕ್ಕೊಂದು ಬೆರೆತುಹೋಗಿವೆ. ಸುಳ್ಳುಗಳಲ್ಲಿ ಸತ್ಯವಿರಬಹುದು. ಸತ್ಯಗಳಲ್ಲಿ ಸುಳ್ಳುಗಳೂ ಇರಬಹುದು. ಯಾರಿಗೆ ಗೊತ್ತು ಯಾವ ಹುತ್ತದಲ್ಲಿ ಯಾವ ಹಾವು ಇದೆ ಅಂತ ?

ಬಾಳಿಗೊಂದು ನಂಬಿಕೆ ಬೇಕು ಅನ್ನುತ್ತಾರೆ, ನಿಜ. ಒಪ್ಪಿಕೊಳ್ಳೋಣ. ಆದರೆ ಅದೇ ನಂಬಿಕೆ ನಿಜ ಎನ್ನುವುದಕ್ಕೆ ಏನು ಭರವಸೆ ? ನಿಜವಲ್ಲದಿದ್ದರೂ ನಂಬಬೇಕು ಎಂತಲೊ ಏನೋ ಗೊತ್ತಿಲ್ಲ.

ನಾವೆಲ್ಲ ದೇವರಲ್ಲಿ ಇಟ್ಟಿರುವುದು ನಂಬಿಕೆ. ಆತನಿದ್ದಾನೋ ಇಲ್ಲವೋ ಗೊತ್ತಿಲ್ಲ. ನೋಡಿದವರಾರೂ ಇಲ್ಲ. ಆದರೆ ನೋಡಿದ್ದೇನೆನ್ನುವವರು ನಿಮಗೆಷ್ಟು ಜನ ಬೇಕು ? ಆದರೆ ನೋಡಿದ್ದೇನೆನ್ನುವವರಾರೂ ಇತರರಿಗೆ ತೋರಿಸಲು ಸಿದ್ಧರಿಲ್ಲ. ಅನೇಕಾನೇಕ ದೇವಮಾನವರೇ ಇದ್ದಾರೆ. ತಾನೇ ದೇವರು ಅನ್ನುವವರಿದ್ದಾರೆ. ಹಾಗೆಯೇ ಅವರನ್ನು ದೇವರೆಂದೇ ಒಪ್ಪಿಕೊಳ್ಳುವವರೂ ಇದ್ದಾರೆ. ದೇವರಿದ್ದಾನೆ ನಂಬಿರಿ ! ಎಂದು ಪದೇ ಪದೇ ಹೇಳಿ ನಮ್ಮ ಕಿವಿ ಕೊರೆಯುವವರೂ ಇದ್ದಾರೆ. ಹೀಗೆ ಪದೇ ಪದೇ ಕ್ಷಣಕ್ಷಣಕ್ಕೂ ಕೋಟ್ಯಂತರ ಜನ ಹೇಳುತ್ತಿರುವಾಗ ಅದು ಸುಳ್ಳಾಗಲು ಸಾಧ್ಯವೇ ಅನ್ನುವವರೂ ಇದ್ದಾರೆ.

ಸಾವಿರಾರು ಜನರು ಸೇರಿ ನೂರಾರು ಜನರನ್ನು ಮೋಸಮಾಡಬಹುದಾದರೆ, ಕೆಲವೇ ಜನ ಸೇರಿ ಕೋಟ್ಯಂತರ ಜನರನ್ನೂ ಮೋಸಗೊಳಿಸಬಹುದು.

ನಾವು ಮೋಸಹೋದದ್ದು ನಮಗೆ ಯಾವತ್ತೂ ಗೊತ್ತಾಗದ ರೀತಿಯಲ್ಲಿ ಇರುವುದರಿಂದ ನಾವು ಅದನ್ನು ಮೋಸ ಎಂದು ಒಪ್ಪಿಕೊಳ್ಳಲು ಸಿದ್ಧರಿಲ್ಲ. ಹಾಗಿರುವಾಗ ಕೋಟ್ಯಂತರ ಜನರು ನಂಬಿದ್ದೂ ಸುಳ್ಳಾಗಬಹುದು. ಒಬ್ಬಿಬ್ಬರು ನಂಬಿದ್ದು ಸತ್ಯವಾಗಬಹುದು. ನಿಜವಾದ ಸತ್ಯವು ನಂಬುವವರ ಸಂಖ್ಯೆಯನ್ನು ಹೊಂದಿಕೊಂಡಿಲ್ಲ, ನಂಬಿದವರ ವ್ಯಕ್ತಿತ್ವವನ್ನು ಹೊಂದಿಕೊಂಡಿದೆ.

ಹಾಗಾದರೆ ನಾವೇಕೆ ದೇವರನ್ನು ನಂಬುತ್ತೇವೆ ? ನಾವು ನಾವಾಗಿ ಎಂದೂ ನಂಬಿಲ್ಲ. ನಮ್ಮಲ್ಲಿ ನಂಬಿಕೆ ಹುಟ್ಟಿಸಿದ್ದಾರೆ. ಆ ನಂಬಿಕೆ ಹುಟ್ಟಿಸುವವರಿಗೆ ಹಾಗೆ ಹುಟ್ಟಿಸುವುದರಿಂದ ಏನೋ ಲಾಭವಿರಬೇಕು.

ಹಾಗೆ ಲಾಭವಿದೆ, ಎಂದು ನಿಮಗೆ ಎಂದೂ ಗೊತ್ತಾಗುವುದೇ ಇಲ್ಲ. ಅಷ್ಟು ವ್ಯವಸ್ಥಿತವಾಗಿ ನಿಮ್ಮಲ್ಲಿ ನಂಬಿಕೆಯನ್ನು ಹುಟ್ಟಿಸಿದ್ದಾರೆ. ಒಬ್ಬಿಬ್ಬರು ನಂಬಿದರೆ ಲಾಭವಿಲ್ಲ. ಅನೇಕರು ಒಟ್ಟಾಗಿ ನಂಬಿದರೇನೇ ಲಾಭ. ನಂಬಿಸಿದರೆ, ನಂಬುವವರನ್ನು ಬುಟ್ಟಿಗೆ ಹಾಕಿಕೊಳ್ಳುವುದು ಸುಲಭ.

ಉದಾಹರಣೆಯಾಗಿ, ಯಾರೋ ಒಬ್ಬ ಬಡವ, ತನಗೊಂದು ಹೊಟ್ಟೆಪಾಡಿಗೆ ದಾರಿಯಾಗಲಿ ಎಂದು ಹೆದ್ದಾರಿಯಲ್ಲಿ ಒಂದು ಹೋಟೆಲ್ ತೆರೆಯುತ್ತಾನೆ. ಅಲ್ಲಿಗೆ ಯಾರೂ ಗಿರಾಕಿಗಳು ಬರುವುದೇ ಇಲ್ಲ, ಎಂದಾಗ ಅವನೇನು ಮಾಡಬೇಕು ?

ಬೇರೆ ದಾರಿ ಕಾಣದೆ, ಆ ರಸ್ತೆಯಲ್ಲಿ ಸಾಗುವ ವಾಹನಗಳ ಚಾಲಕರಲ್ಲಿ ಗೋಗರೆಯುತ್ತಾನೆ, ''ಸ್ವಾಮೀ ! ನನ್ನನ್ನು ಬದುಕಿಸಿ, ನಿಮಗೆ ಬಿಟ್ಟಿ ಕಾಫಿ, ತಿಂಡಿ, ಊಟ ಕೊಡುತ್ತೇನೆ. ದಯವಿಟ್ಟು ಇದನ್ನಾರಿಗೂ ಹೇಳಬೇಡಿ, ನಿಮ್ಮ ವಾಹನಗಳನ್ನು ಇಲ್ಲಿ ನಿಲ್ಲಿಸಿ'', ಅನ್ನುತ್ತಾನೆ. ಎಷ್ಟೋ ಬಾರಿ ವಾಹನಗಳವರು ಇವನ ಪಾಪಪುಣ್ಯ ಕಂಡು, ನಿಲ್ಲಿಸುತ್ತಾರೆ. ಇವರು ನಿಲ್ಲಿಸಿದರೆಂದು ಇತರರೂ ನಿಲ್ಲಿಸುತ್ತಾರೆ. ಬಸ್ಸಿನಲ್ಲಿ, ವಾಹನಗಳಲ್ಲಿ ಬಂದವರೆಲ್ಲ ಅಲ್ಲಿಗೆ ಬರುತ್ತಾರೆ, ಭರ್ಜರಿ ವ್ಯಾಪಾರ ಸಾಗುತ್ತದೆ. ಅಲ್ಲಿ ಬಿಟ್ಟಿ ತಿಂದವರೆಲ್ಲ ಹೋಟೆಲ್ ಬಹಳ ಚೆನ್ನಾಗಿದೆ, ಎಂದು ಪ್ರಚಾರಮಾಡುತ್ತಾರೆ. ಹೀಗೆ ದಿನಗಳು ಉರುಳಿ ವರ್ಷಗಳೇ ಕಳೆದಾಗ, ಅಲ್ಲೊಂದು ಭವ್ಯ ಹೋಟೆಲ್ ಕಟ್ಟಡ ಎದ್ದು ನಿಲ್ಲುತ್ತದೆ. ಆಮೇಲೆ ಒಂದಲ್ಲ, ಎರಡಲ್ಲ, ಅನೇಕಾನೇಕ ಹೋಟೆಲ್‌ಗಳು ಅದೇ ಮಾಲಿಕನ ಹೆಸರಲ್ಲಿ ನಾನಾ ಕಡೆ ತಲೆ ಎತ್ತುತ್ತವೆ.

ಆ ಹೋಟೆಲಿನವರು ವಾಹನಗಳ ಚಾಲಕ ನಿರ್ವಾಹಕರಿಗೆ, ಬಿಟ್ಟಿಯಾಗಿ ಊಟ, ತಿಂಡಿ ಕೊಡುತ್ತಾರೆಂಬ ವಿಷಯ ಅನೇಕ ವರ್ಷಗಳ ಕಾಲ ರಹಸ್ಯವಾಗಿಯೇ ಉಳಿದಿತ್ತು. ಆ ರಹಸ್ಯ ಸ್ಫೋಟವಾದಾಗ ಎಲ್ಲ ವಾಹನಗಳವರು ಅಲ್ಲೇ ಏಕೆ ನಿಲ್ಲಿಸುತ್ತಾರೆಂಬುದು ಗೊತ್ತಾದಾಗ, ಆಮೇಲೆ ಬಸ್ಸುಗಳು ಅಲ್ಲಿ ನಿಲ್ಲಬೇಕಾದರೆ, ಬಸ್ಸುಗಳ ಕಂಪನಿಗೆ, ಆ ಹೋಟೆಲ್ ಮಾಲಕರೇ ನಿರ್ದಿಷ್ಟ ಹಣ ಪಾವತಿಸಬೇಕು, ಆಗ ಮಾತ್ರ ಬಸ್ಸು ನಿಲ್ಲುತ್ತದೆ, ಎಂಬ ನಿಯಮ ಜಾರಿಗೆ ಬಂತು. ಹಾಗೆ ರಹಸ್ಯ ಕಾಪಾಡಿದ್ದರಿಂದ ಎಷ್ಟು ಲಾಭವಾಯಿತು ನೋಡಿ. ಹಾಗೆ ರಹಸ್ಯವನ್ನು ಕಾಪಾಡಿಕೊಳ್ಳುವುದರಲ್ಲೂ ಲಾಭವಿದೆ ಎಂದು ಇಲ್ಲಿ ಸಾಬೀತಾಯಿತಲ್ಲ !

ಎಲ್ಲ ನಂಬಿಕೆಗಳೂ ಹಾಗೆ ! ಅದೊಂದು ರಹಸ್ಯ. ಹಾಗೆ ರಹಸ್ಯ ಕಾಪಾಡುವುದೇ ಅಲ್ಲಿಯ ಬುದ್ಧಿವಂತಿಕೆ. ನಮ್ಮನ್ನು ನಂಬುವಂತೆ ಮಾಡುವವರು, ತಮ್ಮ ಲಾಭಕ್ಕಾಗಿ ಮಾಡುತ್ತಾರೆನ್ನುವುದು ಯಾರಿಗೂ ಗೊತ್ತಾಗದ ರೀತಿಯಲ್ಲೇ ಇರುತ್ತದೆ.

ಕೊನೆಗೆ ನಮಗೆ ನಂಬಿಕೆ ಹುಟ್ಟಿದಮೇಲೆ, ಅಂಥಾ ನಂಬಿಕೆ ಉಳ್ಳವರ ಸಂಖ್ಯೆಯೇ ಬೃಹದಾಕಾರವಾಗಿ ಬೆಳೆದಾಗ, ನಂಬಿಕೆಯ ಒಳಗಿರುವುದು 'ಟೊಳ್ಳು' ಎಂದು ಹೇಳುವವರ ಸಂಖ್ಯೆ ಕಡಿಮೆ ಇರುತ್ತದೆ. ಆಗ ಸುಳ್ಳೇ ಸತ್ಯವಾಗುತ್ತದೆ. ಆಮೇಲೆ ಆ ಸತ್ಯದ ರೂಪದಲ್ಲಿರುವ ಸುಳ್ಳನ್ನು, ಅದು ಸುಳ್ಳು ಎಂದು ಯಾರು ಹೇಳಿದರೂ ಜನ ನಂಬುವುದಿಲ್ಲ. ನಂಬಿಕೆಗಳು ವಿಸ್ತರಿಸುವುದೇ ಹೀಗೆ. ಲಕ್ಷಾಂತರ ಜನ ಹೇಳಿದ ಸುಳ್ಳು, ಸತ್ಯವಾಗುವುದೇ ಹೀಗೆ.

ಹಾಗಾದರೆ ಎಲ್ಲ ನಂಬಿಕೆಗಳೂ ಸುಳ್ಳೆ, ಎಂದು ಕೇಳಿದರೆ ಅದಕ್ಕೆ ಉತ್ತರ ಇದು.

ಸಮಾಜದಲ್ಲಿ ಮನುಷ್ಯರು ಮನುಷ್ಯರ ಮೇಲೆ ಇಟ್ಟಿರುವುದು ಬರೇ ನಂಬಿಕೆಯಲ್ಲ! ವಿಶ್ವಾಸವಲ್ಲ! ಭರವಸೆಯೂ ಅಲ್ಲ! ಅದು ಅವಲಂಬನೆ. ನಿನ್ನ ಸಹಾಯ ನನಗೆ ಬೇಕು,

**ಕೃಷ್ಣರಾಜ ಕೆದ್ಲ**



ನನ್ನ ಸಹಾಯ ನಿನಗೆ ಇದೆ, ಎಂಬ ಹೊಂದಾಣಿಕೆ. ಈ ಅವಲಂಬನೆಯೇ ಜೀವನದ ವಿಧಾನ. ಅದಿಲ್ಲದೆ ಜೀವನವಿಲ್ಲ. ಈ ಅವಲಂಬನೆಯ ಅವಶ್ಯಕತೆಯನ್ನು ಎಲ್ಲರೂ ಸದುಪಯೋಗ ಮಾಡಿಕೊಂಡಿದ್ದಷ್ಟು ಕಾಲ ಯಾವ ಪ್ರಮಾದಗಳೂ ಇರುವುದಿಲ್ಲ.

ಪರಸ್ಪರ ಸಹಾಯ ಬೇಕಾದಾಗ, ನನ್ನ ಸಹಾಯವಿಲ್ಲದೆ ಅವನು ಜೀವಿಸಲಾರ, ಎಂದು ನಮಗೆ ತಿಳಿದಾಗ, ನಮ್ಮ ಲಾಭಕ್ಕಾಗಿ ಇತರರನ್ನು ಬಳಸಿಕೊಳ್ಳುವುದು ಹೇಗೆ ಎಂಬ ಯೋಚನೆ ಬರುತ್ತದೆ. ಆಗ ನನ್ನ ಸಹಾಯ ನಿನಗೆ ಬೇಕಾದರೆ ನನ್ನ ನಂಬಿಕೆಗಳಿಗೆ ನೀನೂ ಜೋತುಬೀಳಬೇಕು, ಎಂಬ ಅಲಿಖಿತ ಒತ್ತಡ ಶುರುವಾಗುತ್ತದೆ. ಆಗ ನಾವು ನಮ್ಮದಲ್ಲದ ನಂಬಿಕೆಗಳಿಗೆ ಒಳಗಾಗುತ್ತೇವೆ. ಆಗಲೇ ಕುರಿಮರಿಗಳು ಜಾರಿ ಹೊಂಡಕ್ಕೆ ಬೀಳುವುದು. ಆಗಲೇ, ಸ್ವಾರ್ಥಿಗಳ ರೊಟ್ಟಿ ಜಾರಿ ತುಪ್ಪಕ್ಕೆ ಬೀಳುವುದು.

ಇತರರ ನಂಬಿಕೆಗಳು ನಮ್ಮ ನಂಬಿಕೆಗಳಾಗುವುದೇ ಹೀಗೆ. ಇತರರ ಅವಶ್ಯಕತೆ ನಮಗಿದ್ದುದರಿಂದ ಕಣ್ಣುಮುಚ್ಚಿ ವಿಧಿಯನ್ನು ಇಲ್ಲವೇ ಅವರ ಮಾತನ್ನು ನಂಬುತ್ತೇವೆ. ನಂಬಿಕೆಗಳು ಪಸರಿಸುವುದೇ ಹೀಗೆ.

ಇಂಥಾ ಸಂದರ್ಭಗಳೇ ನಂಬಿಕೆಗಳನ್ನು ಬೆಳೆಸುವ ಹಸನಾದ ಭೂಮಿಗಳು. ಆದ್ದರಿಂದ ಇವು ನಂಬಿಕೆಗಳಲ್ಲ, ಅವಲಂಬನೆಯ ಪರಿಣಾಮಗಳು. ಸಮಾಜಜೀವಿಗಳಾದ ನಾವು ಸಮಾಜದ ನಂಬಿಕೆಗಳನ್ನೇ ನಂಬುತ್ತೇವೆ. ಬಾಲ ಹೋದ ನರಿಯ ಗಾದೆ ಕೇಳಿದ್ದೀರಲ್ಲ! ಇದೂ ಹಾಗೇ. ಲಾಭ ಇರುವುದು ಬಾಲ ಕಳಕೊಳ್ಳುವುದರಲ್ಲೇ ಎಂದು ತಿಳಿಯುತ್ತೇವೆ.

ಹಾಗೆಂದು, ಎಲ್ಲ ನಂಬಿಕೆಗಳೂ ಟೊಳ್ಳಲ್ಲ. ಎಲ್ಲ ಜನರೂ ಕೆಟ್ಟವರಲ್ಲ. ಈ ನಂಬಿಕೆಗಳ ಕಲಸುಮೇಲೋಗರದಲ್ಲಿ ಒಳ್ಳೆಯದನ್ನು ಹುಡುಕುವುದೇ ಕಷ್ಟ.

ಆದ್ದರಿಂದ ನಾವಿಂದು ಎಲ್ಲ ನಂಬಿಕೆಗಳೂ ಮೂಢನಂಬಿಕೆಗಳೆಂದು ತ್ಯಜಿಸಬಾರದು. ಕಾಳಿನ ಜೊತೆ ಸೇರಿರುವ ಜೊಳ್ಳನ್ನು ಬೇರ್ಪಡಿಸಬೇಕು. ಅದಕ್ಕೆ ಇರುವುದೊಂದೇ ದಾರಿ. ವಿವೇಚನೆ, ವಿಮರ್ಶೆ, ಪ್ರಶ್ನಿಸುವುದು. ಆಗಲೂ, ಯಥಾರ್ಥ ಹೊರಬರುವ ವಿಶ್ವಾಸವಿಲ್ಲದಿದ್ದರೂ, ಸತ್ಯದ ಅಂಶ ಹೆಚ್ಚಾಗುವ ಅವಕಾಶಗಳಿವೆ. ಕಣ್ಣುಮುಚ್ಚಿ ನಂಬುವುದಕ್ಕೂ, ಕಣ್ಣುತೆರೆದು ಪರಿಶೀಲಿಸುವುದಕ್ಕೂ ವ್ಯತ್ಯಾಸವಿಲ್ಲವೆ ?

ಆಮೇಲೆ ನಿಮ್ಮ ಇಷ್ಟ ಮೈದಾನವೂ ಇದೆ, ಕುದುರೆಯೂ ಇದೆ. ಅದರ ಮೇಲೇರಿ, ಅದನ್ನು ಪಳಗಿಸುವುದು, ನೀವೂ ಪಳಗುವುದು, ಎರಡೂ ಮಾಡಬಹುದು.

'ದೇವರಿದ್ದಾನೆ ! ನೋಡೋಣ' ಎಂದು ಕುದುರೆಯನ್ನು ಹತ್ತಿದರೆ, ಕುದುರೆ ಮತ್ತು ನೀವು ಇಬ್ಬರೂ ಪಳಗಿದರೆ, ನೀವು ಗೆದ್ದಿರಿ. ನಿಮ್ಮ ನಂಬಿಕೆ ನಿಜವಾಯಿತು. ಆಗ ನೀವು ನಂಬಿಕೆಯ ಬೆನ್ನುಹತ್ತಲು ತೊಡಗುತ್ತೀರಿ. ನಂಬಿಕೆಗಳು ಬಲವಾಗುವುದು ಹೀಗೇ.

ಯಾವಾಗಲೂ ನಿಮ್ಮ ನಂಬಿಕೆಗಳು ನಿಜವಾಗಲೇಬೇಕೆಂದಿಲ್ಲ. ಹಾಗೆ ನಿಜವಾಗದಿದ್ದಾಗ ನೀವೇನು ಮಾಡುತ್ತೀರಿ ? ಪ್ರಶ್ನೆ ಇರುವುದೇ ಇಲ್ಲಿ. ಆಗ ನೀವು ನಂಬಿಕೆಯನ್ನು ಹಳಿಯದೆ ಅದೃಷ್ಟದ ಬೆನ್ನುಹತ್ತುತ್ತೀರಿ; ಅದನ್ನು ದೂರುತ್ತೀರಿ. ಅದೃಷ್ಟ ಚೆನ್ನಾಗಿಲ್ಲ ಅನ್ನುತ್ತೀರಿ. ಯಾವಾಗ ನಮ್ಮ ನಂಬಿಕೆ ನಿಜವಾಗಲಿಲ್ಲವೋ ಆಗ ಅದೃಷ್ಟದ ಬೆನ್ನು ಹತ್ತಬಾರದಿತ್ತು. ಆಗ ನಂಬಿಕೆಯೂ ಹೊರಟುಹೋಗಬೇಕಿತ್ತು. ಹಾಗಾಗದೆ ನೀವು ಅದೃಷ್ಟವನ್ನೇ ಮತ್ತೆ ಮತ್ತೆ ಒರೆಗೆ ಹಚ್ಚುತ್ತೀರಿ. ಹತ್ತು ಕಲ್ಲು ಎಸೆದಾಗ, ಒಂದಾದರೂ ಕಲ್ಲು ಹಣ್ಣಿಗೆ ತಗಲೀತೆಂದು ಎಣಿಸುತ್ತೀರಿ. ಹತ್ತು ಕಲ್ಲಿನಲ್ಲಿ ಒಂದು ಕಲ್ಲು ತಗಲಿ ಒಂದು ಹಣ್ಣು ಉದುರುತ್ತದೆ. ಆಗ ನಂಬಿಕೆ ಮತ್ತೆ ಬಲವಾಗುತ್ತದೆ. ಇದು ನಮ್ಮ ಅವಲಂಬನೆಗಳು ನಂಬಿಕೆಗಳಾಗಿ ಬಲಗೊಂಡ ರೀತಿ. ನಂಬಿಕೆಗಳು ಇರುವುದು ತಪ್ಪಲ್ಲ. ಆದರೆ ಆ ನಂಬಿಕೆಗಳಿಂದಾಗಿ ನಾವು ಶೋಷಣೆಗೆ ಒಳಗಾಗುವುದು ತಪ್ಪು. ಬರೇ ನಂಬಿಕೆಗಳನ್ನು ಇಟ್ಟುಕೊಳ್ಳುವುದೆಂದರೆ ಅದು ನಾವು ಪಡೆಯದ ಸಾಲಕ್ಕೆ ಬಡ್ಡಿ ಪಾವತಿಸಿದಂತೆ. ಇತರರ ಮೇಲೆ ನಂಬಿಕೆಗಳನ್ನು ಹೇರುವುದು ಅವರನ್ನು ವಂಚಿಸಿದಂತೆಯೇ ಆಗುತ್ತದೆ.

'ನಂಬಿ ಕೆಟ್ಟವರಿಲ್ಲವೊ' ಎಂದು ದಾಸರು ಹಾಡಿದ್ದೇನೋ ನಿಜ. ಆದರೆ ನಂಬಿ ಕೆಟ್ಟುದನ್ನು ಯಾರೂ ಹೇಳುವುದಿಲ್ಲ. ನಂಬದೆ ಕೆಟ್ಟೆವು ಅಂತಲೇ ಹೇಳುತ್ತಾರೆ, ಅದೇ ಕಷ್ಟಕ್ಕೆ ಬಂದಿರುವುದು. ನಂಬಿ ಕೆಡಲೇ ಇಲ್ಲ ಅನ್ನುವವರ ಮುಂದೆ ಯಾವ ತುತ್ತೂರಿ ಊದಿದರೂ ವ್ಯರ್ಥ. ಕೋಣನ ಮುಂದೆ ಕಿನ್ನರಿ ಬಾರಿಸಿದಂತೆ, ಕಿವುಡನ ಮುಂದೆ ಸಂಗೀತ ಹಾಡಿದಂತೆ. ನೀರಿನಲ್ಲಿಟ್ಟ ಹೋಮ ಎನ್ನುವುದು ಇದನ್ನೇ ಇರಬೇಕಲ್ಲವೇ ?


**ಕೃಷ್ಣರಾಜ ಕೆದ್ಲ**

ಶ್ರೀಕಾಂತ ಬಿಲ್ಡಿಂಗ್, ಫೋಟೋ ವಿಷನ್, ಪುತ್ತೂರು, ದಕ್ಷಿಣ ಕನ್ನಡ - ೫೭೪ ೨೦೧




# ಕೊನೆಯ ವಸ್ತುಗಳು ಮುಂಜಾವಿನ ೪ಕ್ಕೆ ಕಪ್ಪು ಪೈನ್ ಮರಗಳು

ಹಾಗೂ ಹೀಗೂ ಮೂವತ್ತಕ್ಕೆ ಅಪರಿಪೂರ್ಣತೆಯ ಮಟ್ಟ ತಲುಪಿದ
ವ್ಯಾನ್ ಗೋ, ತನ್ನ ಕಡೆಯ ದಿನಗಳಲ್ಲಿ
ತನ್ನಲ್ಲಿರುವ ಎಲ್ಲವನ್ನೂ ಬಿಸಾಡುತ್ತಿರುವಂತೆ ಚಿತ್ರಿಸಿದ
ಬಟ್ಟೆಗಳು, ಮಂಚ, ಫರ್ನಿಚರ್ ಎಲ್ಲವನ್ನೂ
ಬಾಗಿಲತ್ತ ಕಳ್ಳನೊಬ್ಬನನ್ನು ಹೊರಗಿಡಲು ಎಸೆದಂತೆ –
ಮುಂಜಾವಿನ ನೀಲಿ ಶೀತಲ ಬೆನ್ನ ಮೇಲಿಂದ
ಮೆಲ್ಲನೆ ಜಾರಿಕೊಳ್ಳುತ್ತಿರುವ ನನ್ನ ಕಪ್ಪು ಪೈನ್ ಮರಗಳನ್ನು
ಅವನು ಗಡುಸಾಗಿಸುತ್ತಿದ್ದ :
ನೀಲಿ ನೀರ್ಗಲ್ಲಿಂದ ಬಿಡಿಸಿಕೊಳ್ಳುತ್ತಿರುವ ಕಪ್ಪು ಪೈನ್ ಮರಗಳಾಗಿ –
ಏಕೆಂದರೆ ಅಪರಿಪೂರ್ಣತೆ ಕಲೆಯ ಭಾಷೆ
ಅತಿ ಶ್ರೇಷ್ಠ ಲೇಖಕನೂ ತನ್ನ ಶ್ರೇಷ್ಠ ಸಾಲುಗಳಲ್ಲಿ
ಚೇತರಿಸಿಕೊಳ್ಳದ ಹಾಗೆ ಅಪರಿಪೂರ್ಣ, ಸತ್ಯಕ್ಕಾಗಿ ಅಳುತ್ತಾ
ಹಾಗು ಜ್ಞಾನಕ್ಕಾಗಿ, ದಿಟ್ಟತನಕ್ಕಾಗಿ ಮತ್ತು ಬಾರದ ಪ್ರೇರಣೆಗಾಗಿ –
ಪ್ರಯತ್ನದ ಒಂದು ನಾಟಕದ ನಂತರ, ವಲೇರಿ
ಮತ್ತು ಟ್ರಾಲ್ಲಾಪ್, ಗುರಿಕಾರರು, ಹಿಂದೆ ಸರಿದು ಖುಷಿಯಾಗಿದ್ದಾರೆ.


**ರಾಬರ್ಟ್ ಲವೆಲ್ , 'Last things, black pines At 4 A.M.'**

ಅನು : **ಅಂಕುರ್ ಬೆಟಗೇರಿ**, ೧೦೬, ಇ.ಎ.ಟಿ. ರಸ್ತೆ, ಬಸವನಗುಡಿ, ಬೆಂಗಳೂರು - ೫೬೦ ೦೦೪

ಇಂಗ್ಲಿಷ್ ಮೂಲ : **ಹ್ಯೂ ಚೆಸ್ಟರ್ಮನ್**

ಅನುವಾದ : **ಲಕ್ಷ್ಮೀನಾರಾಯಣ ಎಚ್. ವಿ.**



# ಎಲ್ಲಾರು ಮಾಡುವುದು ಎತಕ್ಕಾಗಿ...

(ಹಾಸ್ಯ ನಾಟಕ)

ಪಾತ್ರವರ್ಗ

ಭೀಮಯ್ಯ

ಕಾಳಮ್ಮ

ಸಿದ್ದಪ್ಪ

ಕಲ್ಲಪ್ಪ

(ಭೀಮಯ್ಯನ ಮನೆಯ ಮುಂಭಾಗ. ಒಂದು ಮೋರಿಯ ಕಟ್ಟೆ – ಸಿದ್ದಪ್ಪ ಕಟ್ಟೆಯ ಮೇಲೆ ಕುಳಿತಿದ್ದಾನೆ; ಕಲ್ಲಪ್ಪ ಅತ್ತಿಂದಿತ್ತ ಸುತ್ತುತ್ತಿದ್ದಾನೆ. ಇಬ್ಬರೂ ಚಳಿ ಹಾಗೂ ಹಸಿವಿನಿಂದ ನರಳುತ್ತಿದ್ದಾರೆ.)

**ಸಿದ್ದಪ್ಪ**: ಏ! ಕಲ್ಲಪ್ಪ ಅದ್ಯಾಕ ಹಂಗ ಅಡ್ಡಾಡಕ ಹತ್ತೀಯೋ – ಕುಂಡೀ ಸುಟ್ಟ ಬೆಕ್ಕಿನ್‌ಹಾಂಗ ? ನನ್ ಹಾಂಗ ಒಂದ್ ತಾವ ಕುಂದ್ರಬಾರ್ದ ?

**ಕಲ್ಲಪ್ಪ**: ಏನ್ ಚಳಿ ಐತೋ ಮಗಂದು... ನಾನು ಕೂತ್ಗಂದ್ರ ಕಲ್ಲೇ ಆಗ್ತೀನ್ ನೋಡು... ಅಯ್ಯೋ! ಶಿವನ! ನಮ್ಮನ್ನ ಹಿಂಗ ಹಸಿವಿಂದ ಚಳಿಯಿಂದ ಕೊನ್ತೀಯಲ್ಲೋ ?

**ಸಿದ್ದಪ್ಪ**: ನಂಗು ನಿನ್‌ಹಂಗ ಚಳೀ-ಹಸ್ವು ಆಗ್ತೈತಪ್ಪಾ... ಆದ್ರ ನಾನ್ ಮಾತ್ರ ಹೀಂಗಾ ಕುಂತಾ ಸಾಯ್ತೀನ್ ನೋಡ.

**ಕಲ್ಲಪ್ಪ**: (ಸಿದ್ದಪ್ಪನ ಪಕ್ಕದಲ್ಲಿ ಕುಳಿತು) ಹಾಂ! ಭಲೋ ಜೋಡಿ ಅದೀವ್ ನೋಡು! ಇಡೀ ದೇಸ ನಮ್ಮನ್ ನೋಡಿ ಹೆಮ್ಮೆ ಪಟ್ಗೋಬೇಕು – ಹಂಗದೀವ್ ನೋಡಪ! (ಚಾದರವನ್ನು ಎತ್ತಿ ತೋರಿಸುತ್ತಾ) ಇಕಾ! ಇಲ್ನೋಡು... ಈ ನನ್ನ ಛದ್ದರ್ದಾಗ ಛೌಬೀಸ್ ತೂತ್ ಅದಾವ! ಛೌಬೀಸ್-ಟ್ವೆಂಟಿಫೋರ್-ತೂತ್ ಅದಾವ! ನಂಗ ಕರೆಕ್ಟ್ ಲೆಕ್ಕೈತಿ – ಯಾಕಂದ್ರ –

**ಸಿದ್ದಪ್ಪ**: ಯಾಕಂದ್ರ – ಮುಂಜಾನಿಂದ ಎಣಿಸೀದಿ ಅದಕ್ಕ! ಬ್ಯಾರೇಹ್ವಾರೇವ ಇಲ್ಲ ನೋಡು. ನಿನ್ನ ಚದ್ದರ ದಾಗಿನ್ ತೂತ್ ತಗೊಂಡ್ ನನಗೆ ಏನ್ ಮಾಡಂದೀ ? ನನ್ನ ಹೊಟ್ಯಾಗ ಈಸ್ ದೊಡ್ಡ ತೂತ್ ಬಿದ್ದೈತಿ...

**ಕಲ್ಲಪ್ಪ**: ಖರೆ... ನಾವು ಬದುಕಬೇಕು... ಆದರ ಹ್ಯಂಗ ?... ಹಿಂಗಾ ಇನ್ನಾ ಯಲ್ಡ್‌ದಿನಾ ಉಪಾಸ ಇದ್ದೇವಂದ್ರ...

**ಸಿದ್ದಪ್ಪ**: ನಾನು ಇದೇ ಮಾತ್ನ ದಪೇದಾರ್ ದರ್ಮಣ್ಣಂಗ ಹೇಳ್ದೆ...

**ಕಲ್ಲಪ್ಪ**: ದಪ್ಪೇದಾರ್ ಧರ್ಮಣ್ಣ? ಅಂವ ಎಲ್ಲಿ ಭೆಟ್ಟ್ಯಾದ ?

**ಸಿದ್ದಪ್ಪ**: ಎಲ್ಲ್ಯಂದ್ರ ? ಇನ್ನೆಲ್ಲಿ – ಸ್ಟೇಸನ್ನಾಗ.

**ಕಲ್ಲಪ್ಪ**: ಸ್ಟೇಸನ್ನಾಗ ? ನೀ ಯಾಕ ಅಲ್ಲಿ ಹೋಗಿದ್ಯೋ – ಭಾಡ್ಯಾ.

**ಸಿದ್ದಪ್ಪ**: ಹುಗ್ಗೀ ಊಟಿತ್ತು – ಅದಕ್ಕ.

**ಕಲ್ಲಪ್ಪ**: ಪೊಲೀಸ್ ಸ್ಟೇಸನ್ನಾಗ ಹುಗ್ಗೀ ಊಟ! ಮಗನ! ನಂಗ್ಯಾಕ್ ಹೇಳ್ಲಿಲ್ಲೋ ?

**ಸಿದ್ದಪ್ಪ**: ಈ ಶಹರ್ದಾಗ ಬಿಕ್ಸೆ ಬೇಡು. ನಿಂಗೂ ಸ್ಟೇಸನ್ನಾಗ ಹುಗ್ಗೀ ಊಟ ಉಣಸ್ತಾರ.

**ಕಲ್ಲಪ್ಪ**: ಯಾಕ ?

**ಸಿದ್ದಪ್ಪ**: ಯಾಕಂದ್ರ – ಈ ಶಹರ್ದಾಗ ಬಿಕ್ಸೇ ಬೇಡೂಹಂಗಿಲ್ಲ – ಅದು ಕಾನೂನಿಗೆ ವಿರುದ್ಧ –

**ಕಲ್ಲಪ್ಪ**: ಬೇಡಿದ್ರ ?

**ಸಿದ್ದಪ್ಪ**: ಮುಕ್ಳೀಗೆ ಮೆಣಸಿನಕಾಯಿ ಇಡ್ತಾರ!

**ಕಲ್ಲಪ್ಪ**: ಹಂಗಾರ ನಾವು ಬದ್ಕೂದು ಬ್ಯಾಡಂತ ?

**ಸಿದ್ದಪ್ಪ**: ನಿಂಗ ಬದ್ಕಂತ ಯಾರಂದಾರ ?

**ಕಲ್ಲಪ್ಪ**: ದಪ್ಪೇದಾರ್ ಧರ್ಮಣ್ಣಂಗ ಬದ್ಕೂ ಅಂದರ ಏನ್ ಗೊತ್ತೈತಿ ? ಹುಚ್ಚ-ಹುಚ್ಚದಾನಂವ !

**ಸಿದ್ದಪ್ಪ**: ಖರೇ ಅಂದೀ ನೋಡು – (ಹಾಡಲು ಪ್ರಾರಂಭಿಸುತ್ತಾನೆ, ಹಾಗೆ ಕಾಳಪ್ಪನೂ ಕುಣಿಯುತ್ತಾ ಸೇರಿಕೊಳ್ಳುತ್ತಾನೆ)

*ಏನು ಗೊತ್ತು ಏನ್ ಗೊತ್ತವ್‌ಂಗ ।*
*ಕೊಬ್ಬಿ ನಿಂತ ಕ್ವಾಣನಂತವ್‌ಂಗ ॥*

*ಬೀದಿ-ಬೀದಿ ತಿರುಗೋದಂದ್ರ*
*ಬೇಡಿ-ಬೇಡಿ ಬದ್ಕೋದಂದ್ರ*
*ನಡ್ಗಿ-ನಡ್ಗಿ ಮಡ್ಗೋದಂದ್ರ ॥ ಏನು ಗೊತ್ತು ॥*

*ಬಡವರ ಹೊಟ್ಟೇ ಬೆಂಕೀ ಅಂದ್ರ*
*ಬೆಂಕಿ ಒಳಗಿನ ಬವಣೆ ಅಂದ್ರ*
*ಬವಣೆ ಒಳಗಿನ ಬದಕು ಅಂದ್ರ ॥ ಏನು ಗೊತ್ತು ॥*

**ಕಲ್ಲಪ್ಪ**: ಇಲ್ ಕೇಳ ಸಿದ್ದಪ್ಪ, ನನ್ ತಾವ ಇನ್ನು ತಡ್ಕೊಳ್ಳಾಕ ಆಗ್ವಲ್ದು. ಅಂವ ಏನ್ ಮಾಡ್ತಾನ ಮಾಡ್ಕೊಳ್ಳ್ಯಾಕ – ನಾನು ಇವತ್ತು ಭಿಕ್ಸೆ ಬೇಡಾವ್ನ ನೋಡು. ಈ ಶಹರ್ದಾಗಿನ ಮನೆ-ಮನೆ ಕದಾ ಬಡದು ರೊಟ್ಟೀ ಬೇಡ್ತೀನಿ – ಅದ್ಯಾಂವ ನನ್ನ ಮಗ ತಡೀತಾನ ನೋಡಾಕ ಬೇಕು!

**ಸಿದ್ದಪ್ಪ**: ಹೌದಲೆ ಮಗನ! ಇಕ! ಈಗಾ ಸುರು ಮಾಡಾನ! ನಾನ ಇದಾ ಮನೀ ಕದಾ ಬಡದುಬೇಡ್ತೀನಿ... ದಾನ-ಧರ್ಮ ಹುಟ್ಟೋದು ಮನ್ಯಾಗ ಅಂತ ಹೇಳ್ತಾರ – ಅದು ಖರೇನೊ – ಖೊಟ್ಟೇನೊ ನೋಡಾ ಬಿಡ್ತೀನಿ... (ಹೊರಡುತ್ತಾನೆ)

**ಕಲ್ಲಪ್ಪ**: ಆತು ಹಂಗಾರ. ನಾನು ಆತ್ಲಾಗಿನ್ ಬೀದೀಗ್ ಹೋಗ್ತೀನಿ. ನೀನು ಇತ್ಲಾಗಿನ್ ಬೀದಿ ಬೇಡು.

**ಸಿದ್ದಪ್ಪ**: (ಕಲ್ಲಪ್ಪ ಹೋದಮೇಲೆ, ಸಿದ್ದಪ್ಪ, ಭೀಮಯ್ಯನ ಮನೆಯ ಮುಂದೆ ನಿಂತು) ಅಮ್ಮಾ, ತಿನ್ನಾಕ ಏನಾರ ಕೊಡ್ರವ್ವ, ಒಂದು ವಾರಾತು ಏನೂ ತಿಂದಿಲ್ಲ.

(ಸುಮಾರು ೫೦ ವರ್ಷ ವಯಸ್ಸಿನ, ದಢೂತಿ ದೇಹದ ಭೀಮಯ್ಯ ಬಾಗಿಲು ತೆಗೆಯುತ್ತಾನೆ.)

**ಭೀಮಯ್ಯ** : ಥೂ! ನೀನ !? ನಿಂಗ ಕೊಡಾಕ ಏನಿಲ್ಲ. ಆಚೆ ಬೀದಿಗೆ ನಡಿ. ಹಂ! ನಿಂದ್ರಬ್ಯಾಡ – ನಡೀ...

ಸಿದ್ದಪ್ಪ: ಸಾಮೇರ. ಹಂಗ ಅನ್‌ಬ್ಯಾಡ್ರೀ. ಒಳಗ ಒಂದು ಒಣ ರೊಟ್ಟಿ ಐತೇನೋ ನೂಡ್ರೀ...

ಭೀಮಯ್ಯ : ಒಳಗ ಏನಿಲ್ ನೆಡಿಯಪ... ನನ್ನ ಹೇಣ್ತಿ ಮನ್ಯಾಗಿಲ್ಲ – ನಂಗಂತೂ ತುರ್ಸ್ಗೊಳಾಕೂ ಪೊರ್ಸೊತ್ತಿಲ್ಲ. (ಭೀಮಯ್ಯ ದಢಾರನೆ ಬಾಗಿಲು ಹಾಕಿ ಹೋಗುತ್ತಾನೆ; ಸಿದ್ದಪ್ಪ ಗೊಣಗುತ್ತಾ ಹೋಗುತ್ತಾನೆ; ಸ್ವಲ್ಪ ಹೊತ್ತಿನ ನಂತರ ಕಲ್ಲಪ್ಪನೂ ಬಂದು, ಅದೇ ಮನೆಯ ಬಾಗಿಲನ್ನು ಬಡಿಯುತ್ತಾನೆ. ಈ ಬಾರಿ ಭೀಮಯ್ಯನ ಹೆಂಡತಿ, ಕಾಳಮ್ಮ ಬಾಗಿಲನ್ನು ತೆರೆಯುತ್ತಾಳೆ. ಆಕೆ, ಸುಮಾರು ೪೫ ವರ್ಷ ವಯಸ್ಸಿನ ಕಟ್ಟುಮಸ್ತಾದ ಘಾಟಿ ಹೆಂಗಸು.)

ಕಾಳಮ್ಮ: ಅಯ್ಯ! ನೀನ ?! ಥೂ! ತಿರುಕ್ ಮುಂಡೇದೇ! ಹೋಗ್ ಹೋಗ್ ! ಮನ್ಯಾಗ ಗಂಡಸ್ರಿಲ್ಲ...

ಕಲ್ಲಪ್ಪ: ನೀವದೀರಲ್ಲ ಅಮ್ಮಾರ... ಏನಾರು ಕೊಡ್ರವ್ವ... ಹೊಟ್ಟೀ ಹಸೀತೈತಿ...

ಕಾಳಮ್ಮ: ಒಮ್ಮಿ ಹೇಳಿದರ ಅರ್ಥಾಗುದಿಲ್ಲೇನ್ ನಿನಗ ? ನಡಿ ನಡಿ. ಮನ್ಯಾಗ ಏನಿಲ್ಲ.

(ದಢಾರನೆ ಬಾಗಿಲನ್ನು ಹಾಕಿಕೊಳ್ಳುತ್ತಾಳೆ. ಅಷ್ಟರಲ್ಲಿ ಭೀಮಯ್ಯ ಬಾಗಿಲನ್ನು ತೆಗೆದುಕೊಂಡು ಹೊರಬರುತ್ತಾನೆ; ಎಲ್ಲಿಗೋ ಹೋಗಲು ಸಿದ್ಧತೆ ನಡೆಸಿದ್ದಾನೆ.)

ಭೀಮಯ್ಯ : ಕಾಳಮ್ಮ ! ಏ ! ಕಾಳಮ್ಮ !

ಕಾಳಮ್ಮ: (ಪ್ರವೇಶಿಸುತ್ತಾ) ಯಾಕ್ರೀ ಏನಾತು ? ಯಾಕ್‌ಹಾಂಗ ಬೀದ್ಯಾಗ ನಿಂತು ಬಾಯ್ ಮಾಡಾಕ ಹತ್ತೀರಿ ? ಒಳಗ ಬಂದು ಒದರ್ಬಾರ್ದ ?

ಭೀಮಯ್ಯ : ಅಲ್ಲ ಕಾಳಮ್ಮ–

ಕಾಳಮ್ಮ: ನಂಗ ಕಾಳಮ್ಮ ಅಂತ ಕರೀಬ್ಯಾಡ್ರಂತ ಹೇಳಿಲ್ಲೇನ್ ನಿಮಗ ? ನಾ ನಿಂ ಕೂಟ ಮಾತಾಡಕೊಲ್ಲೆ.

ಭೀಮಯ್ಯ: ಓ! ಮರ್ತೇ ಬಿಟ್ಟಿದ್ ನೋಡು... ಕಾಳು... ಕಾಳೂ (ರಮಿಸುತ್ತಾನೆ)

ಕಾಳಮ್ಮ: ಹಂ ! ಗೊತ್ತಾತು... ಕರ್ದದ್ದ್ಯಾಕ ?

ಭೀಮಯ್ಯ: ಹಂ! ಈ ಗದ್ದಲ್ದಾಗ ಮರ್ತಬಿಟ್ಟಿದ್ನೋಡು... ಇವತ್ತು ಮದ್ಯಾನ ಊಟಕ್ಕ ಮನ್ಯಾಗ ಇರಾಂಗಿಲ್ಲ..

ಕಾಳಮ್ಮ: ಯಾಕ ? ಖಾನಾವಳಿಗೆ ಹೊಂಟಿರೇನು ? ನನ್ ಕಯ್ಯಾಗಿನ್ ರೊಟ್ಟಿ ಕಂಯ್ಯಾತು ?

ಭೀಮಯ್ಯ: ಅದ್‌ಹ್ಯಾಂಗ ಆದೀತ್ ಬಿಡು... ನಿನ್ನ ರೊಟ್ಟಿ ಹ್ಯಂಗಿರ್ತೈತಂಬೂದು ನನ್ನ ಹೊಟ್ಟೀ ನೋಡಿದರ ತಿಳೀತೈತಿ... ಇವತ್ತು ನಮ್ಮ ಎಮ್ಮೆಲ್ಲೇ ಸಾಯೇಬರ ಮನ್ಯಾಗ ಪಾರ್ಟೀ ಐತಿ. ನಂಗ ಬಾ ಅಂದಾರ.

ಕಾಳಮ್ಮ: ಅಲ್ರೀ, ಎಲಕ್ಷನ್ ಆಗಿ ಎಲ್ಡ್ ವರ್ಸಾತು ಇನ್ನಾ ಪಾರ್ಟೀ-ಮೀಟಿಂಗ ಅಂತೀರಲ್ರೀ ?

ಭೀಮಯ್ಯ: ಆ ಪಾರ್ಟೀ ಅಲ್ಲ ಕಾಳಮ್ಮ... ಅಲ್ಲ ಕಾಳೂ... ಉಣ್ಣೂ ಪಾರ್ಟಿ... ತಿನ್ನೂ ಪಾರ್ಟಿ... ಎಣ್ಣೀ ಪಾರ್ಟೀ... ನೀನೂ ಬರ್ತೀ ?

ಕಾಳಮ್ಮ: ಅಯ್ ! ನಾಯ್ಯಾಕ್ ಬರ್ಲಿ ? ಅಲ್ರೀ ಮನ್ಯಾಗ ಮೂರ್ ಕೋಳೀ ಕೊಯ್ದು ಮೂರ್ ಸೇರ್ ಅಕ್ಕೀ ಹಾಕಿ ಈಟ್ ಬಿರ್ಯಾನಿ ಮಾಡೀನಲ್ಲ ಅದನ್ಯಾರ್ ತಿನ್ನೋರು ?

ಭೀಮಯ್ಯ: ನೀನು. (ಆಕೆ ಸಿಟ್ಟಾಗಿದ್ದನ್ನು ನೋಡಿ) ಅಂದ್ರ... ನೀನು ಮನ್ಯಾಗ್ ಇರ್ತೀನಂದ್ಯಲ್ಲ ಕಾಳೂ... ಅದು... ಏನಾತಂದ್ರ... ಎಮ್ಮೆಲ್ಲೇ ಸಾಹೇಬ್ರು ನಾನು ನಿಮ್ಮನೀಗೆ ಬರ್ತೀನಿ – ನಿಮ್ಮ ಮನ್ಯಾಗ ಮೀಟಿಂಗ ಮಾಡೋಣು – ಅಂದಿದ್ರ. ಈಗ ಲಾಸ್ಟ್ ಮಿನಿಟ್ನಾಗ ಚೇಂಜ್ ಮಾಡ್ಯಾರ್ ನೋಡು...

ಕಾಳಮ್ಮ: ಆತು. ಹಂಗಾರ ಅಟೂ ಬಿರ್ಯಾನೀನು ನೀವೇ ತಗಂಡ್ ಹೋಗ್ರಲ ?

ಭೀಮಯ್ಯ: ನಾನು ? ಸಾವ್ಕಾರ್ ಭೀಮಯ್ಯ ! ತಾಲೂಕ್ ಪಂಚಾಯ್ತಿ ಎಕ್ಸ್ ಮೆಂಬ್ರ ! ಹಳ್ಳೀ ಹೆಣ್‌ಮಕ್ಳು ಹೊಲಕ್ಕ ರೊಟ್ಟೀ ಒಯ್ಯೂಹಂಗ ತಲೀ ಮ್ಯಾಲ ಈಟ್ ದೊಡ್ಡ ಡಬ್ಬೀ ಹೊತ್ಗಂಡು ಈ ಶಹರ್ದಾಗ ಹೋಗಂತೀ ?

ಕಾಳಮ್ಮ : ಒಲ್ಲೆಂದ್ರ ಬಿಡ್ರಿ... ನಿಮ್ಮ ಬಿರ್ಯಾನಿ ತಿಂದು ಎಮ್ಮೆಲ್ಲೇರು ಖುಷಿ ಆಗಿತ್ರೇನೋ ಅಂತ ನಾ ಅಂದೆ.

ಭೀಮಯ್ಯ: ನೀ ಹೇಳೂ ಮಾತೂ ಖರೇನ ಐತಿ ಬಿಡು... ಆದರ.. ಹ್ಯಂಗ್ ಮಾಡೂಣು ?

ಕಾಳಮ್ಮ: ಒಬ್ಬ ಆಳ್ ಮಗನ್ನ ಕಳಿಸಿದರ ?

ಭೀಮಯ್ಯ : ಕರೆಕ್ಟ್ ! ಬರೋಬರಿ ಐಡಿಯಾ ! ಆದರ ಆಳ್ಮಗನ್ನ ಈಗ ಎಲ್ಲಿ ಹುಡುಕೋದು ?

ಕಾಳಮ್ಮ: ನೋಡ್ರೀ ನೀವು ಎಮ್ಮೆಲ್ಲೇ ಮನೀಗೆ ಹೊಕ್ಕೀರಲ ಹಂಗ ಅಲ್ಲಿಂದ ಒಬ್ಬ ಆಳ್‌ಮಗನ್ನ ಕಳಿಸಿದರಾತು.

ಭೀಮಯ್ಯ: ಆತು. ಹಂಗ ಮಾಡ್ತೀನಿ... ಆದರ... ಬಿರ್ಯಾನೀ ಒಯ್ಯಾಕ ಬಂದಾಂವ, ನಾನ್ ಕಳಿಸಿದಂವ್ನ ಅಂತ ನಿಂಗ ಹ್ಯಂಗ ತಿಳಿತೈತಿ ?



ಕಾಳಮ್ಮ: ಹೌದಲ್ಲ? ಹಂಗಾರ ಹ್ಯಂಗ ಮಾಡ್ತೀರಿ...?

ಭೀಮಯ್ಯ: (ಯೋಚಿಸಿ) ನೋಡ, ಅಂವ ನಿನ್ ತಾಕ್ ಬಂದು ಹಿಂಗ ಅನ್ತಾನ – ಅಮ್ಮಾರ, ಭೀಮಯ್ಯ ನೋರು ಕಳ್ಸ್ಯಾರ - ಬಿರ್ಯಾನಿ ಕೊಡ್ಬೇಕಂತ. ಆಗ ನೀ ಅಂತಿ : ಗುರ್ತಾ ಏನಪಾ ಹೇಳ್ತಿ ? ಆಗ ಅಂವ ಅಂತಾನ : ಅಮ್ಮಾರ, ನಿಮ್ಮ ಗಲ್ಲ ಜಿಗಟಾಕ ಹೇಳ್ಯಾರ್ರಿ. ಆಗ ನೀನು–

ಕಾಳಮ್ಮ: ಮೂಲ್ಯಾಗಿನ ಯಕ್ಕಡ ತಗೊಂಡು ಎಲ್ಡು ಇಕ್ಕ್ತೀನಿ !

ಭೀಮಯ್ಯ : ಯಾಕ ?

ಕಾಳಮ್ಮ: ಯಾಕಂತ ಕೇಳ್ತೀರಲ್ರಿ ?... ನೀವೊಬ್ಬ ಗಂಡಸ್ರ ?... ಅಲ್ರೀ ಯಾವನೊ ಭಾಡ್ಯಾ ಬಂದು ನನ್ನ ಗಲ್ಲ ಬೇಡ್ತಾನೇ ಅಂತೀರಿ ?

ಭೀಮಯ್ಯ : ಇಲ್ ಕೇಳ ಕಾಳೂ, ಅಂವ ಖರೇವಾಗೂ ಗಲ್ಲ ಬೇಡ್ತಾನಂದೀಯೇನು ? ಇಲ್ಲ, ನಿಂಗ ಗುರ್ತಾ ಹತ್ಲಿಕಷ್ಟ ಹಂಗಂತಾನ...

ಕಾಳಮ್ಮ: (ನಿರಾಸೆಯಿಂದ) ಓ ! ಅಷ್ಟಾ ಏನ್ರಿ ?

ಭೀಮಯ್ಯ : ಅಷ್ಟ ಮತ್ತ... ಹಂಗಾರ ನಾ ಹೋಗ್ಲೀ ?

ಕಾಳಮ್ಮ: ಆತು. ಛಲೋ ಕೆಂಪನ್ ಹುಡ್ಗನ್ನ ಕಳಸರಿ ಮತ್ತ... ಯಾವನೋ ಕಿಳ್ಳೇಕ್ಯಾತ ಬಂದು ಕೆನ್ನೀ ಜಿಗಟ್ಯಾನು.

ಭೀಮಯ್ಯ: ಆತಾತು... ಅಗಳೀ ಹಾಕ್ಕೋ... ಈ ಊರ್ನಾಗ ಯಾರನ್ನೂ ನಂಬೂ ಹಾಂಗಿಲ್ಲ..

ಕಾಳಮ್ಮ: ಆತು. ಲಗೂ ಬರ್ರೀ ಮತ್ತಾ. ಮನ್ಯಾಗ ನಾ ಒಬ್ಬಾಕೀನ ಇರಾದು ನೋಡ್ರಿ...

(ಭೀಮಯ್ಯ ಹೋಗುತ್ತಾನೆ; ಮೇಲಿನ ಎಲ್ಲ ಮಾತುಗಳನ್ನೂ ಕದ್ದು ಕೇಳಿಸಿಕೊಳ್ಳುತ್ತಿದ್ದ ಕಲ್ಲಪ್ಪನಿಗೆ ಏನೋ ವಿಚಾರ ಹೊಳೆದಿರಬೇಕು – ಖುಷಿಯಲ್ಲಿದ್ದಾನೆ; ಅಷ್ಟರಲ್ಲಿ ಸಿದ್ದಪ್ಪ ಬರುತ್ತಾನೆ.)

ಸಿದ್ದಪ್ಪ: ಏನ್ ಕಲ್ಲಪ್ಪ, ಏನಾರು ಲಕ್ಕೈತೇನಪ್ಪ ?

ಕಲ್ಲಪ್ಪ: ಐತಿ ಅಂದ್ರ ಐತಿ – ಇಲ್ಲ ಅಂದ್ರ ಇಲ್ಲ !

ಸಿದ್ದಪ್ಪ: ಅದೇನ್ ಒಗಟ್ಲೆ ಮಾತಡ್ತೀ – ಏನಂತ ಸರಳ ಹೇಳ್ಬಾರ್ದೇನ ?

ಕಲ್ಲಪ್ಪ: ನೋಡಪಾ, ನಿಂಗ ಹಸಿವು ಆಗೈತೋ ಇಲ್ಲೋ ?

ಸಿದ್ದಪ್ಪ: ಏನ್ ಹಂಗಂದ್ರ ? ಹಸಿವು ಆಗೈತೋ.

ಕಲ್ಲಪ್ಪ: ಹಂಗಾರ, ನಾ ಹೇಳ್ದಾಂಗ ಮಾಡ್ತೀ ? ಹೊಳ್ಳಿ ಪ್ರಶ್ನೀ ಕೇಳಾಂಗಿಲ್ಲ ಮತ್ತ.

ಸಿದ್ದಪ್ಪ: ಆತೋ ಯಪ್ಪ, ನಾ ಏನ್ ಮಾಡ್ಬೇಕನ್ನೋದ್ನಾರು ಹೇಳು – ಈ ಹೊಟ್ಟೀ ತುಂಬತೈತಿ ಅಂದ್ರ ಶಗಣೀ ತಿಂದೇನು. ಹೇಳಪಾ.

ಕಲ್ಲಪ್ಪ: ಆತು ಹಂಗಾರ. ನೋಡ, ಈಗ ನಾನು ಆ ಕಡೀ ಬೀದೀಗೆ ಹೋಗ್ತೀನಂತ ತಿಳಿ; ನೀನು ಈ ಮನೀ ಕದಾ ಬಡಿಬೇಕ.

ಸಿದ್ದಪ್ಪ: ಅಲ್ಲೋ ಯಪ್ಪ, ಏನ್ ಮಾತಂತ ಆಡ್ತೀ ನೀನು ? ಮುಂಜಾನಿ ಒಮ್ಮೆ ನನ್ನ ಮಾರೀಗೆ ಮಂಗ್ಳಾರ್ತಿ –

ಕಲ್ಲಪ್ಪ: ನಂಗೆಲ್ಲ ಗೊತ್ತೈತೋ... ಅದು ಆವಾಗಿನ ಮಾತಾತು. ಈಗಿನ್ ಕತೀ ಬ್ಯಾರೇನ ಐತಿ. ನಾನು ಹೇಳೊ ಮಟ ಕೇಳು – ನಾನು, ಅತ್ತಕಡೆ ಬೀದೀಗೆ ಹೋದ್ನಂತ ತಿಳಿ; ನೀನು, ಈ ಮನೀ ಕದಾ ಬಡಿ. ಆಗ ಒಬ್ಬಾಕಿ ಹೆಣ್ಣಮಗಳು ಕದ ತೆಗೀತಾಳ ! ನೀನು ಆಕೀ ಗಲ್ಲ ಜಿಗುಟು –

**ಸಿದ್ದಪ್ಪ**: ಆ ಮನ್ಯಾಗ ಹೆಣ್ಮಕ್ಳೇ ಇಲ್ಲೋ ಯಪ್ಪ.

**ಕಲ್ಲಪ್ಪ**: ಗಪ್ ಕುಂಡ್ರು. ನಡೂ ಬಾಯ್ ಹಾಕ್ಬ್ಯಾಡ. ಹೆಣ್ಮಗಳು ಕದಾ ತೆಗೀತಾಳ – ನೀನು ಗಲ್ಲ ಜಿಗಟ –

**ಸಿದ್ದಪ್ಪ**: ಅಲ್ಲೋ ಕಲ್ಲಪ್ಪ, ಕದಾ ಯಾರ್ ತೆಗೀತಾರ ? ಈಟ್ ಸಣ್ ಕೂಸಾ ?

**ಕಲ್ಲಪ್ಪ**: ಅಲ್ಲ!

**ಸಿದ್ದಪ್ಪ**: (ಆಸೆಯಿಂದ) ಮತ್ತ? ದೊಡ್ಡಾಕಿ ?

**ಕಲ್ಲಪ್ಪ**: ನಮ್ಮಪ್ಪನಾಣೆಗೂ ಖರೇ ದೊಡ್ಡಾಕೀನ. ನೀನು ಆಕೀ ಗಲ್ಲ ಜಿಗುಟು.

**ಸಿದ್ದಪ್ಪ**: ಅಲ್ಲೋ ಯಪ್ಪ ನನ್ನ ಏನ್ ಅಂತ ತಿಳ್ದೀ ನೀನು ? ಬೀದಿ ಕಾಮಣ್ಣ ಅಂತ ತಿಳ್ದೀ ? ನಂಗ ಹೊಟ್ಟೀ ಹಸಿವು ಆಗ್ಯೆತೋ ಕಾಮದ ಹಸಿವಲ್ಲ...

**ಕಲ್ಲಪ್ಪ**: ಶಟಪ್ ! ನಾನು ಪೂರಾ ಹೇಳು ತನ ಕೇಳ್ಳಿ್ತೀಯಿಲ್ಲ? ನೀನ್ ಆಕೀ ಗಲ್ಲ ಚಿವುಟಿ ಹಿಂಗಂತೀಯ : ಅಮ್ಮಾವ್ರ, ಭೀಮಯ್ಯನೋರು ನನ್ನ ಕಳ್ಸ್ಯಾರ – ಬಿರ್ಯಾನಿ ಕೊಡಬೇಕಂತ. ಆಗ ಆ ಹೆಣ್ಮಗಳು ಒಳಗಿಂದ ಈಟ್ ದೊಡ್ಡ ಕ್ಯಾರಿಯರ್‌ನಾಗ ಬಿಸಿ-ಬಿಸಿ ಬಿರ್ಯಾನಿ ತುಂಬ್ಕೊಂಡು ಬರ್ತಾಳ. ಹಂಗ –

**ಸಿದ್ದಪ್ಪ**: ಆಕಾಸ್ದಿಂದ ಹೋಳ್ಗಿ ತುಪ್ಪ, ಜಿಲಾಬು, ಉಂಡಿ-ಚಕ್ಲಿ ಕಡಬು-ಮಳೀ ಸುರಿತೈತಿ... ತೆಗಿ ತೆಗಿ. ಎಲ್ಲಿ ಕಲ್ತ್ಯೋ ಈ ಮಳ್ ಮಾಡೂ ಮಾತಾ ?

**ಕಲ್ಲಪ್ಪ**: ಆತ್ ನೋಡಪ. ನಂಬೂದು ಬಿಡೂದು ನಿಂಗಾ ಬಿಟ್ಟೈತಿ. ಆದರ, ನಿಂಗ ಖರೇವಾಗ್ಲೂ ಹಸಿವಾಗ್ಯೆತೊ ಇಲ್ಲೋ ?

**ಸಿದ್ದಪ್ಪ**: ಅಲ್ಲೋ ಕಲ್ಲಪ್ಪ, ಮತ್-ಮತ್ತ ಹಂಗ್ಯಾಕ ಕೇಳಿ ನನ್ನ ಕೊಂತೀಯೋ ?

**ಕಲ್ಲಪ್ಪ**: ನಿಂಗ ಖರೇ ಹಸಿವಾಗಿಲ್ಲ. ಅದಕ್ಕ ಸಿಟ್ಟಾಗ್ತಿ.

**ಸಿದ್ದಪ್ಪ**: ಹಂ ! ಆತು. ಈಗ ನಾ ಏನ್ ಮಾಬೇಕಂತ ಮತ್ತೊಮ್ಮೆ ಹೇಳಪ. ಮಾಡಬಿಡ್ತೀನಿ.

**ಕಲ್ಲಪ್ಪ**: ನೋಡಪ, ನಮ್ಮ ಪ್ಲ್ಯಾನು ಭಾಳ್ ಸಿಂಪಲ್ ಐತಿ : ಇಕಾ, ಇದಾ ಮನೀ ಕದಾ ತಟ್ಟು; ಹೆಣ್ಮಗಳು ಕದಾ ತೆಗೆದು ಕೇಳ್ತಾಳ : ಯಾರ್ಬೇಕಿತ್ರೀ ? – ಆಗ ನೀ ಅಂತೀಯ : ಭೀಮಯ್ಯನೋರು ಹೇಳಿ ಕಳ್ಸ್ಯಾರ –

**ಸಿದ್ದಪ್ಪ**: ಬಿರ್ಯಾನಿ ಕೊಡಬೇಕಂತ ! ಆಗ ಆ ಹೆಣ್ಮಗಳು ಕೇಳ್ತಾಳ : ಅವರ ಕಳ್ಸ್ಯಾರಂತ ಹ್ಯಂಗ ನಂಬೂದು ? – ಆಗ ನಾನು ಅಂತೀನಿ : (ನಾಚುತ್ತಾ) ಅವ್ವಾ ನಿಮ್ಮ ಗಲ್ಲ –

**ಕಲ್ಲಪ್ಪ**: ಕರೆಕ್ಟ್. ಆಗ ಆಕಿ ಬಿರ್ಯಾನಿ ಕೊಡ್ತಾಳ.

**ಸಿದ್ದಪ್ಪ**: ಆದರ, ಅದೇ ವ್ಯಾಳ್ಯಾಕ ಆಕೀ ಗಂಡ ಬಂದ್ರ ?

**ಕಲ್ಲಪ್ಪ**: ಇಲ್ಲ. ಅಂವ ಬರಂಗಿಲ್ಲ. ಯಾಕಂತ ಕೇಳ್ಬೇಡ. ಆತು. ಹಂಗಾರ ನಾ ಹೋಗ್ಲಿ...? (ಹೊರಡುತ್ತಾ) ನಾ ಬರೂ ಮಟ ತಿನ್ಬ್ಯಾಡೋ ಮತ್ತ ! (ಹೋಗುತ್ತಾನೆ. ಸಿದ್ದಪ್ಪ ತನ್ನ ಜೋಳಿಗೆಯಿಂದ ಸಾಮಾನ್ಯ ಅಂಗಿಯೊಂದನ್ನು ತೆಗೆದು ಹಾಕಿಕೊಂಡು, ತನ್ನ ತಲೆಕೂದಲನ್ನು ಸರಿಮಾಡಿ ಕೊಳ್ಳುತ್ತಾ, ಭೀಮಯ್ಯನ ಮನೆ ಬಾಗಿಲನ್ನು ಬಡಿಯುತ್ತಾನೆ. ಕಾಳಮ್ಮ ಬರುತ್ತಾಳೆ.)

**ಸಿದ್ದಪ್ಪ**: ಶರಣ್ರೀ, ಅಮ್ಮಾರ.

**ಕಾಳಮ್ಮ**: ಯಾರಪಾ ನೀ ?

**ಸಿದ್ದಪ್ಪ**: ನನ್ನ, ಬಿರ್ಯಾನಯ್ಯನೋರು ಹೇಳಿ ಕಳ್ಸ್ಯಾರ, ಭೀಮಯ್ಯನ ಕೊಡಬೇಕಂತ... ಅಲ್ಲ ಅಲ್ಲ...




ನವಕರ್ನಾಟಕ ಮತ್ತು ವೈದ್ಯಸಾಹಿತ್ಯ ಪರಿಷತ್ತು ಜಂಟಿಯಾಗಿ ಏರ್ಪಾಟು ಮಾಡಿದ್ದ ವೈದ್ಯಕೀಯ ಪುಸ್ತಕಗಳ ಪ್ರದರ್ಶನ ಮತ್ತು ಮಾರಾಟ ಇತ್ತೀಚೆಗೆ ಬೆಂಗಳೂರಿನ ನಿಮ್ಹಾನ್ಸ್‌ನಲ್ಲಿ ನಡೆಯಿತು.

ಭೀಮಯ್ಯನೋರು ಹೇಳಿ ಕಳ್ಸ್ಯಾರ – ಬಿರ್ಯಾನಿ ಕೊಡಬೇಕಂತ.

**ಕಾಳಮ್ಮ**: ಮತ್ತೇನಾರ ಅಂದಾರೇನ್ರಿ ?

**ಸಿದ್ದಪ್ಪ**: (ನಾಚುತ್ತಾ) ನಿಮ್ಮ ಗಲ್ಲಾ... (ಕೈ ಚಾಚುತ್ತಾನೆ. ಆಕೆ ಹಿಂದಕ್ಕೆ ಸರಿಯುತ್ತಾಳೆ)

**ಕಾಳಮ್ಮ**: ಹಂ ! ಗುರ್ತಾತ್ ಬಿಡು... (ಒಳಗೆಹೋಗಿ ದೊಡ್ಡ ಪಾತ್ರೆಯೊಂದನ್ನು ತಂದು ಸಿದ್ದಪ್ಪನಿಗೆ ಕೊಡುತ್ತಾಳೆ) ತಗ. ಜ್ವಾಪಾನದಾಗ ಕೊಂಡುಹೋಗಪ್ಪ ಮತ್ತ...

**ಸಿದ್ದಪ್ಪ**: ಆತ್ರೀ ಅಮ್ಮಾರ. ಇನ್ನು ಅದರ ನಿಗಾ ನನಗೆ ಬಿಡ್ರಿ... ಭಾಳ ಜೋಪಾನಾಗಿ ಒಯ್ತೀನವ್ವ... ಇಕಾ ಹಿಂಗಾ ಒಯ್ತೀನಿ... (ಹೊಟ್ಟೆಗೆ ಒತ್ತಿಕೊಂಡು) ಇಲ್ಲಾ ಇಟ್‌ಗೊಂಡು ಒಯ್ತೀನಿ... ನನ್ನ ಎದ್ಯಾಗ ಅಮಚಿ ಒಯ್ತೀನಿ... ಹಿಂಗ್... ತಾಯಿ ಕೂಸ ಒಯ್ದಾಂಗ... ಕುರುಬ ಕುರಿಮರಿ ಒಯ್ದಾಂಗ ಜ್ವಾಪಾನಾಗಿ ಒಯ್ತೀನಿ... ಹಿಂಗಾ ಒಯ್ತೀನಿ...




(ಕಾಳಮ್ಮ ಬಾಗಿಲನ್ನು ಹಾಕಿಕೊಂಡು ಹೋಗುತ್ತಾಳೆ; ಸಿದ್ದಪ್ಪ ಪಾತ್ರೆಯನ್ನು ಹೊತ್ತುಕೊಂಡು ನಿಧಾನವಾಗಿ ಮೋರಿಯ ಮೇಲೆ ಇಡುತ್ತಾನೆ; ಪ್ರೀತಿಯಿಂದ ಮುದ್ದಿಸುತ್ತಾನೆ.)

**ಸಿದ್ದಪ್ಪ**: ಹ್ಹಾ ! ಇದು ಕನಸ ಇದ್ದಿರಬೇಕು. ಹಾಂ ! ಲಗೂ ಎಚ್ಚರಾಗ್ತೀನಿ. ಯಾಕಂದರ ಇಂತಾ ಕನಸು ಹೆಚ್ಚು ಹೊತ್ತು ಇರಾಂಗಿಲ್ಲ. ಭಾಳ್ ವರ್ಸದಿಂದ ಇಂಥದೇ ಕನಸ ಕಂಡಿದ್ದೆ ! ಆ ! ಕನಸೇ ! ಎಚ್ಚರಾಗ್ಬ್ಯಾಡ ! ಹಂಗಾ ಇನ್ನೂ ಸ್ವಲ್ಪ ಹೊತ್ತು ಇರಪ್ಪ ! ಯಾಕಂದರ, ತಿರುಕರೀಗೆ ಕನಸು ಭಾಳ ಸಸ್ತ್ ಇರ್ತಾವ. ಆದರ ನನಸ ಮಾತ್ರ ಭಾಳ ತುಟ್ಟಿ ಇರ್ತಾವ.

(ಕಲ್ಲಪ್ಪ ಬರುತ್ತಾನೆ. ಕನಸಿನ ಲೋಕದಲ್ಲಿದ್ದ ಸಿದ್ದಪ್ಪನನ್ನು ಬಡಿದೆಬ್ಬಿಸುತ್ತಾನೆ.)

**ಕಲ್ಲಪ್ಪ**: ಏ ! ಸಿದ್ದಪ್ಪ ! ನಾ ಏನ್ ಹೇಳಿದ್ನೋ ನಿಂಗ ? ಖರೆ ಆತಿಲ್ಲ – ನನ್ನ ಮಾತು ?

**ಸಿದ್ದಪ್ಪ**: ಶ್ ! ಗಪ್ ಕುಂದ್ರಲೇ ! ಆವಾಜ಼್ ಮಾಡ್ಬ್ಯಾಡ. ನಂಗ ಎಚ್ಚರ ಆಗ್ತದ !

**ಕಲ್ಲಪ್ಪ**: (ಜೋರಾಗಿ ನಗುತ್ತಾ ಚಪ್ಪಾಳೆ ತಟ್ಟುತ್ತಾನೆ) ಹೌದೇನ ? ಏಳಲೇ ಮಗನ ! ಊಟಕ್ಕೆ ಹೊತ್ತಾತು.

(ಕಲ್ಲಪ್ಪ ಬಿರ್ಯಾನಿಯ ಪಾತ್ರೆಯನ್ನು ಸಂಭ್ರಮದಿಂದ ಹೊತ್ತುಕೊಳ್ಳುತ್ತಾನೆ; ಸಿದ್ದಪ್ಪ, ಹಿಂದಿನಿಂದ ಮಂತ್ರಮುಗ್ಧನಾಗಿ ಸುವಾಸನೆಯನ್ನು ಆಸ್ವಾದಿಸುತ್ತಾ ಹೋಗುತ್ತಾನೆ. ಇಬ್ಬರೂ ನಿರ್ಗಮಿಸಿದ ಸ್ವಲ್ಪ ಹೊತ್ತಿನ ನಂತರ ಭೀಮಯ್ಯ ಬಂದು ಬಾಗಿಲು ಬಡಿಯುತ್ತಾನೆ. ಕಾಳಮ್ಮ ಬಾಗಿಲು ತೆಗೆಯುತ್ತಾಳೆ.)

**ಕಾಳಮ್ಮ**: ಯಾಕ್ರೀ – ಈಟ್ ಲಗೂ ಬಂದ್ರೀ ?

**ಭೀಮಯ್ಯ**: (ಸಿಡಿಮಿಡಿಗೊಂಡು) ಥತ್ತೇರಿ ! ಏನ್ ಮನ್ಷಾರೋ ಏನೊ !

**ಕಾಳಮ್ಮ**: ಯಾಕ್ರೀ ? ಏನಾತು ?

**ಭೀಮಯ್ಯ**: ಆಗೂದೇನ್ ಬಿಡು... ನಡಿ ನಡಿ. ಊಟ ಮಾಡೂಣು... ಹೊಟ್ಟೀ ಹಸಿತೈತಿ...

**ಕಾಳಮ್ಮ**: ಯಾಕ್ರೀ, ಎಮ್ಮೆಲ್ಲೇ ಸಾಯೇಬರ ಮನ್ಯಾಗ

ಊಟ ಮಾಡ್ಲಿಲ್ಲ? ಏನಾತ್ರೀ ?

**ಭೀಮಯ್ಯ** : ನಂಗ ಊಟಕ್ಕ ಬರಾಕ್ ಹೇಳಿ ಅಂವ ಎಲ್ಲೋ ಹೋಗ್ಯಾನ. ಮನೀ ಕದಕ್ಕ ಈಟ್ ದೊಡ್ಡ ಬೀಗ ಜಡದೈತಿ! ಅಂವ ಮನ್ಯಾಗ ಇದಾನ... ಇಲ್ಲ... ಹೂಂ. ನಡಿ ಒಳಗ – ಊಟ ಮಾಡೋಣು...

**ಕಾಳಮ್ಮ** : ಊಟ? ಉಣ್ಣಾಕ ಏನೈತ್ರಿ ?

**ಭೀಮಯ್ಯ** : ಯಾಕ ? ಬಿರ್ಯಾನಿ ಐತಲ್ಲ ?

**ಕಾಳಮ್ಮ** : ಬಿರ್ಯಾನೀ ? ಯಾಕ್ರೀ... ಹ್ಯಂಗ-ಹ್ಯಂಗಾರ ಮಾತಾಡಕತ್ತೀರಿ...

**ಭೀಮಯ್ಯ** : ಯಾಕ? ಎಲ್ಲ ನೀನೊಬ್ಬಾಕೀನ ತಿಂದ್ಯೇನ ?

**ಕಾಳಮ್ಮ** : ಯಾಕ? ಹೆಂಗನಸೈತಿ ಮೈಯ್ಯಾಗ ? ಅಲ್ರೀ, ನಿಮ್ಮ ಅಳ್‌ಮಗ ಬಂದು ಅದನ್ನ ತಗಂಡು ಹೋದ್ನಲ್ರೀ ?

**ಭೀಮಯ್ಯ** : ನೀ ಏನ್ ಹೇಳಾಕ ಹತ್ತೀ ? ಯಾವ ಅಳ್ಮಗ ? ಯಾರ್ ಕಳಸ್ಯಾರ ?

**ಕಾಳಮ್ಮ** : ನೀವ ಕಳ್ಸಿದ್ರಲ್ಲ – ಅಂವ ಬಂದು, ಬಿರ್ಯಾನಿ ಕೊಡ್ಬೇಕಂತ ಅಂದ; ಆಗ ನಾನು, ಗುರ್ತೇನಪ – ಅಂದೆ. ಅದಕ್ಕ ಅಂವ ನನ್ನ ಗಲ್ಲ ಜಿಗಟಾಕ ಬಂದ. ನಂಗ ನೀವ ಕಳ್ಸೀರನ್ನೋದು ಗುರ್ತಾತು. ಅಷ್ಟೂ ಬಿರ್ಯಾನೀನೂ ಒಂದು ಡಬ್ಯಾಗ ತುಂಬಿ ಕಳ್ಸಿ ಕೊಟ್ನ್ಯಪ್ಪ, ಅಂವ ಹೋಗಿ ಐದು ಮಿನಿಟ್ ಆತ್ನೋಡ್ರಿ...

**ಭೀಮಯ್ಯ** : ಕಾಳೂ. ಚ್ಯಾಸ್ಟೀ ಮಾಡ್ಬ್ಯಾಡ. ಚಲೋ ಅನ್ನೂದಿಲ್ಲೋಡ ಮತ್ತ.

**ಕಾಳಮ್ಮ** : ಆ ಶಿವನ ಆಣೇಗೂ ನಾ ಹೇಳೂದು ಖರೇನ ಐತ್ರಿ...

**ಭೀಮಯ್ಯ** : ಎಲ್ಲ ನೀನಾ ತಿಂದು, ಈಗ ಛಲೋ ಕತೀಕಟ್ಟಿ ಹಾಡಾಗ ಹತ್ತೀಯೇನ – ನಾ ಕೇಳಾಕ ವಲ್ಲೆ. ನಡೀ ಒಳಗ... ಆಮ್ಯಾಲ ಮಾತಾಡ್ತೇನಿ.

(ಇಬ್ಬರೂ ಒಳಗ ಹೋಗಿ ಬಾಗಿಲು ಹಾಕಿಕೊಳ್ಳುತ್ತಾರೆ. ಸ್ವಲ್ಪ ಹೊತ್ತಿನಲ್ಲಿ ಕಲ್ಲಪ್ಪ ಹಾಗೂ ಸಿದ್ದಪ್ಪ ಬರುತ್ತಾರೆ; ಈಗ ಅವರ ಮುಖದಲ್ಲಿ ತುಂಬಾ ಗೆಲುವಿದೆ. ಕಟ್ಟೆಯ ಮೇಲೆ, ಒಬ್ಬರ ಬೆನ್ನಿಗೆ ಒಬ್ಬರು ಒರಗಿಕೊಂಡು ಕುಳಿತುಕೊಳ್ಳುತ್ತಾರೆ.)

**ಸಿದ್ದಪ್ಪ**: ಏ! ಕಲ್ಲಪ್ಪ, ಆ ಶಿವನ ಕರುಣಾದಿಂದ ನಮಗೆ ಪೊಗದಸ್ತ್ ಊಟಾತ್ ನೋಡಪ. ಈಗ ನನ್ನ ತಲೀ ಚುರುಕಾಗೈತಿ... ಒಂದು ಒಳ್ಳೆ ಐಡಿಯಾ ಬಂದೈತಿ.

**ಕಲ್ಲಪ್ಪ**: ಅಪ್ಪ ಸಿದ್ದಪ್ಪ, ನಿನ್ನ ಐಡಿಯಾ ಏನಿದ್ರೂ ಸಾವ್ಕಾಶ್ ಹೇಳಪ. ಯಾಕಂದ್ರ ನನಗೆ ಡಾಕ್ಟರ್ ಹೇಳ್ಯಾರ, ಊಟಾದ್ ಕೂಡ್ಲೆ ತಲೀಗೆ ಕೆಲಸ ಹಚ್‌ಬಾರ್ದಂತ. ಉಂಡಿದ್ದೂ ಜೀರ್ಣಾಗೂದಿಲ್ಲಂತ.

**ಸಿದ್ದಪ್ಪ**: ಆತ್ ಬಿಡಪ. ಸಮಸ್ಯಾ ಏನಿದ್ರೂ ಸವಕಾಶ್ ಬಿಡ್ಸೂಣಂತ. ಈಗ ನಾವು ತಿಂದ್ವಲ್ಲ ಬಿರ್ಯಾನಿ, ಅದು ಹ್ಯಂಗಿತ್ತಂದರ, ಅಂತಾದ್ನ ಈ ನನ್ ಜನಮದಾಗ ತಿಂದಿದ್ದಿಲ್ಲ್ ನೋಡ.

**ಕಲ್ಲಪ್ಪ**: ಅದನ್ ಮಾಡಿದೋನ್ನ ಹೊಟ್ಟಿ ತಣ್ಣಗ ಇರ್ಲ್ಯಪ್ಪ.

**ಸಿದ್ದಪ್ಪ**: ಅವನ ಹೊಟ್ಟಿ ತಣ್ಣಗ ಇರ್ಲಿಕ್ಕ ಬೇಕು. ಯಾಕಂದ್ರ ಅಂವ ಹೊಟ್ಟೀ ಮ್ಯಾಗ ತಣ್ಣೀರ್ ಅರವಿ ಹಾಕ್ಯಂಡು ಮನ್ಗ್ಯಾನ್ ನೋಡು – ಅದಕ್ಕ !

**ಕಲ್ಲಪ್ಪ**: ಅಲ್ಲೋ ಸಿದ್ದಪ್ಪ, ಆ ಬಿರ್ಯಾನೀ ನೆಪ್ಪು ಎಷ್ಟ್ ರುಚೀ ಐತಂದರ, ನನಗ ಇನ್ನು ಏನ್ ತಿಂದರೂ ರುಚೀ ಹತ್ತಂಗಿಲ್ಲ್ ನೋಡಪ.

**ಸಿದ್ದಪ್ಪ**: ಹಂಗ ಅನ್ಬ್ಯಾಡಪ್ಪ, ಒಮ್ಮಿ ಅದಕ್ಕಿಂತ ಛಲೋದೇನಾರೂ ಸಿಕ್ತಂದರ ?

**ಕಲ್ಲಪ್ಪ**: ಅದಕ್ಕ ಇನ್ ಏಳ್ ಜನ್ಮ ಕಾಯ್ಬೇಕಾದೀತ್ ನೋಡ.

**ಸಿದ್ದಪ್ಪ**: ಯಾಕಪ ? ಯಾಕ ಹಾಂಗ ಅನ್ತೀ ? ಈ ಸಿದ್ದಪ್ಪ ಅಂದ್ರ ಏನು ಅಂಬೋದು ನಿಂಗ ಇನ್ನೂ ಗುರ್ತಾಗಿಲ್ಲೇನ ?... ನಿಂಗ ಬೇಕಂದ್ರ ಹೇಳು, ಈ ಬಿರ್ಯಾನೀಗಿಂತ ರುಚಿಯಾದ್ದು – ಹಲಸಿನ ಹಣ್ಣಿನ ಕಡಬು – ಬೇಕೇನ ?

**ಕಲ್ಲಪ್ಪ**: (ಆಸೆಯಿಂದ) ಏ ! ಸಿದ್ದಪ್ಪ, ಯಾಕ ಒಗಟ ಹಚ್ಚಿ ಮಾತಾಡಕಹತ್ತೀಯೋ ? ಹೇಳೋ ಏನಂತ.

**ಸಿದ್ದಪ್ಪ**: (ಹಾಡುತ್ತಾ ಕುಣಿಯತೊಡಗುತ್ತಾನೆ; ಕೊನೆಗೆ ಕಲ್ಲಪ್ಪನೂ ಸೇರಿಕೊಳ್ಳುತ್ತಾನೆ.)

*ಕಡಬೂ ಮಾಡಿದ್ದಳಪ್ಪ ಕಾಳಮ್ಮ*
*ಬೆಲ್ಲ-ತುಪ್ಪ ಯಾಲಕ್ಕಿ ಗಮ ಗಮ್ಮ*
*ಕೇಳೊ ಗೆಳೆಯ ತಿನ್ನಬೇಕು ಕಮಕಮ್ಮ // ಕಡಬೂ //*

*ಕಂಡೀನಪ್ಪ ಕಪ್ಪಾಟೊಳಗೆ ಇಟ್ಟಿದ್ದನ್ನ*
*ಬಾಳೆ ಎಲೆ ಬಾಡಿಸಿ ಕಟ್ಟಿದ್ದನ್ನ*
*ಕೇಳೊ ಗೆಳೆಯ ತಿನ್ನಬೇಕು ಕಮಕಮ್ಮ // ಕಡಬೂ //*

**ಕಲ್ಲಪ್ಪ**: ಕಡಬು ತಿನ್ನಬೇಕು ಖರೆ – ಆದರ, ಹ್ಯಂಗ ?

**ಸಿದ್ದಪ್ಪ**: ಯಾಕ ? ನಿನ್ನ ಸೂತ್ರ ನಿಂಗ ಗೊತ್ತಾ ಐತಿ. ಅಮ್ಮಾವ್ರ, ಭೀಮಯ್ನೋರು ಹೇಳಿ ಕಳ್ಸ್ಯಾರ, ಕಪಾಟ್ನಾಗ ಕಡಬು ಐತಂತ ಕೊಡಬೇಕಂತ... (ಕಲ್ಲಪ್ಪ ಅರೆ-ಮನಸ್ಸಿನಲ್ಲಿದ್ದಾನೆ.)

ಹಂಗ ಕಾಳಮ್ಮನ ಗಲ್ಲ! (ಕಲ್ಲಪ್ಪನಿಗೆ ಕಚಗುಳಿ ಇಡುತ್ತಾನೆ)

**ಕಲ್ಲಪ್ಪ**: ಆತು. ಆಗ ನೀ ಹೋಗೀಯಲ್ಲ ಈಗ ನಾನ ಹೋಗ್ತೀನ್ ಬಿಡು... ನೀನು ಅತ್ಕಡೆ ಬೀದ್ಯಾಗಿರು.

**ಸಿದ್ದಪ್ಪ**: ಆತು. ನೀನು ಹೋಗಪ. (ಹೋಗುತ್ತಾನೆ. ನಂತರ, ಕಲ್ಲಪ್ಪ ಭೀಮಯ್ಯನ ಮನೆಯ ಬಾಗಿಲು ಬಡಿಯುತ್ತಾನೆ)

## ನೂರು ಬಣ್ಣದ ಕಣ್ಣು



ಬಣ್ಣ ಅಂದರೆ ಸಾಕು
ಬಣ್ಣವೇ ಬದಲು;
ಬಣ್ಣವೇ ಕನಸು
ಮನಸ ತುಂಬ.

ಏಳು ಬಣ್ಣಗಳ ಕೂಡ
ಇರುಳಿಡಿ ಓಕುಳಿ;
ಅಷ್ಟೂ ಬಣ್ಣಗಳ ಬಿಂಬ
ಹಗಲ ತುಂಬ.

ಬಣ್ಣದ್ದೇ ಮಾತು
ಬಣ್ಣದ್ದೇ ಕತೆ;
ಹಾಡ ಗುನುಗಿನ ತುಂಬ
ಅದರ ಗುಂಗು.

ನಿನಗ್ಯಾವ ಬಣ್ಣ
ಸೇರುವುದೊ ಕಂದ ?

ಮೀಟಿದೊಡನೆಯೆ
ಬಂತು ನಾದಗಂಧ :

'ಆ ಬಣ್ಣ ಈ ಬಣ್ಣ
ತಲೆಗೊಂದು ಬಣ್ಣ
ಬಣಬಣದ ಬಣ್ಣದೆಡೆ
ನನ್ನ ಕಣ್ಣು ಸಣ್ಣ;
ನೂರು ಬಣ್ಣದ ಕಣ್ಣ
ನವಿಲ ಬಣ್ಣವೆ ಚೆನ್ನ'

**ವಿಜಯಕಾಂತ ಪಾಟೀಲ**
ನ್ಯಾಯವಾದಿ
ಚಿಕ್ಕಾಂಶಿ
ಹೊಸೂರು - ೫೮೧ ೧೧೪
ಹಾವೇರಿ ಜಿಲ್ಲೆ

**ಕಲ್ಲಪ್ಪ**: ಯಾರದೀರ್ರಿ ಒಳಗ? (ಕಾಳಮ್ಮ ಬಾಗಿಲನ್ನು ತೆರೆದು ಬರುತ್ತಾಳೆ) ಭೀಮಯ್ಯೋರು ಹೇಳಿ ಕಳ್ಸ್ಯಾರ, ಕಪಾಟ್ನಾಗ ಕಡಬು ಐತಂತ, ಹಲಸಿನ ಹಣ್ಣಿಂದು, ಅದನ್ನ ತರಾಕ ನನ್ನ ಕಳ್ಸ್ಯಾರ. ಹಂಗ... ಅಮ್ಮಾರ... ನಿಮ್ಮ... ಗಲ್ಲ...

**ಕಾಳಮ್ಮ**: ಹಂ! ಗುರ್ತಾತ್ ಬಿಡು. ಕಡಬು? ಹಲಸಿನ ಹಣ್ಣಿಂದು? ಹೌದಲ್ಲ... ಬರ್ತೀನ್ ತಾಳು. (ಒಳಗೆ ಹೋಗುತ್ತಾಳೆ)

**ಕಲ್ಲಪ್ಪ**: ಓ ಸಿವನ! ಬದುಕು ಅಂದರ ಎಷ್ಟು ಸರಳ ಐತಿ! ಇಷ್ಟ್ ವರ್ಸ ಸುಂಸುಮ್ಕ ಪಾಡು ಪಟ್ಟಂಗಾತು. ಬಿರ್ಯಾನಿ ತುಂಬಿದ ಹೊಟ್ಟಿ – ಅದಕ್ಕ ಮ್ಯಾಲಿಂದ ಕಡಬು! ಆಹ್! ಕಡಬು!!

(ಭೀಮಯ್ಯ ಒಮ್ಮೆಲೇ ಬಂದು ಕಲ್ಲಪ್ಪನಿಗೆ ಹೊಡೆಯ ತೊಡಗುತ್ತಾನೆ.)

**ಭೀಮಯ್ಯ**: ಕಡಬು ಬೇಕೇನ್ಲ – ಮುಂಡೀ ಮಗನ – ಕಡಬು? ತುಡುಗು ಮಾಡ್ತೀಯ, ರಂಡೀ ಮಗನ – ತುಡುಗು. ಬದ್ಮಾಶ್ ನನ್ ಮಗನ! ದುಡಿಯಾಕ ಏನಾಗೈತಿ? ತುಡುಗು ಮಾಡಿ ತಿನ್ನಾಕ ನಾಚಿಕಿ ಬರಂಗಿಲ್ಲೇನ? ನೋಡ, ನನ್ನ ಬಿರ್ಯಾನಿ ಎಲ್ಲಿಟ್ಟೀ ಬೊಗಳ್ತೀಯೋ-ಇಲ್ಲೋ ಬೋಳಿ ಮಗನ? (ಮತ್ತೂ ಹೊಡೆಯುತ್ತಾನೆ.)

**ಕಲ್ಲಪ್ಪ**: ಬ್ಯಾಡ್ರೀ ಯಪ್ಪ... ಹೇಳ್ತೀನ್ರಿ... ಎಲ್ಲಾನೂ ಹೇಳ್ತೀನಿ... ಹೊಡೀ ಬ್ಯಾಡ್ರೀ... ಯಪ್ಪಾ... ದಮ್ಮಯ್ಯ ಅಂತೀನಿ... ನಿಲ್ಲಸರಿ...

**ಭೀಮಯ್ಯ**: ಹುಂ! ಬೊಗಳ ಮತ್ತ, ಬೋಳೀ ಮಗನ...

**ಕಲ್ಲಪ್ಪ**: ಸ್ವಾಮೇರ, ತಪ್ಪು ನಂದಲ್ಲ ಎಲ್ಲ ಮಾಡಿದ್ದೂ ನನ್ನ ಗೆಣೆಯಾ... ಸಿದ್ದಪ್ಪ ಅಂತ. ಅಂವ ಇದ್ನೆಲ್ಲ ಮಾಡಿದ್ದು... ದೇವರ ಆಣೀ ಮಾಡಿ ಹೇಳ್ತೀನಿ – ಇದರಾಗ ನಂದೇನೂ ಇಲ್ರೀ – ಸ್ವಾಮೇರ...

**ಭೀಮಯ್ಯ**: ಅಂವ್ಗ ಇದೆಲ್ಲ ಹ್ಯಂಗ ಗೊತ್ತಾತು?

**ಕಲ್ಲಪ್ಪ**: ಆಗ ನೀವು ನಿಮ್ಮ ಹೆಂಡ್ರ ಕೂಡ ಮಾತಾಡ್ತ, ಎಮ್ಮೆಲೇ ಸಾಯೇಬರ ಮನೀಗೆ ಹೋಗೂದು, ಹಂಗಾ, ಬಿರ್ಯಾನೀ ತರೂದ್ಕಂತ, ಆಳ್ಮಗನ್ ಕಳಸೂದು, ...ಹೀಂಗ ಎಲ್ಲಾನೂ ಕೇಳಿಸ್ಕ್ಯಂಡಾನ... ಹಂಗಾ ಅವ್ನ ಬಂದು, ಅಮ್ಮವ್ರ ಹತ್ರ, ತಾನ ಆಳ್ಮಗ, ಅಂತ ಹೇಳಿ, ಬಿರ್ಯಾನೀ ತಗಂಡ್ ಹೋಗ್ಯಾನ... ಏನ್ ಮಾಡೋದ್ರಿ ಸಾವ್ಕಾರ, ಎಲ್ಲಾರೂ ಮಾಡೋದು, ಈ ಹೊಟ್ಟೀ ಸಲುವಾಗೇ ನೋಡ್ರಿ... ಆದರ, ಹಿಂಗೆಲ್ಲ ಹೈರಾಣ ಆಗ್ತೈತಂತ ಗೊತ್ತಿದ್ದಿದ್ರ ಅವನಪ್ಪನ ಆಣೇಗು ಹಿಂಗ ಮಾಡ್ತಿರ್ಲಿಲ್ಲನೋಡ್ರಿ...

**ಭೀಮಯ್ಯ**: (ಸ್ವಲ್ಪ ಶಾಂತನಾಗಿ) ಓ! ಹಿಂಗೈತೇನ ಕತೀ? ಈಗ ಎಲ್ಲದಾನಂವ? ತೋರಸ್ತಿ?

**ಕಲ್ಲಪ್ಪ**: ಇಲ್ಲೇ ಅತ್ಕಡೇ ಬೀದ್ಯಾಗ ಅದಾನ್ರೀ... ಕರ್ಕೊಂಡು ಬರ್ಲೇನ್ರಿ?

**ಭೀಮಯ್ಯ**: ಆತು. ನಿನ್ನ ಮಾಫ್ ಮಾಡ್ತೀನಿ. ಆದ್ರ ನೀನು ಇನ್ನು ಐದು ಮಿನಿಟ್ನಾಗ, ಆ ಖದೀಮನ್ನ, ಹಂಗ ನನ್ನ ಬಿರ್ಯಾನೀನ್ನ ತಗೊಂಡು ಬರ್ಬೇಕು. ಇಲ್ಲಂದ್ರ, ನಿನ್ನ ಬಾಯಾಗಿನ್ ಹಲ್ಲು ಹಿಂದಾಗಡೆ ಬರೂ ಹಂಗ ಒದೀತೀನ್ ನೋಡು...

**ಕಲ್ಲಪ್ಪ**: ಆತ್ರಿ... ಶಿವನ್ ಮ್ಯಾಲೆ ಆಣೇ ಇಟ್ ಹೇಳ್ತೀನಿ, ಇದಾ ಈಗ ಕರ್ಕೊಂಬರ್ತೀನ್ರಿ...

**ಭೀಮಯ್ಯ**: ಹೋಗು ಹಂಗಾರ. ಹೇಳಿದ್ದೆಲ್ಲ



ನೆಪ್ಪೈತಲ್ಲ?

**ಕಲ್ಲಪ್ಪ**: ಐತ್ರಿ ಸ್ವಾಮೇರ. (ಭೀಮಯ್ಯ ಒಳಗೆ ಹೋಗುತ್ತಾನೆ; ಅಷ್ಟರಲ್ಲಿ ಸಿದ್ದಪ್ಪ ಅಲ್ಲಿಗೆ ಬರುತ್ತಾನೆ.)

**ಸಿದ್ದಪ್ಪ**: ಯಾಕೋ ಕಲ್ಲಪ್ಪ? ಮಾರೀ ಹಿಂಗ ಮಾಡಾಕ ಹತ್ತೀ – ಕಡಬು ಕೊಡ್ಲಿಲ್ಲೇನ?

**ಕಲ್ಲಪ್ಪ**: ಆ ಯವ್ವ, ನಂಗ ಕೊಡಾಂಗಿಲ್ಲ ಅಂತೈತಲ್ಲೋ?

**ಸಿದ್ದಪ್ಪ**: ಕೊಡಂಗಿಲ್ಲ? ಯಾಕಂತ?

**ಕಲ್ಲಪ್ಪ**: ಆಗ ಬಂದಾಂವ ಬರ್ಲಿ ಅವನ್ ಕೂಡ ಕೊಡ್ತೀನಿ – ಅವನ್ ಗುರ್ತ ಐತಿ – ಅಂತೈತಿ ನೋಡಪ. ನಾನೂ ಆಕೀ ಗಲ್ಲಾನ ಕೆಂಪಾಗೂ ಮಟ ಚಿಂವುಟಿದರೂ ಜಪ್ಪಯ್ಯ ಅನ್ಲಿಲ್ಲ.

**ಸಿದ್ದಪ್ಪ**: ಅಷ್ಟ ಏನ? ಅದ್ಯಾವ ದೊಡ್ಡ ಮಾತ? ನಾನ್ ತತ್ತೀನಿ ಬಿಡು.

(ಕಲ್ಲಪ್ಪ ಹೋಗುತ್ತಾನೆ; ಸಿದ್ದಪ್ಪ, ಭೀಮಯ್ಯನ ಮನೆಯ ಬಾಗಿಲನ್ನು ಬಡಿಯುತ್ತಿದ್ದಂತೆಯೇ ಭೀಮಯ್ಯ ಹೊರಬಂದು, ಒಂದೇ ಸಮನೆ ಸಿದ್ದಪ್ಪನನ್ನು ಹೊಡೆಯತೊಡಗುತ್ತಾನೆ.)

**ಭೀಮಯ್ಯ**: ಬದ್ಮಾಷ್ ನನ್ ಮಗನ! ನೀನಾ ಏನು ನನ್ನ ಬಿರ್ಯಾನೀ ಒಯ್ದಾಂವ? ಏನ್ಮಾಡ್ದೀ ಬೊಗಳು! ಇಲ್ಲಂದ್ರ, ದಫ್ಫೇದಾರ್ ದರ್ಮಣ್ಣಂಗ ಹೇಳಿ, ಲಾಕಪ್ಪೀಗೆ ಹಾಕಸ್ತೀನ್ ನೋಡು. (ಹೊಡಿಯುತ್ತಾನೆ)

**ಸಿದ್ದಪ್ಪ**: ಹೊಡೀ ಬ್ಯಾಡ್ರೀ ನಾ ಎಲ್ಲ ಹೇಳ್ತೀನ್ರಿ... ನೋಡಿ ಸ್ವಾಮೇರ, ಅದು ಹಿಂಗಾತ್ರೀ... ನೀವು ನಿಮ್ಮ ಹೆಂಗಸರ ಕೂಡ, ನಿಮಗ ಒಬ್ಬ ಆಳ್ಮಗ ಬೇಕಂತ ಮಾತಾಡಿದ್ದನ್ನ ನಾ ಹೊರಗ ನಿಂತು ಕೇಳಿಸ್ಕೊಂಡೆ. ಹಂಗಾ ಅಮ್ಮವ್ರ ಹಂತ ಬಂದು, ನಾನ ಆ ಆಳ್ಮಗ, ಬಿರ್ಯಾನೀ ಕೊಡ್ಬೇಕಂತ – ಅಂತ ಹೇಳ್ದೆ. ಅವ್ರು ಕೊಟ್ರು – ನಾನು ನೆಟ್ಟಗ ಎಮ್ಮೆಲ್ಲೇ ಸಾಯೇಬ್ರ ಮನೀಗ ಒಯ್ದು ಕೊಟ್ಟು ಬಂದೀನ್ರಿ...

**ಭೀಮಯ್ಯ**: ಹೌದೇನ! ಭಾಳ ಭಲೋ ಕೆಲ್ಸ ಮಾಡಿ! ಆಮ್ಯಾಲ? ಎಮ್ಮೆಲ್ಲೇ ಸಾಹೇಬ್ರು ಭಾಳ್ ಖುಷಿಯಾದ್ರು – ಹೌದಲ್ಲೋ?

**ಸಿದ್ದಪ್ಪ**: ಹೂಂನ್ರಿ. ಸಾವ್ಕಾರ್ರೆ, ಖುಷಿಯಿಂದ ಅವರ ಬಾಯಿಂದ ಮಾತೇ ಹೊಂಡ್ಲಿಲ್ಲ ನೋಡ್ರಿ. ನಿಮ್ಮ ದೊಡ್ಡ ಮನಸ ನೋಡಿ ಅವ್ರು ಮೂಕರಾಗಿ ಬಿಟ್ರ್ರಿ...

**ಭೀಮಯ್ಯ**: ಹೌದೇನ? ಏನ್ ಭಲೋ ಕತೀ ಹೇಳಕ್ಕ ಹತ್ತೀಯಲೆ – ಸೂಳಾಮಗನ, ಇವತ್ತು ಎಮ್ಮೆಲ್ಲೇ ಸಾಹೇಬರು ಮನ್ಯಾಗೇ ಇಲ್ಲ! ನಾನ್ ಈಗ ಅವರ ಮನೀಂದ ಬಂದೀನಿ... ಸುಳ್ಯಾ ಹೇಳ್ತೀಯೇನ?

**ಸಿದ್ದಪ್ಪ**: ಹಾಂ! ನೀವು ಅಲ್ಲೇ ತಪ್ಪೀರಿ ನೋಡ್ರಿ. ಅವ್ರು ಮನ್ಯಾಗ ಇರ್ಲಿಲ್ಲ ಖರೆ. ಆದರ ಈಗ ಮನೀಗೆ ಬಂದಾರ. ನೀವು ಹಿಂಗಾ ಹೋದರ್ರಿ – ಅವ್ರು ಹಂಗಾ ಬಂದಾರ್ ನೋಡ್ರಿ. ಅಷ್ಟಾಗ ನಾನೂ ಹೋದ್ನಾ? ಬಿರ್ಯಾನಿ ಕೊಟ್ನಾ? ಭಾಳ್ ಖುಷಿಯಾದ್ರು. ಏ! ತಮ್ಮಾ, ಲಗೂ ಹೋಗಿ ಭೀಮಯ್ಯನೋರನ್ನ ಕರ್ದುಬಾರ್ಲೇ – ನಾವು ಕಾಯಾಕ ಹತ್ತೀವಂತ ಹೇಳಪ್ಪಾ – ಅಂತ ನನ್ನ ಕಳ್ಸ್ಯಾರ್ರಿ...

**ಭೀಮಯ್ಯ**: ಓಹ್! ಹೌದೇನ? ಅವರು ಮರ್ತೇ ಬಿಟ್ಟರಂತ ತಿಳ್ದಿದ್ದೆ. ಹಂಗಾರ ನೀನು ದೌಡ್ ಹೋಗಿ, ನಾನು ಐದು ಮಿನಿಟ್ನಾಗ ಬರ್ತೀನಂತ ಹೇಳ್ತಿಯೇನ? ಇಲ್ಲಂದ್ರ, ನಾ ಬರೂದಿಲ್ಲಂತ ಅವ್ರೇ ಎಲ್ಲ ಉಂಡಾರಪ ಮತ್ತ... ನೋಡ... ನೀ ಆಟ್ ಮಾಡಪ. ನಿಂಗೂ ಏನರ ಕೊಡ್ತೀನಪ್ಪ...

**ಸಿದ್ದಪ್ಪ**: ಆತರೀ ಸ್ವಾಮೇರ... ನಾ ಹೊಂಟೆನ್ರಿ (ಹೊರಟು ಪುನಃ ಹಿಂದಕ್ಕೆ ಬರುತ್ತಾನೆ) ಸ್ವಾಮೇರ, ಮತ್ತ... ಆ ಕಡಬು?... ನೀವಾ ತರ್ತೀರಾ...? ಇಲ್ಲಾ..?

**ಭೀಮಯ್ಯ**: ಓ! ಮರ್ತ ಬಿಟ್ನಿದ್ನಲ್ಲೋ. ತರ್ತೀನ್ ನಿಲ್ಲೋ... ನೀನಾ ಒಯ್ವಂತಿ (ಒಳಗಿನಿಂದ ಕಡುಬನ್ನು ತಂದು ಸಿದ್ದಪ್ಪನಿಗೆ ಕೊಡುತ್ತಾನೆ) ಎಮ್ಮೆಲ್ಲೇ ಸಾಯೇಬರಿಗೆ ಹೇಳಪಾ... ನಾ ಇನ್ನು ಐದೇ ಐದು ಮಿನಿಟ್ನಾಗ ಬರ್ತೀನಿ, ಕಡಬು ಜೋಪಾನೋ...

**ಸಿದ್ದಪ್ಪ**: ಆತ್ರೀ ಸ್ವಾಮೇರ... ನಾ ನಡದೇನ್ರಿ...

**ಭೀಮಯ್ಯ**: ಆತು... ನಡಿ ನಡಿ... ಕಾಳೂ, ಕಾಳೂ... (ಒಳಗೆ ಹೋಗಿ ಬಾಗಿಲು ಹಾಕಿಕೊಳ್ಳುತ್ತಾನೆ; ಸಿದ್ದಪ್ಪ ಕಡುಬನ್ನು ಆತ್ಮೀಯತೆಯಿಂದ, ಸಂಭ್ರಮದಿಂದ ಹೊತ್ತುಕೊಂಡು ಹೋಗುತ್ತಾನೆ. ಹೀಗೆ ಹೊತ್ತುಕೊಂಡು ಹೋಗುವಷ್ಟರಲ್ಲಿ ಕಲ್ಲಪ್ಪನೂ ಬರುತ್ತಾನೆ. ಅವನಂತೂ ಆಶ್ಚರ್ಯದಿಂದ ಮೂಕನಾಗಿದ್ದಾನೆ.)

**ಸಿದ್ದಪ್ಪ**: ಅಪ್ಪಾ, ಕಲ್ಲಪ್ಪ, ಶ್ರೀಮಾನ್ ಭೀಮಯ್ಯನವರು ಈ ಮಹಾನ್ ದೇವರನ್ನು ಕಳಿಸಿಕೊಟ್ಟಿರುತ್ತಾರೆ; ನೀನು ಇವರಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಪುನೀತನಾಗುವಂಥವನಾಗು!

(ಕಲ್ಲಪ್ಪ, ಉದ್ದನೆಯ ನಮಸ್ಕಾರ ಮಾಡುವಂತೆ ಅಣಿಯಾಗಿ, ಇದ್ದಕ್ಕಿದ್ದಂತೆ ಸಿದ್ದಪ್ಪನ ಕೈಯಲ್ಲಿದ್ದ ಕಡುಬನ್ನು ಎತ್ತಿಕೊಂಡು ಹೋಗುತ್ತಾನೆ; ಸಿದ್ದಪ್ಪ ಅವನನ್ನು ಬೆನ್ನಟ್ಟಿ ಹಿಡಿಯುತ್ತಾನೆ. ಇಬ್ಬರೂ ಸಂತೋಷದಿಂದ ಕುಣಿಯುತ್ತಾ ಹಾಡುತ್ತಾರೆ.)

*ಎಲ್ಲಾರು ಮಾಡುವುದು ಯಾತಕ್ಕಾಗಿ*
*ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ...!!*

(ಹಾಡು ಮುಗಿಯುತ್ತಿದ್ದಂತೆ ಕತ್ತಲೆ)

---

ಇಂಗ್ಲಿಷ್ ಮೂಲ : ಹ್ಯೂ ಚೆಸ್ಟರ್ಮನ್
ಲಕ್ಷ್ಮೀನಾರಾಯಣ ಎಚ್. ವಿ.
'ಅಲಕ', ತ್ಯಾಗರಾಜ ರಸ್ತೆ, ಬೆಟ್ಟಮಕ್ಕಿ ಬಡಾವಣೆ
ಸೀಬಿನಕೆರೆ ಅಂಚೆ, ತೀರ್ಥಹಳ್ಳಿ – ೫೭೭ ೪೩೨



# ಕಪೋತಗಿರಿಯಲ್ಲೀಗ ಗತವೈಭವದ ಸಂಭ್ರಮ

"**ಕೊ**ಡ್ಲಿ ಹಿಡ್ಕೊಂಡು ಕಾಡಿಗೆ ಬರೋರನ್ನ ಕಂಡ್ರ, ಬಂದ್ರಪೋ ಚೆಂಡಾಲರು. ನಮ್ಮ ರುಂಡಾ ತೆಗೀತಾರ ಅಂತ ಇಲ್ಲಿನ ಗಿಡಗಳು ಕಣ್ಣೀರಿಡ್ತಾವರಿ'' ಎಂದು ನಂದಿವೇರಿ ಮಠದ ಶಿವಕುಮಾರ ಸ್ವಾಮಿಗಳು, ಕಪ್ಪತ್ತಗಿರಿಯ ಅರಣ್ಯನಾಶದ ಬಗ್ಗೆ ಹೇಳುತ್ತಿರಬೇಕಾದರೆ ಯಾರ ಕಳ್ಳ ತಾನೆ ಚುರುಕ್ ಎನ್ನುವುದಿಲ್ಲ.

ಗದಗ-ಮುಂಡರಗಿ ರಸ್ತೆಯಲ್ಲಿ ಡೆಂಬಳದಿಂದ ೮ ಕಿ.ಮೀ. ಚಲಿಸಿದ್ರ ನಂದಿವೇರಿ ಮಠ ಸಿಗ್ತದ. ಇಲ್ಲಿನ ಅರಣ್ಯ ಮೊದಮೊದಲು ಸ್ಥಳೀಯ ಜನರ ಸೌದೆಯ ದಾಹ ನೀಗಿಸಿದ್ದಲ್ಲದೆ, ಇತ್ತೀಚೆಗೆ ದೂರದ ತಾಲೂಕು-ಜಿಲ್ಲಾ ಕೇಂದ್ರಗಳಿಗೂ ಉರುವಲಿಗಾಗಿ ಕಟ್ಟಿಗೆ ರವಾನೆಯಾದದ್ದಿದೆ. ಆಡು ಕಾಯುವವರು ಗಿಡಗಳನ್ನು ಉರುಳಿಸುವುದು, ಕುರಿಗಾರರು ಹೊಸ ಚಿಗುರಿಗಾಗಿ ಬೆಟ್ಟಕ್ಕೆ ಬೆಂಕಿ ಇಡೋದು ನಡದೇ ಐತಿ. ದೇವಸ್ಥಾನಕ್ಕೆ ಬರೋ ಭಕ್ತಾದಿಗಳ ಏರಿಕೆ-ಇಳಿಕೆ ತಪ್ಪಲಕ್ಕಾಗಿ ಇಲ್ಲಿನ ಕಾಡು ಕಾಣದಾಗೈತಿ. ಹಲ್ಲುಜ್ಜಲು ಒಂದು ಬೇವಿನ ಕಡ್ಡಿ ಹುಡುಕಲಿಕ್ಕೆ ೨ ಕಿ.ಮೀ. ಅಡವಿ ಸುತ್ತಿ ವಾಪಸ್ ಬಂದದ್ದಿದೆ.

೨೦೦೩ರಲ್ಲಿ ಶಿವಕುಮಾರ ಸ್ವಾಮಿಗಳ ಪಟ್ಟಾಭಿಷೇಕಕ್ಕೆ ಬಂದಿದ್ದ ಬಿಜಾಪುರದ ಸಿದ್ದೇಶ್ವರ ಸ್ವಾಮೀಜಿ ಬೋಳು ಬೆಟ್ಟಮ್ಯಾಲೆ ನಿಂತ್ಕೊಂಡು ''ಇಲ್ಲೇ ಸ್ವರ್ಗ ಐತಿ. ಸರಿಯಾಗಿ ಜ್ವಾಪಾನಾ ಮಾಡು'' ಅಂತ ಹೇಳಿದ್ರಂತ.

''ಅರಗಿಣಿ ಹಿಡ್ಕೋಬೇಕಂದ್ರ, ಮೊದ್ಲ ಹಣ್ಣಿನ ಗಿಡ ಬೆಳೆಸಬೇಕು'' ಅನ್ನೋ ಶಿವಕುಮಾರ ಸ್ವಾಮಿಗಳು – ೩೦೦ ಹೆಕ್ಟೇರ್ ಪ್ರದೇಶದಾಗ ಲಕ್ಷ ಸಸಿಗಳನ್ನು ನೆಡಿಸ್ಯಾರ, ಆಗಾಗ ಭೇಟಿಕೊಟ್ಟ ಶಾಲಾಮಕ್ಕಳು ಅಷ್ಟೇ ಸಂಖ್ಯೆಯ ಬೀಜಗಳನ್ನು ಬಿತ್ಯಾರ. 'ಹರಿ'ನ ಕಟ್ಟಿ ಹಾಕಿದ್ರ 'ಲಕ್ಷ್ಮಿ' ತಾನ ಬರ್ತಾಳಂತ. ಅಲ್ಲಲ್ಲೆ ನೀರಿನ ಹರಿಗೆ ಅಡ್ಡಲಾಗಿ ೩೦೦ಕ್ಕೂ ಹೆಚ್ಚು ಜಾಲಗಳು. ಚೆಕ್‌ಡ್ಯಾಂಗಳನ್ನೇ ೩೦ ಲಕ್ಷ ರೂ. ವೆಚ್ಚದಲ್ಲಿ ಜನಪ್ರತಿನಿಧಿಗಳು – ಅರಣ್ಯ ಇಲಾಖೆ, ಪರಿಸರ ಪ್ರೇಮಿಗಳ ಸಹಕಾರದಿಂದ ನಿರ್ಮಿಸ್ಯಾರ. ಇಲ್ಲಿರುವ ಬಿರಗಾರೆದ ಹಳ್ಳಕ್ಕೆ ಅಡ್ಡಲಾಗಿ ಒಂದೆರಡು ಬೃಹತ್ ಮದಕಗಳು ನಿರ್ಮಾಣವಾಗಿವೆ.



ಪರಿಣಾಮ, ಬತ್ತಿದ ಬಾವಿಯಲ್ಲಿ ಮೊದಲ ಮಳಿಗೆ ನಾಲ್ಕಾಳು (೨೦ ಅಡಿ) ನೀರು ಬಂದಿತ್ತು, ಈ ಅರಣ್ಯ ಪ್ರದೇಶದ ಕೆಳಭಾಗದ ಬೋರವೆಲ್‌ಗಳಲ್ಲಿ ನೀರಿನ ಪ್ರಮಾಣ ಹೆಚ್ಚಾಗಿದೆ. ಬೋಳುಗುಡ್ಡದ ಹಾಳು ನೆಲದಲ್ಲೀಗ ಜಲಪಾತಗಳ ಸಂಭ್ರಮ ಕಾಣ್ತೇರಿ.

ಇದನ್ನೆಲ್ಲಾ ನೋಡಿ ದಣಿವು ಅನಿಸಿದ್ರ ಗಿಡದ ಕೆಳಗಿನಕಲ್ಲಾಸನಗಳು, ದಿನ್ನೆಯ ಮೇಲಿನ ಪರಗೋಲ (ವಿಶ್ರಾಂತಿಧಾಮ)ಗಳು, ಮಕ್ಕಳಾಟಕ್ಕೆ ಜಾರುಬಂಡಿ, ಗೋಡೆಗಳ ಮೇಲಿನ ಪರಿಸರಪ್ರಿಯ ವಾಕ್ಯಗಳು ನಿಮ್ಮ ಮನವ ತಣಿಸಬಲ್ಲವು.

ಸ್ವಾಮಿಗಳು ಕಾಡಿನ ಜೊತೆ ನಾಡಿನ ೧೪ ಬಡ ಮಕ್ಕಳ ಶಿಕ್ಷಣದ ಜವಾಬ್ದಾರಿ ಹೊತ್ತುಕೊಂಡಿದ್ದಾರ. ನಂದಿವೇರಿ ಮಠಕ್ಕೆ ಫೋನ್ ಮಾಡಿದ್ರ ''ನಮಸ್ಕಾರ್ರೀ. ಇದು ನಂದಿವೇರಿ ಮಠ. ಯಾರು ಬೇಕಾಗೈತ್ರಿ'' ಅಂತ ಹೇಳೋರ ಈ ಐದು ಆರನೇ ವರ್ಗದ ಮಕ್ಕಳು. ಕಾಡಿನ ರಕ್ಷಣೆಯ ವಿಷಯ ಬಂದ್ರ ಗಡಿಗಳನ್ನು ಕಾಯುವ ಯೋಧರಾಗ್ತಾರ. ''ಕೊಡ್ಲಿ ಹಿಡಿದು ಕಾಡಿಗೆ ನುಗ್ಗಿದ್ರ, ಉರ್ಲ (ನೇಣು) ಹಾಕ್ತೀವಿ'' ಅನ್ನೋ ವೀರಭದ್ರನಿಗೆ ಉಳಿದವರು ಸಾಥಿಯಾಗ್ತಾರ.

ಸೀಮೆತಂಗಡಿ, ಸಿಸಂ, ಗಜಗ; ಅಕೇಶಿಯಾ, ಬೇವು, ಹುಣಸೆ, ಮತ್ತೀ ಇತ್ಯಾದಿ ಬೀಜಗಳ ಬ್ಯಾಂಕ್ ಇಲ್ಲಿದೆ. ಮಳೆಗಾಲದಲ್ಲಿ ನಗರೀಕರಣಕ್ಕಾಗಿ ಕಾಡಿನ್ಯಾಗ ಇವುಗಳನ್ನ ನೆಟ್ಟ ಬರ್ತಾರೆ.

''ಶಿವಾಯ ನಮಃ'' ಎಂದು ಜಪ ಮಾಡಬೇಕಾದ ಸ್ವಾಮಿ, ''ಜಲಾಯ ನಮಃ'' ಎಂದು ಪರಿಸರ, ನೆಲ-ಜಲದ ಕುರಿತು ಹಗಲಿರುಳು ಚಿಂತಿಸುತ್ತ, ಮುಂದಿನ ಜನಾಂಗಕ್ಕೆ ''ನಾವು ಒಳ್ಳೆ ಪರಿಸರ ಬಿಟ್ಟು ಹೋಗೋದು ಅವಶ್ಯ ಐತಿ'' ಅನ್ನೋ ಮಾತು, ಜನಪ್ರತಿನಿಧಿಗಳು, ಅಧಿಕಾರಿಗಳು ಹಾಗೂ ಜನಸಾಮಾನ್ಯರಿಗೂ ಅರ್ಥವಾಗಬೇಕಾದ ಅವಶ್ಯಕತೆ ಇಂದು ಹೆಚ್ಚಾಗಿದೆ.

ಈ ಪರಿಸರಕ್ಕೆ ಬರುವ ಮುನ್ನ ''ದಕ್ಷಿಣದ ಶಿಮ್ಲಾ–ಉತ್ತರದ ಸಸ್ಯಕಾಶಿ ನಂದಿವೇರಿ ಮಠಕ್ಕೆ ದಾರಿ'' ಎಂಬ ನಾಮಫಲಕ ನಿಮ್ಮನ್ನು ಸ್ವಾಗತಿಸಿದ್ದರಲ್ಲಿ ಅತಿಶಯೋಕ್ತಿ ಇಲ್ಲ ಅಂತ ಅನ್ನಿಸಲೇಬೇಕು. ಕಪೋತಗಿರಿಗೀಗ ಗತವೈಭವದ ಸಂಭ್ರಮ.


**ರವಿ ಸೋ. ದೇವರಡ್ಡಿ**
ಶಿಕ್ಷಕರು, ಅಂಚೆ : ಹೊನ್ನ ಹಮ್ಮಿಗಿ, ತಾಲೂಕು ಮುಂಡರಗಿ
ಜಿಲ್ಲೆ: ಗದಗ - ೫೮೨ ೧೧೮

# ಕರ್ನಾಟಕದ ದೇವಾಲಯಗಳ ಭವ್ಯ ಪರಂಪರೆ



ಬಿ. ಎಂ. ಚಂದ್ರಶೇಖರಯ್ಯ

ಕರ್ನಾಟಕದ ದೇವಾಲಯಗಳ ಚರಿತ್ರೆಯು ಪುರಾಣೋಕ್ತ ಐತಿಹ್ಯಗಳಿಗೆ ತಳುಕು ಹಾಕಿಕೊಂಡಿದ್ದು, ಅವುಗಳು ಪ್ರಾಚೀನ ಮತ್ತು ಮಧ್ಯಯುಗೀನ ಭಾರತದ ಶಿಲ್ಪಕಲೆ ಮತ್ತು ವಾಸ್ತುವೈಭವಗಳಿಗೆ ಸಾಕ್ಷಿಯಾಗಿ ನಿಂತಿವೆ.

ಹಿಂದೂ ದೇವಾಲಯಗಳು ಅಥವಾ ಬೌದ್ಧ ಸ್ತೂಪಗಳು ಅಥವಾ ಜೈನ ಬಸದಿಗಳಲ್ಲಿ ಸ್ಥಾಪಿಸುವ ಮೂರ್ತಿಗಳನ್ನು ಸಾಮಾನ್ಯವಾಗಿ ಶಿಲೆಗಳಲ್ಲೇ ಕಡೆಯಲಾಗುತ್ತಿತ್ತು. ಕೆಲವೊಮ್ಮೆ ಅಂತಹ ಮೂರ್ತಿಗಳನ್ನು ಮರದಲ್ಲಿ ಕೆತ್ತನೆ ಮಾಡಿದ್ದರೂ, ಕಾಲಕಾಲಕ್ಕೆ ಅವುಗಳಿಗೆ ಬಣ್ಣ ಹಾಕಿ ನವೀಕರಿಸಬೇಕಾದುದು ಅಗತ್ಯವಾಗಿತ್ತು. ಅಂತಹವುಗಳಲ್ಲಿ ಪ್ರಮುಖವಾದವುಗಳೆಂದರೆ, ಗ್ರಾಮೀಣ ಪ್ರದೇಶದ ಕೆಳವರ್ಗದ ಜನರಿಂದ ಪೂಜಿಸಲ್ಪಡುವ ಗ್ರಾಮದೇವತೆಗಳಾಗಿವೆ. ಲೋಹವನ್ನು ಸಾಮಾನ್ಯವಾಗಿ ಉತ್ಸವ ಮೂರ್ತಿಗಳ ತಯಾರಿಕೆಗೆ ಬಳಸುತ್ತಾರೆ. ಲೋಹವನ್ನು ಎರಕ ಹೊಯ್ದು ಮೂರ್ತಿಗಳನ್ನು ತಯಾರಿಸುವ ಕಲೆಯು ಹತ್ತನೆಯ ಶತಮಾನಕ್ಕೂ ಮೊದಲೇ ಕರ್ನಾಟಕದಲ್ಲಿ ಪ್ರಚಲಿತವಿತ್ತು ಎನ್ನುವುದಕ್ಕೆ ಆಧಾರಗಳಿವೆ.

ಕ್ರಿ. ಪೂ. ೩ನೆಯ ಶತಮಾನದ ಪೂರ್ವಾರ್ಧದಲ್ಲಿಯೇ ಕರ್ನಾಟಕದಲ್ಲಿ ಮೂರ್ತಿಶಿಲ್ಪಗಳ ತಯಾರಿಕೆಯು ಪ್ರಚಲಿತವಿತ್ತೆಂಬುದನ್ನು, ಸನ್ನತಿಯ ಉತ್ಖನನದಲ್ಲಿ ದೊರೆತಿರುವ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಶಿಲ್ಪಕೃತಿಗಳು ದೃಢೀಕರಿಸುತ್ತವೆ. ಆದರೆ, ಅಲ್ಲಿ ದೊರೆತಿರುವ ಶಿಲ್ಪಕೃತಿಗಳು ಕೇವಲ ಬೆರಳೆಣಿಕೆಯಷ್ಟು ಮಾತ್ರ. ಕ್ರಿ. ಶ. ಒಂದು ಮತ್ತು ಎರಡನೆಯ ಶತಮಾನದಲ್ಲಿ ಕರ್ನಾಟಕವನ್ನಾಳಿದ ಶಾತವಾಹನರ ಕಾಲದಲ್ಲಿ ಬೌದ್ಧ ಧರ್ಮವು ಕ್ಷೀಣಿಸತೊಡಗಿತು. ಶಾತವಾಹನರ ನಂತರ ಕರ್ನಾಟಕದ ಅತ್ಯಂತ ಪ್ರಾಚೀನ ದೇವಾಲಯಗಳು ಕದಂಬರ ನಿರ್ಮಾಣಗಳಾಗಿವೆ. ಅವುಗಳಲ್ಲಿ ಪ್ರಮುಖವಾದುದೆಂದರೆ, ಶಿವಮೊಗ್ಗ ಜಿಲ್ಲೆಯ ತಾಳಗುಂದದ ಪ್ರಣವೇಶ್ವರ ದೇವಾಲಯ. ಅವರ ಇತರ ಪ್ರಮುಖ ದೇವಾಲಯಗಳು, ಬನವಾಸಿ ಮತ್ತು ಬೆಳಗಾವಿ ಜಿಲ್ಲೆಯ ಹಲಸಿಯಲ್ಲಿವೆ.

ಜೈನ ಧರ್ಮವು ತನ್ನ ಶ್ರೇಷ್ಠತೆಯನ್ನು ಸಾಧಿಸಲು ಬೌದ್ಧ ಧರ್ಮ ಮತ್ತು ಹಿಂದೂ ಧರ್ಮಗಳೊಡನೆ ಪ್ರಾಚೀನ ಕಾಲದಿಂದಲೂ ಸೆಣಸುತ್ತಾ ಬಂದಿದ್ದರೂ, ಅದು ಯಶಸ್ವಿಯಾದುದು ದಕ್ಷಿಣ ಕರ್ನಾಟಕವನ್ನು ತಲಕಾಡಿನಿಂದ ಆಳಿದ ಗಂಗರ ಕಾಲದಲ್ಲಿ. ಗಂಗರು, ಕ್ರಿ.ಶ. ೨ರಿಂದ ೧೧ನೆಯ ಶತಮಾನದವರೆಗೆ ಎಂದರೆ ಸುಮಾರು ೯೦೦ ವರ್ಷಗಳ ದೀರ್ಘ ಕಾಲ ಆಳ್ವಿಕೆಮಾಡಿದರು. ಅವರು ಮಹಾನ್ ಕಲಾ ಪ್ರೇಮಿಗಳಾಗಿದ್ದರು. ಗಂಗ ದೊರೆ ರಾಚಮಲ್ಲನ ಕಾಲದಲ್ಲಿ ಆತನ ಮಂತ್ರಿ ಚಾವುಂಡರಾಯನು, ಕ್ರಿ.ಶ. ೯೮೧ರಲ್ಲಿ ಜೈನ ಧಾರ್ಮಿಕ ಕೇಂದ್ರ ಶ್ರವಣಬೆಳಗೊಳದ ಇಂದ್ರಗಿರಿಯ ಮೇಲೆ ೫೭ ಅಡಿ ಎತ್ತರದ ಸುಂದರವಾದ ಬಾಹುಬಲಿಯ (ಗೊಮ್ಮಟ) ಏಕಶಿಲಾ ವಿಗ್ರಹವನ್ನು ಮಾಡಿಸಿದನು. ಹಲವು ಜೈನ ಬಸದಿಗಳನ್ನೂ ನಿರ್ಮಿಸಲಾಗಿತ್ತು.

ಬೌದ್ಧಮತವು ಕ್ರಿ.ಶ. ೧೨ನೆಯ ಶತಮಾನದವರೆಗೆ ಬಹಳ ಪ್ರಯಾಸದಿಂದ ಕೃಶವಾಗಿ ಬದುಕಿ ಉಳಿದಿತ್ತು. ಗಂಗರ ಕಾಲದಲ್ಲಿ ಸುಪ್ತಾವಸ್ಥೆಗೆ ತಲುಪಿದ್ದ ಹಿಂದೂ ಧರ್ಮವು, ಚಾಲುಕ್ಯರು ಮತ್ತು ರಾಷ್ಟ್ರಕೂಟರ ಆಳ್ವಿಕೆಯ ಅವಧಿಯಲ್ಲಿ ನಿಧಾನವಾಗಿ ತನ್ನ ಶಕ್ತಿಯನ್ನು ವೃದ್ಧಿಸಿಕೊಳ್ಳುತ್ತಾ ನಡೆದು ಮುಂದೆ ಹೊಯ್ಸಳರು ಮತ್ತು ವಿಜಯನಗರದ ಅರಸರ ಕಾಲದಲ್ಲಿ ತನ್ನ ಪರಮಾಧಿಕಾರವನ್ನು ಸ್ಥಾಪಿಸಿತು.

ಕ್ರಿ.ಶ. ೧೦೫೦ರಿಂದ ೧೩೦೦ರವರೆಗೆ ಆಳಿದ ಹೊಯ್ಸಳರು ಮೊದಲು ಜೈನ ಧರ್ಮೀಯರಾಗಿದ್ದರೂ, ಬಿಟ್ಟಿದೇವನು (ಕ್ರಿ.ಶ. ೧೧೧೧-೧೧೪೧) ವೈಷ್ಣವ ಧರ್ಮಕ್ಕೆ ಮತಾಂತರಗೊಂಡು ವಿಷ್ಣುವರ್ಧನನಾದ ಮೇಲೆ ಹಿಂದೂ ಧರ್ಮಕ್ಕೆ ಅಪಾರ ಪ್ರೋತ್ಸಾಹ ದೊರೆತು, ಅದು ದೇಶದೆಲ್ಲೆಡೆ ತನ್ನ ಪರಮಾಧಿಕಾರವನ್ನು ಸ್ಥಾಪಿಸಿತು.

ಕ್ರಿ.ಶ. ೫೩೫ರಿಂದ ೭೫೭ರವರೆಗೆ ಬಾದಾಮಿಯಿಂದ ಆಳಿದ ಚಾಲುಕ್ಯರು ದೇವಾಲಯ ವಾಸ್ತುಶಿಲ್ಪದ ವಿವಿಧ ಶೈಲಿಗಳ ಪ್ರಯೋಗವನ್ನು ಮಾಡಿ, ಅಂತಿಮವಾಗಿ ತಮ್ಮದೇ ಆದ ಚಾಲುಕ್ಯ ಶೈಲಿಯನ್ನು ರೂಪಿಸಿದರು. ಈ ಪ್ರಯೋಗಗಳನ್ನು ನಾವು ಈಗಲೂ ಐಹೊಳೆ, ಪಟ್ಟದಕಲ್ಲು ಮತ್ತು ಬಾದಾಮಿಗಳಲ್ಲಿ ಕಾಣಬಹುದು. ಅವುಗಳಲ್ಲಿ ಕಟ್ಟಡ ವಿನ್ಯಾಸಗಳು ಹಾಗೂ ಗುಹಾಂತರ್ದೇವಾಲಯಗಳೆರಡನ್ನೂ ಕಾಣಬಹುದಾಗಿದೆ. ಈ ಗುಹಾಂತರ್ದೇವಾಲಯಗಳು ಬೃಹದ್ಗಾತ್ರದವುಗಳಾಗಿದ್ದು ಅವುಗಳ ಕಂಬಗಳು ಮತ್ತು ಗೋಡೆಗಳನ್ನು ಅತ್ಯಂತ ಉತ್ಕೃಷ್ಟ ಹಾಗೂ ಸುಂದರವಾದ ಉಬ್ಬು ಶಿಲ್ಪಗಳಿಂದ ಅಲಂಕರಿಸಲಾಗಿದೆ. ದೇವಾಲಯ ನಿರ್ಮಾಣದ ವಿವಿಧ ಶೈಲಿಗಳ ಪ್ರಯೋಗಾಲಯವಾಗಿದ್ದ ಐಹೊಳೆಯಲ್ಲಿ ಬೌದ್ಧರ ಚೈತ್ಯದ ವಿನ್ಯಾಸವನ್ನು ಹಿಂದೂ ದೇವಾಲಯದ ನಿರ್ಮಾಣಕ್ಕೆ ಅನುಕೂಲವಾಗುವಂತೆ ಮಾರ್ಪಡಿಸಿಕೊಂಡು, ಗಜಪೃಷ್ಠಾಕಾರದ ದುರ್ಗಾ ದೇವಾಲಯವನ್ನು ನಿರ್ಮಿಸಲಾಗಿದೆ.

### ಕೈಲಾಸ ದೇವಾಲಯ



ನಂದಿಯ ದೇವಾಲಯ

ರಾಷ್ಟ್ರಕೂಟರ ವಾಸ್ತು ಹಾಗೂ ಶಿಲ್ಪಕಲೆಗಳು ಅತ್ಯಂತ ಶ್ರೇಷ್ಠ ಮಾದರಿಯವು. ಚಾಲುಕ್ಯರು ಮತ್ತು ರಾಷ್ಟ್ರಕೂಟರ ಕಾಲದಲ್ಲಿ ಅಜಂತಾ ಮತ್ತು ಎಲ್ಲೋರ ಪ್ರದೇಶಗಳು ಬಹುಶಃ ಕರ್ನಾಟಕ ಸಾಮ್ರಾಜ್ಯದ ಭಾಗವಾಗಿರಬೇಕು. ಹಾಗಾಗಿಯೇ ರಾಷ್ಟ್ರಕೂಟ ಚಕ್ರವರ್ತಿ ಒಂದನೆಯ ಕೃಷ್ಣನು ಕ್ರಿ.ಶ. ೭೬೦ರಲ್ಲಿ ಎಲ್ಲೋರದಲ್ಲಿ ಕೈಲಾಸನಾಥನ ಏಕಶಿಲಾ ದೇವಾಲಯವನ್ನು ನಿರ್ಮಾಣ ಮಾಡಿಸಿದನು. ಅದನ್ನು ವಿಶ್ವದ ವಿಸ್ಮಯಗಳಲ್ಲೊಂದು ಎಂದು ಪರಿಗಣಿಸಲಾಗಿದೆ. "ಕೈಲಾಸ ದೇವಾಲಯವು, ಭಾರತದಲ್ಲಿ ನಿರ್ಮಿಸಲಾಗಿರುವ ಅತ್ಯಂತ ಬೃಹತ್ ಗಾತ್ರದ ಏಕಶಿಲಾ ಕಲಾಕೃತಿಯಾಗಿದೆ. ಅದಕ್ಕೆ ಸರಿಸಾಟಿಯಾದುದು ಎಲ್ಲಿಯೂ ಕಾಣಸಿಗದು !" ಎಂದು ಮಹಾನ್ ಕಲಾ ವಿಮರ್ಶಕರಾದ ಪರ್ಸಿ ಬ್ರೌನ್ ಉದ್ಗರಿಸಿದ್ದಾರೆ. "ತಾಂತ್ರಿಕವಾಗಿ, ಕೈಲಾಸ ದೇವಾಲಯವು ಭಾರತದ ಗುಹಾಂತರ್ದೇವಾಲಯಗಳಲ್ಲೇ ಅದ್ವಿತೀಯವಾದುದು. ಏಕೆಂದರೆ, ಅಜಂತಾ ಅಥವಾ ಬಾದಾಮಿಯ ಗುಹಾಂತರ್ದೇವಾಲಯಗಳಂತೆ ಬೆಟ್ಟದ ಬುಡದಲ್ಲಿ ಸಮತಲವಾಗಿ ಉತ್ಖನನವನ್ನು ಮಾಡದೇ ಕೃಷ್ಣನ ಪರಿಣತ ಶಿಲ್ಪಿಗಳು ಬೆಟ್ಟವನ್ನು ಮೇಲಿಂದ ಕೆಳಮುಖವಾಗಿ ಸೀಳಿ, ೧೬೦ ಅಡಿ ಉದ್ದ ಮತ್ತು ೫೦ ಅಡಿ ಅಗಲ ಪ್ರಮಾಣದ ಭಾರೀ ಬಂಡೆಯನ್ನು ಬೇರ್ಪಡಿಸಿ, ಅದರಲ್ಲಿ ಎರಡು ಅಂತಸ್ತುಗಳ ದೇವಾಲಯವನ್ನು ನಿರ್ಮಿಸಿದ್ದಾರೆ" ಎಂದು ಇನ್ನೊಬ್ಬ ಕಲಾ ವಿಮರ್ಶಕ ಎಫ್. ಬಿ. ಹ್ಯಾವೆಲ್ ನುಡಿದಿದ್ದಾರೆ. ರಾಷ್ಟ್ರಕೂಟರ ದೇವಾಲಯಗಳನ್ನು ಮುಖ್ಯವಾಗಿ ಎಲ್ಲೋರ, ಎಲಿಫೆಂಟಾ, ಜೋಗೇಶ್ವರಿ, ಮಂಡಪೇಶ್ವರ ಮತ್ತು ಮಳಖೇಡಗಳಲ್ಲಿ ಕಾಣಬಹುದು. "ಎಲ್ಲೋರ ಎಲಿಫೆಂಟಾಗಳಲ್ಲಿನ ಸೊಗಸಾದ ಮೂರ್ತಿಶಿಲ್ಪಗಳನ್ನು ಪರಿಶೀಲಿಸಿದರೆ, ಭಾರತೀಯ ಕಲೆಯು ತನ್ನ ಅತ್ಯುಚ್ಚ ಅಭಿವ್ಯಕ್ತಿಯನ್ನೂ ಸಿದ್ಧಿಯನ್ನೂ ಉತ್ತರದ ಗುಪ್ತರ ಆಳ್ವಿಕೆಗಿಂತಲೂ ಹೆಚ್ಚಾಗಿ ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಸಾಧಿಸಿತೆಂಬುದು ಯಾರಿಗಾದರೂ ಮನವರಿಕೆಯಾಗುತ್ತದೆ" ಎಂದು ಇನ್ನೊಬ್ಬ ಕಲಾ ವಿಮರ್ಶಕರಾದ ಶ್ರೀ ಗೋಸ್ವಾಮಿ ಅಭಿಪ್ರಾಯಪಡುತ್ತಾರೆ. ರಾಯಚೂರು ಜಿಲ್ಲೆಯ ಸಿರಿವಾರದಲ್ಲಿರುವ ರಾಷ್ಟ್ರಕೂಟ ದೇವಾಲಯಗಳ ಸಂಕೀರ್ಣವನ್ನು ಬಿಟ್ಟರೆ ಬೇರೆ ಕಡೆ ಅವರ ನಿರ್ಮಾಣಗಳು ಅಪರೂಪವೇ ಎನ್ನಬಹುದು. ನಂದಿಗುಡಿಯಲ್ಲಿದ್ದ ಆ ಕಾಲದ ದೇವಾಲಯವು ಈಗ ಹಾಳಾಗಿದೆಯಾದರೂ, ಅದರ ಕಂಬಗಳು ದೊರಕಿದ್ದು, ಅವುಗಳ ಮೇಲಿನ ಶಿಲ್ಪಗಳು ಅತ್ಯಂತ ಶ್ರೇಷ್ಠ ಮಟ್ಟದವುಗಳಾಗಿವೆ.

### ದೇವಾಲಯ ಚಕ್ರವರ್ತಿ

ಕಲ್ಯಾಣ ಚಾಲುಕ್ಯ ಮನೆತನದ ಇಮ್ಮಡಿ ತೈಲಪನು ಕ್ರಿ.ಶ. ೯೭೩ರಲ್ಲಿ ರಾಷ್ಟ್ರಕೂಟರ ಸಿಂಹಾಸನವನ್ನು ಆಕ್ರಮಿಸಿದನು. ಚಾಲುಕ್ಯ ಆಳರಸರು, ಅವರ ದಂಡನಾಯಕರು ಮತ್ತು ಮಂತ್ರಿಗಳು ಅನೇಕ ಸುಂದರವಾದ ದೇವಾಲಯಗಳನ್ನು ನಿರ್ಮಿಸಿದರಲ್ಲದೆ, ಅವುಗಳ ನಿರ್ವಹಣೆಗೆಂದು ಅನೇಕ ದಾನ ದತ್ತಿಗಳನ್ನು ನೀಡಿದರು. ಅವರ ದೇವಾಲಯಗಳ ಶೈಲಿಯನ್ನು ಚಾಲುಕ್ಯ ಶೈಲಿಯೆಂದೇ ಕರೆಯಲಾಗುತ್ತದೆ. ಈ ಶೈಲಿಯ ಅತ್ಯುತ್ತಮ ದೇವಾಲಯಗಳನ್ನು ಕುರುವತ್ತಿ, ಇಟಗಿ, ಲಕ್ಕುಂಡಿ, ಗದಗ ಮತ್ತು ಡಂಬಳಗಳಲ್ಲಿ ಕಾಣಬಹುದು. ಕಲ್ಯಾಣ ಚಾಲುಕ್ಯ ಶಿಲ್ಪಿಗಳು ಬಾದಾಮಿಯ ಚಾಲುಕ್ಯ ಶಿಲ್ಪಿಗಳು ಬಳಸುತ್ತಿದ್ದ ಮರಳುಗಲ್ಲನ್ನು ಬಿಟ್ಟು, ಹಸಿರು ಅಥವಾ ನೀಲ ಛಾಯೆಯ ಕಪ್ಪುಕಲ್ಲನ್ನು ಬಳಸತೊಡಗಿದರು. ದೇವಾಲಯಗಳ ಹೊರಗೋಡೆಗಳನ್ನು ಹೆಚ್ಚು ಉಬ್ಬು ಚಿತ್ರಗಳಿಂದ ಅಲಂಕರಿಸುವ ಪರಿಪಾಠ ಬೆಳೆಯಿತು. ಕ್ರಿ.ಶ. ೧೧೧೨ರಲ್ಲಿ ಆರನೆಯ ವಿಕ್ರಮಾದಿತ್ಯನ ದಂಡನಾಯಕನಾದ ಮಹಾದೇವನು ಇಟಗಿಯಲ್ಲಿ 'ದೇವಾಲಯ ಚಕ್ರವರ್ತಿ' ಎಂದು ಕೀರ್ತಿವೆತ್ತ ಮಹಾದೇವ ಮಂದಿರವನ್ನು ನಿರ್ಮಿಸಿದನು. ಈ ವೇಳೆಗೆ ಅತ್ಯಂತ ಪರಿಪೂರ್ಣತೆಯನ್ನು ಪಡೆದ ಈ ಶೈಲಿಯಲ್ಲಿ ಡಂಬಳದಲ್ಲಿ ನಿರ್ಮಿಸಿದ ದೊಡ್ಡ ಬಸಪ್ಪನ ಗುಡಿಯು ನಕ್ಷತ್ರಾಕಾರದಲ್ಲಿದೆ. ಅದೇ ಮುಂದೆ ಹೊಯ್ಸಳ ಶೈಲಿಗೆ ಮಾದರಿಯಾಯಿತು ಎಂಬ ಅಭಿಪ್ರಾಯವಿದೆ.

ಹೊಯ್ಸಳರು ದಕ್ಷಿಣ ಕರ್ನಾಟಕದಲ್ಲಿ ಕಲ್ಯಾಣ ಚಾಲುಕ್ಯರ ಸಾಮಂತರಾಗಿ ಆಳ್ವಿಕೆಯನ್ನು ಪ್ರಾರಂಭಿಸಿ, ದೇವಾಲಯಗಳ ನಿರ್ಮಾಣಕ್ಕೆ ಚಾಲುಕ್ಯ ಶೈಲಿಯನ್ನು ಮಾದರಿಯನ್ನಾಗಿಟ್ಟುಕೊಂಡರು. ಅದರ ಪ್ರಮುಖ ಲಕ್ಷಣವೆಂದರೆ ಹೊರಗೋಡೆಯ ಮೇಲ್ಮೈಯಲ್ಲಿ ಅನೇಕ ಗೂಡಗಳನ್ನು ಮಾಡಿ, ಅದರಲ್ಲಿ ಶ್ರೀಮಂತ ಹಾಗೂ ವೈವಿಧ್ಯಮಯ ಆಲಂಕಾರಿಕ ಶಿಲ್ಪಕೃತಿಗಳಿಗೆ ಹೆಚ್ಚಿನ ಸ್ಥಳಾವಕಾಶ ಕಲ್ಪಿಸಿದ್ದು. ಈ ಸಾವಿರಾರು ಚಿತ್ರಗಳನ್ನು ಅತ್ಯಂತ ವಿಸ್ತಾರವಾದ ಹಾಗೂ ಅತ್ಯಂತ ಸೂಕ್ಷ್ಮ ವಿವರಗಳಿಂದ ಕಂಡರಿಸಲಾಗಿದೆ.

ನಂದಿಯಲ್ಲಿ ಬಾಣವಂಶದ ರಾಣಿ ರತ್ನಾವಳಿಯು ೮ನೆಯ ಶತಮಾನದಲ್ಲಿ ನಿರ್ಮಿಸಿರುವ ಜೋಡಿ ದೇವಾಲಯದಲ್ಲಿ ಒಂದನ್ನು ಭೋಗ ನಂದೀಶ್ವರನಿಗೂ ಇನ್ನೊಂದನ್ನು ಅರುಣಾಚಲೇಶ್ವರನಿಗೂ ಸಮರ್ಪಿಸಲಾಗಿದೆ. ಇದು ಕರ್ನಾಟಕದಲ್ಲಿರುವ ದ್ರಾವಿಡ ಶೈಲಿಯ ದೇವಾಲಯಗಳಲ್ಲೇ ಅತ್ಯಂತ ಸುಂದರವಾದುದಾಗಿದೆ. ಇದರ ವಾಸ್ತು ಕೂಡ ಅಪರೂಪದ್ದಾಗಿದೆ. ಈ ಶೈಲಿಯ ಇತರ ದೇವಾಲಯಗಳೆಂದರೆ ಕೋಲಾರದ ಕೋಲಾರಮ್ಮನ ದೇವಾಲಯ, ಬೇಗೂರಿನ ನಾಗೇಶ್ವರ, ಚನ್ನಪಟ್ಟಣದ ಬಳಿಯ ಮಳೂರಿನ ಅಪ್ರಮೇಯ ದೇವಸ್ಥಾನಗಳು.

### ರಾಯ ಗೋಪುರಗಳು

ದ್ರಾವಿಡ ಶೈಲಿಯ ದೇವಾಲಯಗಳ ಇನ್ನೊಂದು ವಿಶಿಷ್ಟ ಅಂಶವೆಂದರೆ, ಅವುಗಳ ಮುಖ್ಯದ್ವಾರ ಅಥವಾ ಮಹಾದ್ವಾರಗಳ ಮೇಲೆ ನಿರ್ಮಿಸಿರುವ ಭವ್ಯವಾದ ಪಿರಮಿಡಿನ ಆಕಾರದ ಗೋಪುರಗಳು. ಇವುಗಳನ್ನು ರಾಯಗೋಪುರಗಳೆಂದೇ ಕರೆಯಲಾಗುತ್ತಿದೆ. ಇಟ್ಟಿಗೆಯಿಂದ ಕಟ್ಟಲಾಗಿರುವ ಈ ಗೋಪುರಗಳನ್ನು ದೇವ ದೇವತೆಗಳ ಮೂರ್ತಿಗಳಿಂದ ಅಲಂಕರಿಸಲಾಗಿರುತ್ತದೆ. ಅವುಗಳು ಟೊಳ್ಳಾಗಿದ್ದು, ಒಳಗಡೆಯಿಂದ ಶಿಖರದ ಬಳಿ ಹೋಗಲು ಮೆಟ್ಟಲು ಸಾಲುಗಳನ್ನು ನಿರ್ಮಿಸಲಾಗಿರುತ್ತದೆ. ಸಾಮಾನ್ಯವಾಗಿ ೩ರಿಂದ ೧೧ ಅಂತಸ್ತುಗಳನ್ನು ಹೊಂದಿದ ಈ ಗೋಪುರಗಳು ಬೃಹತ್ ಗಾತ್ರದವುಗಳಾಗಿರುತ್ತವೆ. ವಿಜಯನಗರದ ರಾಯರುಗಳು ತಮ್ಮ ಸಾಮ್ರಾಜ್ಯದಲ್ಲಿ ನೂತನ ದೇವಾಲಯಗಳನ್ನು ನಿರ್ಮಿಸುವುದರ ಜೊತೆಗೆ, ಈಗಾಗಲೇ ಅಸ್ತಿತ್ವದಲ್ಲಿದ್ದ

---

*ಕ್ರಿ. ಪೂ. ೩ನೇ ಶತಮಾನದ ಪೂರ್ವಾರ್ಧದಲ್ಲಿಯೇ ಕರ್ನಾಟಕದಲ್ಲಿ ಮೂರ್ತಿಶಿಲ್ಪಗಳ ತಯಾರಿಕೆಯು ಪ್ರಚಲಿತವಿತ್ತೆಂಬುದನ್ನು, ಸನ್ನತಿಯ ಉತ್ಖನನದಲ್ಲಿ ದೊರೆತಿರುವ ಬೌದ್ಧ ಧರ್ಮಕ್ಕೆ ಸಂಬಂಧಿಸಿದ ಶಿಲ್ಪ ಕೃತಿಗಳು ದೃಢೀಕರಿಸುತ್ತವೆ. ಆದರೆ, ಅಲ್ಲಿ ದೊರೆತಿರುವ ಶಿಲ್ಪಕೃತಿಗಳು ಕೇವಲ ಬೆರಳೆಣಿಕೆಯಷ್ಟು ಮಾತ್ರ. ಕ್ರಿ. ಶ. ಒಂದು ಮತ್ತು ಎರಡನೆಯ ಶತಮಾನದಲ್ಲಿ ಕರ್ನಾಟಕವನ್ನಾಳಿದ ಶಾತವಾಹನರ ಕಾಲದಲ್ಲಿ ಬೌದ್ಧ ಧರ್ಮವು ಕ್ಷೀಣಿಸತೊಡಗಿತು. ಶಾತವಾಹನರ ನಂತರ ಕರ್ನಾಟಕದ ಅತ್ಯಂತ ಪ್ರಾಚೀನ ದೇವಾಲಯಗಳು ಕದಂಬರ ನಿರ್ಮಾಣಗಳಾಗಿವೆ. ಅವುಗಳಲ್ಲಿ ಪ್ರಮುಖವಾದುದೆಂದರೆ, ಶಿವಮೊಗ್ಗ ಜಿಲ್ಲೆಯ ತಾಳಗುಂದದ ಪ್ರಣವೇಶ್ವರ ದೇವಾಲಯ. ಅವರ ಇತರ ಪ್ರಮುಖ ದೇವಾಲಯಗಳು, ಬನವಾಸಿ ಮತ್ತು ಬೆಳಗಾವಿ ಜಿಲ್ಲೆಯ ಹಲಸಿಯಲ್ಲಿವೆ.*

ದೇವಾಲಯಗಳನ್ನು, ಅವುಗಳು ಯಾವುದೇ ಧರ್ಮಕ್ಕೆ ಸೇರಿರಲಿ, ದುರಸ್ತಿಗೊಳಿಸಿದರು ಇಲ್ಲವೇ ವಿಸ್ತರಿಸಿದರು. ಜೊತೆಗೆ ಅವುಗಳ ಮಹಾದ್ವಾರಗಳ ಮೇಲೆ ಕಡ್ಡಾಯವೆನ್ನುವಂತೆ, ರಾಯಗೋಪುರಗಳನ್ನು ನಿರ್ಮಿಸಿದರು.

**ಗುಹಾಂತರ್ದೇವಾಲಯಗಳು**

ಕರ್ನಾಟಕದಾದ್ಯಂತ ಅನೇಕ ಗುಹೆಗಳು ಮತ್ತು ಗುಹಾಂತರ್ದೇವಾಲಯಗಳನ್ನು ಕಾಣಬಹುದು. ಅವುಗಳಲ್ಲಿ ಕೆಲವು ಮಾನವ ನಿರ್ಮಿತವಾಗಿದ್ದರೆ, ಇನ್ನೂ ಅನೇಕ ಗುಹೆಗಳು ಪ್ರಕೃತಿ ನಿರ್ಮಿತವಾಗಿದ್ದು, ಅವುಗಳನ್ನು ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ದೇವಾಲಯಗಳನ್ನಾಗಿ ಮಾರ್ಪಡಿಸಲಾಗಿದೆ. ಚಿತ್ರದುರ್ಗದ ಕೋಟೆಯ ಬೆಟ್ಟದಲ್ಲಿರುವ ಹಿಡಿಂಬೇಶ್ವರನ ದೇವಾಲಯದ ಗರ್ಭಗುಡಿಯನ್ನು ಬೃಹತ್ ಬಂಡೆಯಲ್ಲಿ ಕೊರೆದು ನಿರ್ಮಿಸಲಾಗಿದೆ. ಅದರ ವಿಮಾನದಲ್ಲಿ, ಬೃಹತ್ ದೇಹಿ ರಾಕ್ಷಸ ಹಿಡಿಂಬನ ಮೂರ್ತಿಯನ್ನು ಕಡೆಯಲಾಗಿದೆ. ಅಲ್ಲಿಯೇ ಇರುವ ಅಂಕಳಿ ಮಠವು ಕೂಡ ಅದರಲ್ಲಿರುವ ಗುಹೆಗಳಿಂದಾಗಿ ಪ್ರಸಿದ್ಧವಾಗಿದೆ. ಚಕ್ರವ್ಯೂಹದಂತಿರುವ ಆ ಗುಹೆಯಲ್ಲಿ ವಿವಿಧ ಗಾತ್ರದ, ಆಕಾರದ ಗವಿಗಳು ವಿವಿಧ ಸ್ತರಗಳಲ್ಲಿರುವುದನ್ನು ಕಾಣಬಹುದು. ನಂದಿ ಬೆಟ್ಟದ ಬಳಿಯ ಗೋಪಿನಾಥ ಬೆಟ್ಟದಲ್ಲಿ ಬೃಹದ್ಗಾತ್ರದ ಚಾಚು ಬಂಡೆಯ ಕೆಳಗೆ ಇರುವ ಗವಿಯಲ್ಲಿ ಗೋಪಿನಾಥ ದೇವಾಲಯವನ್ನು ನಿರ್ಮಿಸಲಾಗಿದೆ. ಬೆಂಗಳೂರು ನಗರದಲ್ಲಿಯೇ ಎರಡು ಗುಹಾಲಯಗಳಿವೆ. ಅದರಲ್ಲೊಂದು ಬೆಂಗಳೂರಿನ ನಿರ್ಮಾಪಕ ಕೆಂಪೇಗೌಡನು ನಿರ್ಮಿಸಿದ ಗವಿ ಗಂಗಾಧರೇಶ್ವರ ದೇವಾಲಯ. ಅದು ಕೂಡ ಬೃಹದ್ಗಾತ್ರದ ಚಾಚು ಬಂಡೆಯ ಕೆಳಗೆ ಇರುವ ಗವಿ. ಇನ್ನೊಂದು ವಿಶೇಷವೆಂದರೆ, ಗರ್ಭಗುಡಿಯ ಪ್ರದಕ್ಷಿಣಾಪಥವು ಕೂಡ ನೈಸರ್ಗಿಕವಾದುದಾಗಿದೆ. ನಗರದ ಹುಳಿಮಾವು ಬಳಿ ಇನ್ನೊಂದು ಗುಹಾಲಯವಿದ್ದು ಅದನ್ನು ಕೂಡ ಭೀಮ ಗಾತ್ರದ ಚಾಚುಬಂಡೆಯ ಕೆಳಗೆ ಇರುವ ವಿಶಾಲವಾದ ಸ್ಥಳದಲ್ಲಿ ನಿರ್ಮಿಸಲಾಗಿದೆ. ಅಲ್ಲಿಯೂ ಕೂಡ ಗಂಗಾಧರೇಶ್ವರನನ್ನೇ ಪ್ರತಿಷ್ಠಾಪಿಸಲಾಗಿದೆ. ಇದು ಗವಿಗಂಗಾಧರೇಶ್ವರನ ಗುಹಾಲಯಕ್ಕಿಂತ ಸುಮಾರು ಮೂರು ಪಟ್ಟು ದೊಡ್ಡದಾಗಿದೆ. ಅಲ್ಲದೆ, ಕರ್ನಾಟಕದಾದ್ಯಂತ ಇರುವ ಬೆಟ್ಟಗಳಲ್ಲಿ, ಕೋಟೆ ಕೊತ್ತಳಗಳಲ್ಲಿ ಇಂತಹ ಅನೇಕ ಗುಹಾಲಯಗಳನ್ನು ಕಾಣಬಹುದಾಗಿದೆ.

ಹೊಯ್ಸಳ ಶೈಲಿಯು, ವಿಜಯನಗರದ ಪ್ರಾಬಲ್ಯದ ಕಾಲ ಹಾಗೂ ಅದರ ಮುಂದಿನ ವರ್ಷಗಳಲ್ಲಿ ದ್ರಾವಿಡ ಶೈಲಿಯ ಮೇಲೆ ಪ್ರಭಾವ ಬೀರಿದೆ. ಅದಕ್ಕೆ ಅತ್ಯಂತ ಗಮನಾರ್ಹ ಉದಾಹರಣೆಯೆಂದರೆ, ಶೃಂಗೇರಿಯಲ್ಲಿ ವಿಜಯನಗರದ ಒಂದನೆಯ ಬುಕ್ಕರಾಯನು ಕ್ರಿ.ಶ. ೧೩೫೬ರಲ್ಲಿ ಕಟ್ಟಿಸಿದ ವಿದ್ಯಾಶಂಕರ ದೇವಾಲಯ. ಇದರಲ್ಲಿ ದ್ರಾವಿಡ ಮತ್ತು ಹೊಯ್ಸಳ ಶೈಲಿಗಳ ಸುಸಂಬದ್ಧ ಮಿಶ್ರಣ ಇದೆ. ಮೇಲ್ನೋಟಕ್ಕೆ ಅದು ಮೂಲತಃ ಯಾವ ಶೈಲಿಗೆ ಸೇರಿದೆಯೆಂದು ಹೇಳುವುದೇ ದುಸ್ತರವಾಗುತ್ತದೆ. ಆದರೂ, ಅಲ್ಲಿ ದ್ರಾವಿಡ ಶೈಲಿಯ ಕೈ ಮೇಲಾಗಿದೆ. ಈ ಮಾದರಿಯಲ್ಲಿ ಬರುವ ಇತರ ದೇವಾಲಯಗಳೆಂದರೆ, ಇಕ್ಕೇರಿಯ ಅಘೋರೇಶ್ವರ




ದೇವಾಲಯ ಮತ್ತು ಕೃಷ್ಣರಾಜಸಾಗರದಲ್ಲಿ ಮುಳುಗಿ ಹೋಗಿದ್ದು ಇತ್ತೀಚೆಗೆ ಸಂರಕ್ಷಿಸಲ್ಪಟ್ಟ ಗೋಪಾಲಕೃಷ್ಣ ದೇವಾಲಯ.

ಬೇಲೂರು, ಹಳೇಬೀಡು ಮತ್ತು ಸೋಮನಾಥಪುರ ದೇವಾಲಯಗಳನ್ನು ಹೊಯ್ಸಳ ಶೈಲಿಯ ಅನುಪಮ ಕೃತಿಗಳೆಂದು ಪರಿಗಣಿಸಲಾಗಿದ್ದು, ಅವುಗಳ ಮೂರ್ತಿ ಶಿಲ್ಪಗಳಿಗೆ ಸರಿಸಾಟಿಯಿಲ್ಲವೆಂದೇ ಹೇಳಬಹುದು. ಅದರಲ್ಲೂ ಸೋಮನಾಥಪುರದ ಕೇಶವ ದೇವಾಲಯವು ಹೊಯ್ಸಳ ಶೈಲಿಯ ಅತ್ಯಂತ ಉತ್ಕೃಷ್ಟ ಮಾದರಿಯಾಗಿದ್ದು ಅದರ ಶಿಲ್ಪಕೃತಿಗಳು ಬೇಲೂರು ಮತ್ತು ಹಳೇಬೀಡಿನ ದೇವಾಲಯಗಳಿಗಿಂತ ಅತ್ಯಂತ ಪರಿಪೂರ್ಣವೆಂದು ಭಾವಿಸಲಾಗಿದೆ.

**ಸಂಗೀತ ಕಂಬಗಳು**

ವಿಜಯನಗರ ಶೈಲಿಯ ದೇವಾಲಯಗಳನ್ನು ನಾವು ದಕ್ಷಿಣ ಭಾರತದಾದ್ಯಂತ ಕಾಣಬಹುದಾದರೂ, ಅದರ ಅತ್ಯಂತ ಪರಿಪೂರ್ಣವಾದ ದೇವಾಲಯಗಳನ್ನು, ಇಂದು ಹಂಪೆಯೆಂದು ಕರೆಯಲಾಗುವ ವಿಜಯನಗರ ಸಾಮ್ರಾಜ್ಯದ ಪರಿತ್ಯಕ್ತ ರಾಜಧಾನಿಯಲ್ಲೇ ಕಾಣಬಹುದು. ಪಾಳುಗಳಿಂದ ಕೂಡಿದ ಹಂಪೆಯು, ಅತಿ ದೀನಾವಸ್ಥೆಯ ನಗರವೊಂದರ ಮುಖವನ್ನು ಪ್ರದರ್ಶಿಸುವಂತೆ ಕಾಣುತ್ತದೆ. ಈಗ ಅಲ್ಲಿ ಉಳಿದಿರುವುದೆಂದರೆ ಕೆಲವು ದೇವಸ್ಥಾನಗಳು ಮತ್ತು ಕೆಲವು ಲೌಕಿಕ ಕಟ್ಟಡಗಳು ಮಾತ್ರ. ಉಳಿದೆಲ್ಲವೂ ಹಾಳಾಗಿವೆ. ಇದೇ ನಗರವನ್ನು ಸಮಕಾಲೀನ ವಿದೇಶೀ ಪ್ರವಾಸಿಗರು ೧೬ನೇ ಶತಮಾನದ ಭಾರತದಲ್ಲಿ ಎಲ್ಲಿಯೂ ಕಾಣಲಾರದ 'ಅತ್ಯಂತ ಅಂದವಾದ ಹಾಗೂ ಜನಭರಿತ ನಗರ' ಎಂದು ವರ್ಣಿಸಿದ್ದಾರೆ.

ಹಂಪೆಯು ಪ್ರವಾಸಿಗರು ಹಾಗೂ ಇತಿಹಾಸ ತಜ್ಞರಿಬ್ಬರಿಗೂ ಸಮಾನವಾಗಿ ಪ್ರಾಮುಖ್ಯತೆಯನ್ನುಳ್ಳದ್ದಾಗಿದೆ. ಈ ಹಾಳಾದ ನಗರದಲ್ಲಿರುವ ಅತ್ಯಂತ ಸುಂದರವಾದ ದೇವಾಲಯಗಳೆಂದರೆ ಇಮ್ಮಡಿ ದೇವರಾಯನು (ಕ್ರಿ.ಶ. ೧೪೨೪-೧೪೪೬) ಕಟ್ಟಿಸಿದ ವಿಜಯ ವಿಠಲ ಮತ್ತು ಹಜಾರರಾಮ ದೇವಾಲಯಗಳು. ಇವೆರಡರಲ್ಲಿ ವಿಜಯವಿಠಲನ ಮಂದಿರವು ಅತ್ಯಂತ ಸುಂದರವಾದ, ಉತ್ಕೃಷ್ಟ ವಾಸ್ತುಶಿಲ್ಪದಿಂದೊಡಗೂಡಿರುವ ದೇವಾಲಯ. ಈ ಸಾಮ್ರಾಜ್ಯದ ಅತ್ಯಂತ ಪ್ರಸಿದ್ಧನಾದ ಸಾಮ್ರಾಟ ಕೃಷ್ಣದೇವರಾಯನು, ಈ ದೇವಾಲಯದ ಗರ್ಭಗುಡಿಯ ಸುತ್ತಲೂ ಪ್ರದಕ್ಷಿಣಾ ಪಥವನ್ನು ನಿರ್ಮಿಸಿದನು. ಅದರ ಜೊತೆಗೆ ವಾಸ್ತು ವಿಶೇಷಗಳಾದ ಅಂತರಾಳ ಮತ್ತು ದೇವಾಲಯದ ಹಿಂದಿರುವ ೧೦೦ ಕಂಬಗಳ ಕಲ್ಯಾಣ ಮಂಟಪವನ್ನು ನಿರ್ಮಿಸಿದನು. ಅನಂತರ, ವಿಜಯನಗರವನ್ನಾಳಿದ ಸದಾಶಿವರಾಯನು (ಕ್ರಿ.ಶ. ೧೫೪೨-೧೫೭೬), ರಂಗ ಮಂಟಪಕ್ಕೆ ಹತ್ತಿಕೊಂಡಿರುವ ಮುಖಮಂಟಪವನ್ನು ಕ್ರಿ.ಶ. ೧೫೫೪ರಲ್ಲಿ ನಿರ್ಮಿಸಿದನು. ಇಂದಿಗೂ ಕೂಡ, ಈ ಮಂಟಪವು ವಿಜಯನಗರ ಶೈಲಿಯ ಅತ್ಯುತ್ತಮ ಹಾಗೂ ಶ್ರೀಮಂತ ಕೃತಿಯಾಗಿ ಉಳಿದಿದೆ. ಅಲ್ಲಿ ಘನ ಶಿಲೆಯ ದಿಮ್ಮಿಗಳಿಂದ ಕಡೆದಿರುವ ೩.೬ ಮೀಟರ್ ಎತ್ತರದ ೫೬ ಸಂಯುಕ್ತ ಕಂಬಗಳಿವೆ. ಈ ಕಂಬಗಳಲ್ಲಿರುವ ಸಣ್ಣ ಸಣ್ಣ ಕಂಬಗಳನ್ನು ಮರದ ತುಂಡಿನಿಂದ ಬಾರಿಸಿದಾಗ ಸಂಗೀತದ ವಿವಿಧ ಸ್ವರಗಳನ್ನು ಹೊರಡಿಸುತ್ತವೆ!

ಇಲ್ಲಿಯ ಇನ್ನೊಂದು ವಿಶೇಷವೆಂದರೆ ಇಲ್ಲಿಯ ಕಲ್ಯಾಣ ಮಂಟಪ. ಉತ್ಕೃಷ್ಟವಾದ ವಿವಿಧ ಕೆತ್ತನೆಗಳಿಂದ ಕೂಡಿದ ೪೬ ಕಂಬಗಳಿಂದ ಶೋಭಿಸುತ್ತಿರುವ ಈ ಕಲ್ಯಾಣ ಮಂಟಪವು ವಿಜಯನಗರ ಶಿಲ್ಪಿಗಳ ಕೈಚಳಕಕ್ಕೊಂದು ಮಾದರಿಯಾಗಿದೆ. ಇದೇ ಆವರಣದೊಳಗೆ ಇರುವ ಇನ್ನೊಂದು ವಿಶಿಷ್ಟ ಕೃತಿಯೆಂದರೆ ಕಲ್ಲಿನ ತೇರು. ದೇವಸ್ಥಾನದ ಮರದ ರಥವನ್ನೇ ಸಂಪೂರ್ಣವಾಗಿ ಹೋಲುವ ಇದನ್ನು ಏಕ ಶಿಲೆಯಲ್ಲಿ ನಿರ್ಮಿಸಿದ್ದು, ಈ ರಥವು ನಾಲ್ಕು ಚಕ್ರಗಳ ಹಾಗೂ ಶಿಖರಗಳಿಂದೊಡಗೂಡಿದೆ, ಸರ್ವಾಂಗ ಸುಂದರವಾಗಿದೆ. ಅಚ್ಚರಿಯ ವಿಷಯವೆಂದರೆ, ಇದರ ನಾಲ್ಕೂ ಚಕ್ರಗಳು ಸರಾಗವಾಗಿ ತಿರುಗುತ್ತವೆ.

ಕರ್ನಾಟಕದ ದೇವಾಲಯಗಳು ಇತಿಹಾಸಕ್ಕೆ ಹೇಗೋ ಹಾಗೆಯೇ ಶಿಲ್ಪಕಲೆ ಮತ್ತು ವಾಸ್ತು ಸೌಂದರ್ಯಗಳಿಗೂ ಪ್ರಸಿದ್ಧವಾಗಿವೆ.



ಬಿ. ಎಂ. ಚಂದ್ರಶೇಖರಯ್ಯ
ಹೇಮಕೂಟ, ನಂ. ೨೮೦, ೩ನೇ 'ಎ' ಮುಖ್ಯರಸ್ತೆ, ೮ನೇ ಬ್ಲಾಕ್
ಕೋರಮಂಗಲ, ಬೆಂಗಳೂರು - ೫೬೦ ೦೯೫

# ಆಧುನಿಕ ಸಮಾಜ ಪ್ರಗತಿಶೀಲ ನೆಲೆಯಲ್ಲಿ

## ಒಂದು ವ್ಯಾಖ್ಯಾನ

*ಹಸಿದ ಅನುಭವವೇ ಇಲ್ಲದವರು ಒಂದು ಕಡೆ,*
*ಉಂಡ ಸುಖ ಕಾಣದವರು ಇನ್ನೊಂದು ಕಡೆ.*
*ಒಂದು ಸೂರಿಗಾಗಿ ಹೋರಾಡುವವರ ಮುಂದೆ*
*ನೂರು ಸೂರು ಕಂಡರೂ ನಿದ್ದೆ ಬಾರದವರು.*
*ಸಾವಿನ ಅಂಚಿನಲ್ಲಿರುವವರು*
*ಸಾವ ಉಣಿಸುತಿಹರು ಹುಟ್ಟಲಿರುವ ಶಿಶುಗಳಿಗೆ.*
*ಮುರುಘಾಮಠದ ಗುರುವೇ*
*ಇಂಥ ವಿಲೋಮಗಳ ನೀ ಹೇಗೆ ನಿಭಾಯಿಸುವೆ ?*

**ಈ** ಆಧುನಿಕ ವಚನ ಆಧುನಿಕ ಸಮಾಜದ ಎರಡು ಅತಿರೇಕಗಳನ್ನು ಮುಂದಿಡುತ್ತದೆ. ಜೀವನದಲ್ಲಿ ಒಂದು ಬಾರಿಯೂ ಹೊಟ್ಟೆ ತುಂಬ ಉಂಡವರನ್ನು ಕಾಣದ ಇಂದಿನ ಸಾಮಾಜಿಕ ಪರಿಸ್ಥಿತಿ ಒಂದು ಕಡೆಯಾದರೆ, ಇನ್ನೊಂದೆಡೆ, ಜೀವನದಲ್ಲಿ ಹಸಿವು ಎಂದರೇನು ? ಎಂದು ಕೇಳುವ ಸಾಮಾಜಿಕ ಸ್ವೇಚ್ಛಾ ವಾತಾವರಣವೂ ಇರುವುದು ದುರದೃಷ್ಟಕರ. ಅದೇ ರೀತಿ ವಾಸಿಸಲು ಒಂದು ಮನೆಕಟ್ಟಲು ಮಾಡುವ ಸಾಲ ಜೀವಮಾನದ ಯೋಜನೆಯಾಗಿ ಮಾಡಿಕೊಳ್ಳಬೇಕಾದ ವಾತಾವರಣ ಒಂದು ಕಡೆಯಾದರೆ, ಹತ್ತಾರು ಮನೆಗಳನ್ನು ಕಟ್ಟಿ ಆಸ್ತಿ ಮಾಡಿಕೊಂಡು ಜೀವನೋದ್ವೇಗದಿಂದ ಕಣ್ತುಂಬಾ ನಿದ್ದೆ ಮಾಡದವರು ಇನ್ನೊಂದು ಕಡೆ.

ಆಧುನಿಕ ಸಮಾಜವು ಇಂಥ ಅತಿರೇಕಗಳಿಂದಲೇ ತುಂಬಿಹೋಗಿದೆ. 'ಆಧುನಿಕತೆ' ಎಂಬುದು ಹೊರನೋಟದ ಸೌಂದರ್ಯಕ್ಕೆ ಹೆಚ್ಚು ಮನ್ನಣೆ ನೀಡುವಂಥದ್ದು. ಬಹುಶಃ ಪಾರಂಪರಿಕ ನೆಲೆಗಳಿಗೆ ಪರ್ಯಾಯವಾಗಿ ಇದು ಚಿಂತಿಸುತ್ತಿರುತ್ತದೆ. ಬದುಕಿನ ಲೌಕಿಕತೆಯೇ ಇಲ್ಲಿ ಮೂಲ ನೆಲೆಯೂ ಆಗಿರಬಹುದಾದ್ದರಿಂದ ಇದು ಇಂಥವುಗಳ ಕೇಂದ್ರದಲ್ಲಿಯೇ ಸುತ್ತುತ್ತಿರುತ್ತದೆ. ಮೌಲ್ಯಗಳನ್ನು ಬಹು ತೀವ್ರಗತಿಯಲ್ಲಿ ಸ್ಥಿತ್ಯಂತರಗೊಳಿಸುವ ಈ ತಂತ್ರವು ಬಹುಬೇಗನೇ ತನ್ನ ಆಕರ್ಷಣೆಗೆ ಒಳಮಾಡಿಕೊಳ್ಳುತ್ತದೆ. ಬದುಕಿನ ಬಗ್ಗೆ ಇರುವ ಗಾಢವಾದ ಭಾವನಾತ್ಮಕ ಸಂಬಂಧವನ್ನು ಇದು ನಿರಾಕರಿಸುವಂತೆ ಮಾಡುತ್ತದೆ. ಇವೆಲ್ಲಾ 'ತೀರಾ ಸಹಜ' – ಎಂಬಂತೆ ಪರಿಭಾವಿಸಲಾಗುತ್ತಿರುವುದೂ ಸಹ ಒಂದು ವಿಪರ್ಯಾಸವೇ! ಇವು ಒಮ್ಮೊಮ್ಮೆ ವಿರೋಧಿಸುವಂತೆಯೂ ಮಾಡುತ್ತವೆ. 'ಆಧುನಿಕತೆ' ಎಂಬುದು ಇಡೀ ಸಾಮಾಜಿಕ ವ್ಯವಸ್ಥೆಯನ್ನು ಬಹುಕಾಲದವರೆಗೂ ಒಂದೇ ರೀತಿಯಲ್ಲಿ ಇರದಂತೆ ಮಾಡುವುದು ತನ್ನ ಪ್ರಮುಖ ಲಕ್ಷಣವನ್ನಾಗಿರಿಸಿಕೊಂಡಿರುವುದರಿಂದ ಇಂಥ ಎಲ್ಲ ವಿದ್ಯಮಾನಗಳು ತೆರೆಯಮೇಲೆ ಚಲಿಸುವ ಬಣ್ಣದ ಚಿತ್ರಗಳಂತೆ ನಿರಂತರವಾಗಿ ಮತ್ತು ವೇಗವಾಗಿ ಬದಲಾಗುತ್ತಿರುತ್ತವೆ.

ಕಳೆದ ಇಪ್ಪತ್ತನೆಯ ಶತಮಾನದ ಉತ್ತರಾರ್ಧದ (ವಿಶೇಷವಾಗಿ ಕೊನೆಯ ಭಾಗದಲ್ಲಿ) ಭಾರತೀಯ ಸಮಾಜದಲ್ಲಿ ಜರುಗಿದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ವಿದ್ಯಮಾನಗಳು ಜಾಗತಿಕ ಪರಿಧಿಯ ಒಳಗೆ ಆದುದು, ಬಹುಶಃ ನಮ್ಮ ಪಾರಂಪರಿಕ ಪ್ರಜ್ಞೆಗೆ ಮತ್ತು ನಮ್ಮದೇ ಆದ ಭಾರತೀಯ ಸಾಮಾಜಿಕ ವ್ಯಾಕರಣಕ್ಕೆ ಪರಿಣಾಮಕಾರಿಯಾದ ಪರಿವರ್ತನೆಯನ್ನು ನೀಡಿದುದೂ ಇದಕ್ಕೆ ಪ್ರಮುಖ ಕಾರಣವಾಗಿದೆ. ಇಪ್ಪತ್ತನೆಯ ಶತಮಾನ ನಮ್ಮ ಪರಂಪರೆ ಮತ್ತು ಆಧುನಿಕ ಚಿಂತನೆಯನ್ನು ಮುಖಾಮುಖಿಯಾಗಿಸಿ ನಿರಂತರವಾಗಿ ಬದಲಾಗುವ ಮೌಲ್ಯ, ಆಶೋತ್ತರಗಳಲ್ಲಿ ಯಾವುದನ್ನೂ ನಂಬದ ಮತ್ತು ಯಾವುದನ್ನೂ ಒಪ್ಪದ ಅಥವಾ ಯಾವುದನ್ನೂ ನಿರಾಕರಿಸದ ಹಾಗೂ ಯಾವುದನ್ನೂ ಬಿಟ್ಟು ಬದುಕಲಾಗದ ಸ್ಥಿತಿಯನ್ನು ತಂದುಕೊಟ್ಟಿವೆ. ಈ ಬೆಳವಣಿಗೆ (?) ಬದುಕನ್ನು ಒಂದು ಅನಿವಾರ್ಯ ಮಾತ್ರವಾಗಿ ಉಳಿಸಿರುವುದು ದುರದೃಷ್ಟಕಾರಿ ಅಂಶ.

ಒಂದೇ ಕಾಲಾವಧಿಯ ಅಥವಾ ಕಾಲಘಟ್ಟದ ವಿದ್ಯಮಾನಗಳು ನಮ್ಮ ಬದುಕಿನ ಮೇಲೆ ನೇರ ಪರಿಣಾಮವನ್ನುಂಟುಮಾಡಿ ಬದುಕನ್ನು ಅಳೆಯುವ, ಮಾನದಂಡಗಳನ್ನು ಚಿಂತಿಸುವ ಮೌಲ್ಯಗಳನ್ನು ಬದಲಾಯಿಸುತ್ತಾ ಹೋಗಿವೆ. ಈ ಪ್ರಕ್ರಿಯೆ ಹೆಚ್ಚು ಪ್ರಮಾಣದಲ್ಲಿ ನಡೆದಿರುವುದು ಕಳೆದ ಶತಮಾನದ ಉತ್ತರಾರ್ಧದಲ್ಲಿ. ಇಂಥ ಮಾನದಂಡಗಳೊಂದಿಗೆ ನಮ್ಮ ಬದುಕನ್ನು ಹೊಂದಿಸಿಕೊಂಡು ಜೀವಿಸಬೇಕಾಗಿರುವುದು ಇಂದಿನ ಸಾಮಾಜಿಕ ಅವಶ್ಯಕತೆಯಾಗಿದೆ. ಆಧುನಿಕ ಮಾನದಂಡಗಳೊಂದಿಗೆ ಒಪ್ಪಂದ ಮಾಡಿಕೊಳ್ಳಲೇಬೇಕಾಗಿರುವುದರಿಂದ ಬದುಕು ಸಹ ಅನಿವಾರ್ಯವಾಗುವುದು ಸಹಜವಾಗುತ್ತದೆ. ಆರ್ಥಿಕಸ್ಥಿತಿಯ ಹಿನ್ನೆಲೆಯಲ್ಲಿ ಇದು ಸ್ಪಷ್ಟವಾಗಿದೆ. ತೀರಾ ಕೆಳವರ್ಗವು ಇಂಥ ಸ್ಥಿತಿಯನ್ನು ತನಗೆ ಸಂಬಂಧವಿಲ್ಲವೆಂಬಂತೆಯೂ ಮತ್ತು ತೀರಾ ಮೇಲ್ವರ್ಗವು ಇಂಥ ಸ್ಥಿತಿಯನ್ನು ಯಾವುದೇ ವಿಗತಿಯನ್ನು ಅನುಭವಿಸದಂತೆಯೂ ಎದುರಿಸಬಲ್ಲವು. ಆದರೆ, ಬಹುಸಂಖ್ಯಾತ ಮಧ್ಯಮವರ್ಗವು ತನ್ನದೇ ಆದ ಸಾಪೇಕ್ಷಸ್ಥಿತಿಯಲ್ಲಿ ಬದುಕಿನ ಸೀಮಿತ ಪರಿಧಿಯಲ್ಲಿ ವಿವಿಧ ವ್ಯಾಖ್ಯಾನ, ವ್ಯಾಕರಣಗಳನ್ನು ರೂಪಿಸಿಕೊಳ್ಳುತ್ತಾ ಹೋಗುತ್ತಲಿದೆ. ಇಂಥ ಅನಿವಾರ್ಯ ಅವಶ್ಯಕತೆಗಳು ಮೌಲ್ಯಾಧಾರಿತವಾದಂಥವುಗಳಲ್ಲ; ಜೀವನಾನುಭವದ ಸ್ಫೂರ್ತಿಯಿಂದ ಕೂಡಿರುವಂಥವುಗಳೂ ಆಗಿರಲು ಸಾಧ್ಯವೇ ಇಲ್ಲ. ಬಹುಶಃ ಬಾಹ್ಯಾಡಂಬರದಿಂದ ಕೂಡಿರುವಂಥವಾಗಿವೆ.

ಆದರೆ ಇದರಿಂದ ಆಗುತ್ತಿರುವ ಆಂಶಿಕವಾದ ಇತ್ಯಾತ್ಮಕವಾದ ಒಂದು ಪರಿಣಾಮವೆಂದರೆ ಇಂದಿನ ಪೀಳಿಗೆ ಇಂದಿನ ಸಮಾಜದ ಯಾವುದೇ ರೀತಿಯ ಪರಿಸ್ಥಿತಿಗೆ ಹೊಂದಿಕೊಂಡಿರುವುದು. ಪಾರಂಪರಿಕವಾದ ಶ್ರದ್ಧೆ, ಗೌರವ, ಪ್ರೀತಿ, ಜೀವನಾನುಭವಗಳು ಇಂದಿನ ಸಮಾಜದಲ್ಲಿ ಒಂದು ಬಹುದೊಡ್ಡ ಕೊರತೆಯಾಗಿ ಕಾಣುತ್ತಿರಬಹುದು. ಆದರೆ ಅದೇ ಸಂದರ್ಭದಲ್ಲಿ ಅದರ ಪರ್ಯಾಯ ಮಗ್ಗುಲಲ್ಲಿ ಪಾರಂಪರಿಕವಾಗಿ ಬಂದ ನಮ್ಮ ಕೆಲವು ಅನಿಷ್ಟಗಳನ್ನೂ ಅವೈಜ್ಞಾನಿಕ ವಿಭಜನೆಗಳನ್ನೂ ಅವೈಚಾರಿಕ ಚಿಂತನೆಗಳನ್ನೂ ಮತ್ತೆ ಕೆಲವು ಭೇದ ನೀತಿಗಳನ್ನು ನಿಧಾನವಾಗಿ ಮರೆ ಮಾಡುತ್ತಿರುವುದು. ಒಂದೇ ಬಡಾವಣೆಯಲ್ಲಿ ಎಲ್ಲಾ ಜಾತಿಯವರು ವಾಸಿಸುತ್ತಿರುವುದು, ಒಂದೇ ಸಂಸ್ಥೆಯಲ್ಲಿ ಎಲ್ಲಾ ಜಾತಿಯವರು ಒಂದೇ ಕಡೆ ಇದ್ದು ಬದುಕು ಸಾಗಿಸುತ್ತಿರುವುದು, ಒಂದೇ ಹೋಟೆಲ್ಲಿನಲ್ಲಿ ಎಲ್ಲಾ ಜಾತಿಯವರು ಉಪಾಹಾರ ಇತ್ಯಾದಿ ಸ್ವೀಕರಿಸುವುದು, ದೇವಸ್ಥಾನದಲ್ಲಿ ಎಲ್ಲಾ ಜಾತಿಯವರಿಗೆ ಪ್ರವೇಶಿಸುವ ದರ್ಶನಾವಕಾಶ ಒದಗಿಸಲ್ಪಟ್ಟಿರುವುದು, ಈ ಎಲ್ಲಾ ವಿದ್ಯಮಾನಗಳು ಆಧುನಿಕತೆ ಪಾರಂಪರಿಕ ಮಾನದಂಡಗಳನ್ನು ನಿರಾಕರಿಸುತ್ತಿರುವುದನ್ನು ಎತ್ತಿ ಹೇಳುತ್ತಿವೆ. ಆದರೆ ಜಾತೀಯತೆ ಮತ್ತೊಂದು ಸ್ವರೂಪದಲ್ಲಿ ಮೂಡಿಕೊಳ್ಳುತ್ತಿರುವುದು ಬೇರೆ ವಿಚಾರ.

ಒಂದು ಮನೆಯಲ್ಲಿ ತಂದೆ, ಮಗ, ಮೊಮ್ಮಗ ವಾಸಿಸುವ ಇಂದಿನ ಸಂದರ್ಭ ಬಹುಶಃ ವಿರಳ. ಒಂದು ವೇಳೆ ಇದು ಸಾಧ್ಯವಾಗಿದ್ದಿದ್ದರೆ, ಇದು ಒಂದು ಬಗೆಯಲ್ಲಿ ಭೂತ, ವರ್ತಮಾನ, ಭವಿಷ್ಯತ್ತುಗಳ ಮಿಲನವಾಗಿಯೇ ಇಂದು ನಮಗೆ ಕಾಣುತ್ತಿದೆ. ಯಾವುದನ್ನೂ ಪ್ರಶ್ನಿಸದೆ ಬದುಕಿರುವ ತಂದೆ, ಅತ್ತ ಪೂರ್ವಕಾಲ ಮತ್ತು ಇತ್ತ ತನ್ನ ಉತ್ತರಕಾಲ ಇವುಗಳೊಂದಿಗೆ ಕೂಡದೆಯೂ, ಭಿನ್ನವಾಗದೆಯೂ ಇರುವಂತಹ ಸ್ಥಿತಿಯಲ್ಲಿ ಮಗ, ತನ್ನ ಪೂರ್ವದ ಯಾವ ನಂಬಿಕೆಯನ್ನೂ ಒಪ್ಪದೆ ನೇರವಾಗಿ ಆಧುನಿಕತೆಯೊಂದಿಗೆ ಸ್ಪಂದಿಸುತ್ತ ಸೀಮಿತವಾದ ನಿಯಂತ್ರಣದಲ್ಲಿರುವ ಮೊಮ್ಮಗ – ಇವರು ಒಂದೇ ಸ್ಥಳದಲ್ಲಿ ವಾಸಿಸುತ್ತಿರುವುದು ಇಂದು ಕೌಟುಂಬಿಕ ಸಮಸ್ಯೆಯಾಗಿ ಪರಿಣಮಿಸುತ್ತಿದೆ. ಉಣ್ಣಲು, ಉಡಲು, ಬದುಕಲು ಯಾವುದೇ ರೀತಿಯ ತೊಂದರೆಯಿರದ ಕುಟುಂಬಗಳಲ್ಲಿ ಈ ಮೌಲ್ಯಗಳ ಸ್ಥಿತ್ಯಂತರ ಒಂದು ಸಮಸ್ಯೆಯಾಗಿ ಗೋಚರಿಸುತ್ತಿರುವುದು, ಆಧುನಿಕ ಯುಗದಲ್ಲಿ ಮಾತ್ರ ಆಗಿರುವುದು ಒಂದು ವಿಶೇಷ. ತಂದೆ, ಮಗ, ಮೊಮ್ಮಗ ಒಂದೇ ಮನೆಯಲ್ಲಿ ವಾಸಮಾಡುವುದು ಸುಮಾರು ೫೦-೭೫ ವರ್ಷಗಳ ಹಿಂದೆ ಒಂದು ಸಮಸ್ಯೆಯಾಗಿ ಪರಿಣಮಿಸಿದ್ದಿಲ್ಲ. ಏಕೆಂದರೆ, ಅವರನ್ನು ನಿಯಂತ್ರಿಸುವ ಮೌಲ್ಯಗಳು ಒಂದೇ ಮೂಲದಿಂದ ಉದಯಿಸಿದವುಗಳಾಗಿದ್ದವು. ಆದರೆ ಇಂದು ಹಾಗಿಲ್ಲ. ಯಾವುದು ತಂದೆಗೆ ತುಂಬಾ ಶ್ರೇಷ್ಠವೋ ಅದು ಮೊಮ್ಮಗನಿಗೆ ಮುಖ್ಯವೆನಿಸುವುದಿಲ್ಲ. ಯಾವುದು

ಡಾ|| ಮೃತ್ಯುಂಜಯ ರುಮಾಲೆ

ತಂದೆಯ ನಿರ್ಲಕ್ಷ್ಯಕ್ಕೆ ಒಳಗುಮಾಡುವಂಥದ್ದೋ ಅದು ಮೊಮ್ಮಗನಿಗೆ ತುಂಬಾ ಮುಖ್ಯವೆನಿಸುತ್ತದೆ. ಇವರ ಮಧ್ಯೆ ಅತ್ತ ತಂದೆಯನ್ನು ತನ್ನ ಮಗನನ್ನು ಸಂಬಂಧದಲ್ಲಿರಿಸಿ ಕೊಂಡು ಬದುಕು ಸಾಗಿಸುವ ಇತ್ತಂಡ ಸ್ಥಿತಿ ಮಧ್ಯದವನದು.

ಸಹಜವಾಗಿ ಮತ್ತು ಜೀವನ ಕ್ರಮದಿಂದ ಸಂಪಾದಿಸುವಂಥದ್ದು ಇಂದು ಯಾವುದೂ ಇಲ್ಲ. ಅಧಿಕಾರ, ವಿದ್ವತ್ತು, ಸಂಪತ್ತು, ಹಣ, ಸುಖ-ಭೋಗಗಳು – ಹೀಗೆ ಇವಾವೂ ಸಹಜವಾಗಿ ಬರುವವರೆಗೂ ಅಥವಾ ಪರಿಶ್ರಮದಿಂದ ಸಂಪಾದನೆ ಮಾಡುವವರೆಗೂ ಇಂದಿನ ಯುವ ಜನತೆ ಕಾದು ಕುಳಿತುಕೊಳ್ಳುವುದಿಲ್ಲ, ಕುಳಿತುಕೊಳ್ಳುವ ಅಗತ್ಯವೂ ಇಲ್ಲ; ಇಂದಿನ ಸ್ಥಿತಿ-ಗತಿಗಳು ಕುಳಿತುಕೊಳ್ಳಲು ಬಿಡುವುದೂ ಇಲ್ಲ. ಇವೆಲ್ಲವೂ ಅವರಿಗೆ ಕೈ ಬೆರಳುಗಳಿಗೆ ನಿಲುಕುವಂಥವುಗಳೇ. ಸಹಜಜೀವನ ಪದ್ಧತಿ – ಒಂದು ಕೀಳರಿಮೆಯಾಗಿ, ಸಂಬಂಧಗಳು – ವ್ಯವಹಾರವಾಗಿ ಪರಿಗಣಿಸಲ್ಪಟ್ಟಿರುವ ಇಂದಿನ ಬದುಕಿನ ದೃಷ್ಟಿಯಲ್ಲಿ ದೀರ್ಘಾವಧಿಯ ನೇತ್ಯಾತ್ಮಕ ಪ್ರಗತಿ ಮತ್ತು ಅಲ್ಪಾವಧಿಯ ಇತ್ಯಾತ್ಮಕ ಪ್ರಗತಿ ಕಂಡುಬರುತ್ತದೆ.

ತಂದೆ ಮತ್ತು ತಾತ ಮಾಡಿಟ್ಟ ಯಾವುದೇ ಆಸ್ತಿಯೊಂದಿಗೆ ಭಾವನಾತ್ಮಕ ಸಂಬಂಧವನ್ನಿರಿಸಿಕೊಂಡಿರದ ಇಂದಿನ ಮೊಮ್ಮಗನ ಒಟ್ಟಾರೆ ಬೆಳವಣಿಗೆ ಯಾಂತ್ರಿಕ ಮತ್ತು ತಾಂತ್ರಿಕವಾದುದು. ಆಧುನಿಕ ತಂತ್ರಜ್ಞಾನದ ಎಲ್ಲಾ ನೆರವನ್ನೂ ತುಂಬಾ ಸುಲಭವಾಗಿ ಪಡೆಯುತ್ತಿರುವ ಇವನಲ್ಲಿ ಯಾವುದೇ ನೈತಿಕ ಪ್ರಗತಿ ಕಾಣಲು ಸಾಧ್ಯವಾಗುವುದಿಲ್ಲ. ದೂರದರ್ಶನ, ದೂರವಾಣಿ, ಮೊಬೈಲ್ ಫೋನ್, ಕಂಪ್ಯೂಟರ್, ವಾಹನಾದಿ 'ಸಂಪತ್ತು'ಗಳು ಈ ಮೊಮ್ಮಗನ ಇಡೀ ಬದುಕಿಗೆ ರೆಡಿಮೇಡ್ ಸರಕುಗಳಾಗಿವೆ. ಆತನ ತಂದೆಯಾಗಲೀ, ತಾತನಾಗಲೀ ಇದರಿಂದ ವಂಚಿತರಾದುದು ಸರಿ. ಆದರೆ ಇವುಗಳೊಂದಿಗೆ ಬದುಕುತ್ತಿರುವ ಮೊಮ್ಮಗನಲ್ಲಿ ಸಮಾಜಮುಖಿ ಬೆಳವಣಿಗೆಯನ್ನಾಗಲೀ ನೈತಿಕ ಪ್ರಗತಿಯನ್ನಾಗಲೀ ನಿರೀಕ್ಷಿಸುವಂತಿಲ್ಲ. ಅದು ಯಾವುದೇ ಸಂದರ್ಭದಲ್ಲಿ ಬದಲಾಗುವಂತಾಗಿರುವುದು ದುರದೃಷ್ಟಕರ.

ಕಾಲದಿಂದ ಕಾಲಕ್ಕೆ ಮೌಲ್ಯಗಳು, ಮಾನದಂಡಗಳು ಬದುಕಿನ ಪರಿಸ್ಥಿತಿಗೆ ಪ್ರತಿಸ್ಪಂದಿಸುತ್ತ ಬದಲಾಗುತ್ತಿರುವುದು, ಬದಲಾಗುವುದು ಮತ್ತು ಬದಲಾಗಬೇಕಾಗಿರುವುದು ಅವಶ್ಯವೇ. ಆದರೆ ಈ ಎಲ್ಲ ಬದಲಾವಣೆಗಳು ನೈತಿಕತೆಯ ವೇದಿಕೆಯ ಮೇಲೆ ಅನಾವರಣಗೊಳ್ಳದಿರುವ ಬಗ್ಗೆ ಒಂದು ಬಹುದೊಡ್ಡ ಅಭ್ಯಂತರವೇ ಇದೆ. ಆದ್ದರಿಂದ ಸಮಾಜ ಪ್ರಗತಿಶೀಲವಾಗಬೇಕಾದಾಗ ವಿವೇಕಯುತ ತಿಳುವಳಿಕೆ ಅಗತ್ಯವೆನಿಸುತ್ತದೆ.

ಶಿಕ್ಷಣವೇ ಬಹುಮುಖ್ಯವಾಗಿದ್ದ ಕಾಲದಿಂದ ಹಣ, ಅಧಿಕಾರದವರೆಗೆ ಬಂದಿರುವುದು ಒಂದು ವಿಭಿನ್ನ ಬೆಳವಣಿಗೆಯಾಗಿರುವುದೇನೋ ಸರಿ; ಆದರೆ ಇದನ್ನು ಪಡೆಯುವ ಮಾರ್ಗಗಳು ಸಾಮಾಜಿಕ ಸ್ವಾಸ್ಥ್ಯವನ್ನು ಕೆಡಿಸ ಬಯಸುವುದು ಸರಿಯಾದ ಬೆಳವಣಿಗೆಯಲ್ಲ. ಸಾಮಾಜಿಕತೆಯನ್ನು ಅಸ್ಪಷ್ಟಗೊಳಿಸಿದಾಗಲೇ ಎಲ್ಲವೂ ಸಿಗಬಲ್ಲವು ಎಂಬ ನಿರ್ಧಾರಗಳು ಗಾಢವಾಗುತ್ತಿರುವುದು ಸಹ ಆಶ್ಚರ್ಯವೇ. ಪರಿವರ್ತನಶೀಲ ಗುಣವೇ ಪ್ರಮುಖವಾಗಿರುವ ಯಾವುದೇ ಕಾಲದ ಸಾಮಾಜಿಕ ವ್ಯವಸ್ಥೆಯು ನಿರಂತರವಾಗಿ ಒಂದರ ಮೇಲೊಂದರಂತೆ ಅನೇಕ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿಕೊಂಡು ನರಳುತ್ತಿರುವುದು ಸಹ ವಿಪರ್ಯಾಸವೇ !

> 'ಆಧುನಿಕತೆ' ಎಂಬುದು ಹೊರನೋಟದ ಸೌಂದರ್ಯಕ್ಕೆ ಹೆಚ್ಚು ಮನ್ನಣೆ ನೀಡುವಂಥದ್ದು. ಬಹುಶಃ ಪಾರಂಪರಿಕ ನೆಲೆಗಳಿಗೆ ಪರ್ಯಾಯವಾಗಿ ಇದು ಚಿಂತಿಸುತ್ತಿರುತ್ತದೆ. ಬದುಕಿನ ಲೌಕಿಕತೆಯೇ ಇಲ್ಲಿ ಮೂಲ ನೆಲೆಯೂ ಆಗಿರಬಹುದಾದ್ದರಿಂದ ಇದು ಇಂಥವುಗಳ ಕೇಂದ್ರದಲ್ಲಿಯೇ ಸುತ್ತುತ್ತಿರುತ್ತದೆ. ಮೌಲ್ಯಗಳನ್ನು ಬಹು ತೀವ್ರಗತಿಯಲ್ಲಿ ಸ್ಥಿತ್ಯಂತರಗೊಳಿಸುವ ಈ ತಂತ್ರವು ಬಹುಬೇಗನೇ ತನ್ನ ಆಕರ್ಷಣೆಗೆ ಒಳಮಾಡಿಕೊಳ್ಳುತ್ತದೆ. ಬದುಕಿನ ಬಗ್ಗೆ ಇರುವ ಗಾಢವಾದ ಭಾವನಾತ್ಮಕ ಸಂಬಂಧವನ್ನು ಇದು ನಿರಾಕರಿಸುವಂತೆ ಮಾಡುತ್ತದೆ. ಇವೆಲ್ಲಾ 'ತೀರಾ ಸಹಜ' – ಎಂಬಂತೆ ಪರಿಭಾವಿಸಲಾಗುತ್ತಿರುವುದೂ ಸಹ ಒಂದು ವಿಪರ್ಯಾಸವೇ !

ವೃತ್ತಿಪರ ಶಿಕ್ಷಣಕ್ಕೆ, ಹಣ ಸಂಪಾದನಾ ಕೇಂದ್ರದ ಶಿಕ್ಷಣಕ್ಕೆ ಬಂದಿರುವ ಶೈಕ್ಷಣಿಕ ಪದ್ಧತಿಗಿಂತಲೂ ಸಾಕಷ್ಟು ಮುಂದುವರೆದಿರುವ ಕ್ರಮವಾಗಿರುವುದೇನೋ ಸರಿಯೇ; ಆದರೆ ಈ ಕ್ರಮ ಕ್ರಮೇಣ ಶೈಕ್ಷಣಿಕ ನಾಯಕತ್ವವನ್ನು ಒಂದು ಅಧಿಕಾರಕೇಂದ್ರಿತ ನೆಲೆಗೆ ಕೊಂಡೊಯ್ಯುತ್ತಿರುವುದು ಮತ್ತು ಶಿಕ್ಷಣ ಮತ್ತೆ ಹಣವುಳ್ಳವರ ಕಡೆಗೇ ವಾಲುತ್ತಿರುವುದು ದುರದೃಷ್ಟಕರ.

ಅನಿಷ್ಟವಿಲ್ಲದ ಸಾಮಾಜಿಕ ವ್ಯವಸ್ಥೆ ಅಸಾಧ್ಯ. ಆದರೆ ಅನಿಷ್ಟಗಳನ್ನು ಕಡಿಮೆ ಮಾಡಿಕೊಳ್ಳುವ ಕಡೆಗೆ ಮುನ್ನಡೆಯುವಂತಾಗಬೇಕಾಗಿರುವುದು ಮತ್ತು ಕೊನೇಪಕ್ಷ ಒಂದು ಮೌಲ್ಯದೆಡೆಗೆ ಕೊಂಡೊಯ್ಯಬೇಕಾಗಿರುವುದು ಇಂದಿನ ಆದ್ಯತೆಯಾಗಿದೆ.

ರಾಜಕೀಯ ಕೇಂದ್ರಿತ ವಿದ್ಯಮಾನಗಳು ಸಾಮಾಜಿಕವಾಗಿ ವ್ಯಾಪಕ ಪರಿಣಾಮವನ್ನು ಉಂಟುಮಾಡುತ್ತವೆ. ಇಂದು ಸಮಾಜದ ಎಲ್ಲ ಕ್ಷೇತ್ರಗಳ ಹೊಣೆಗಾರಿಕೆಯನ್ನೂ ರಾಜಕೀಯ ವಲಯಕ್ಕೆ ವಹಿಸಿಕೊಟ್ಟಿರುವುದು ಒಂದು ಸಕಾರಾತ್ಮಕ ಬೆಳವಣಿಗೆಯಂತೂ ಅಲ್ಲ. ಇಂದಿನ ಸಮಾಜಕ್ಕೆ 'ಹೊಸತು' ಎಂಬಂಥದ್ದು ಯಾವುದೂ ಬೇಕಾಗಿಲ್ಲ. ಇದ್ದುದನ್ನು ಉಳಿಸಿಕೊಳ್ಳುವ, ಬಳಸಿಕೊಳ್ಳುವ ನಿರಂತರ ಪ್ರಕ್ರಿಯೆ ನಡೆಯಬೇಕಾಗಿರುವುದು ಅವಶ್ಯವಾಗಿದೆ. ಪ್ರಥಮ ಆದ್ಯತೆಯ ಗ್ರಹಿಕೆ ಈ ಸಮಾಜದ ಮತ್ತು ಈ ದೇಶದ ಒಟ್ಟಾರೆಯ ಮೊದಲ ಸಮಸ್ಯೆಯಾಗಿದೆ. ರಾಜಕೀಯ ಕೇಂದ್ರಿತ ನೆಲೆಯ ಅಧಿಕಾರಕ್ಕೇ ಅವೆಲ್ಲವು ಮುಖಮಾಡಿ ನಿಂತಿರುವುದರಿಂದ ಸಮಾಜದ ಮೇಲೆ ರಾಜಕೀಯ ವಲಯವು ತನ್ನ ನಿಯಂತ್ರಣವನ್ನು ಬಿಗಿಗೊಳಿಸುತ್ತದೆ. ಹೀಗಾಗುತ್ತಿರುವುದರಿಂದಲೇ ನಮ್ಮಲ್ಲಿ ರಾಜಕೀಯ ಪಕ್ಷಗಳು ಬದಲಾಗುತ್ತಿವೆಯೇ ಹೊರತು ರಾಜಕೀಯ ಸಿದ್ಧಾಂತಗಳು ಬದಲಾಗುವುದಿಲ್ಲ. ಅವು ಯಾವಾಗಲೂ ತಮ್ಮ ನೆಲೆಯೂರಿಕೆಗೆ ಸಮಾಜವನ್ನೇ ಬಳಸಿಕೊಳ್ಳುತ್ತಿರುತ್ತವೆ. ಸಮಾಜದ ವಿಶಾಲ ಹರಹಿನಲ್ಲಿ ತನ್ನನ್ನು ನಿರ್ಮಿಸಿಕೊಳ್ಳುವುದು ರಾಜಕೀಯದ ಪ್ರಮುಖ ಗುಣ-ಸ್ವಭಾವ. ಇದು ನಿರಂತರವಾಗಿ ಮುನ್ನಡೆಯುತ್ತಿರುವುದರಿಂದಲೇ ಸಮಾಜದ ಪ್ರಗತಿಶೀಲ ಬೆಳವಣಿಗೆ ಸಹಜವಾಗಿ ಕುಂಠಿತಗೊಳ್ಳುತ್ತದೆ. ಇನ್ನೇನು ಮುಗಿಯಿತು ಎನ್ನುವಾಗ ಮತ್ತೊಂದು ಸಮಸ್ಯೆ ಎಲ್ಲಿಂದಲೋ ಮೂಡಿ ಬರುವುದು ಈ ಕಾರಣದಿಂದಲೇ. ದೇಶದ ಸಮಸ್ಯೆಗಳು ಆಡಳಿತ ಪಕ್ಷದ ಸಮಸ್ಯೆಗಳಾಗಬೇಕು. ಅವುಗಳ ಪರಿಹಾರ ಕಾರ್ಯ ಕೊಂಚವೂ ಸಡಿಲಗೊಳ್ಳದಂತೆ ವಿರೋಧಪಕ್ಷಗಳು ಆಡಳಿತ ಪಕ್ಷವನ್ನು ನಿಯಂತ್ರಿಸುತ್ತಿರಬೇಕು. ಆದರೆ ಇಂದು ಹಾಗಾಗುತ್ತಿಲ್ಲ. ಆಡಳಿತ ಪಕ್ಷದ ಸಮಸ್ಯೆಗಳೇ ದೇಶದ ಸಮಸ್ಯೆಗಳಾಗಿವೆ. ಇಂಥ ಸಮಸ್ಯೆಗಳ ಅವಕಾಶ ಪಡೆದು ವಿರೋಧ ಪಕ್ಷವು ಆಡಳಿತಪಕ್ಷವಾಗಲು ಹೊಂಚು ಹಾಕುತ್ತಿರುತ್ತದೆ. ಅಂದರೆ ಸಮಾಜಮುಖೀ ಸ್ವರೂಪ ಪಡೆಯಬೇಕಾದ ರಾಜಕೀಯ ಪಕ್ಷಗಳ ಸಿದ್ಧಾಂತ ವ್ಯಾಕರಣವೂ ಬದಲಾಗಿರುವುದು ವಿಪರ್ಯಾಸ. ಅಧಿಕಾರದ ಚುಕ್ಕಾಣಿ ಹಿಡಿಯುವುದು ಒಂದು ಪಕ್ಷದ ಗುರಿ ಯಾಗುವುದು ಅದರ ಪ್ರಧಾನ ಗುಣವಾಗಲೇಬಾರದು. ಅದೂ ಒಂದು ಮಾರ್ಗವಷ್ಟೆ. ಜಾಗತೀಕರಣ, ಖಾಸಗೀಕರಣ, ಉದಾರೀಕರಣದ ಪ್ರಕ್ರಿಯೆ ಜರುಗುತ್ತಿರುವ ಇಂದಿನ ಸಾಮಾಜಿಕ ಸಂದರ್ಭದಲ್ಲಿ ನಮ್ಮ ದೇಶ ತನ್ನ ನೆಲೆಯನ್ನು ಕಂಡುಕೊಳ್ಳುವ ಪ್ರಶ್ನೆ ಗಂಭೀರವಾದುದು. ಜಗತ್ತು ಒಂದು ಹಳ್ಳಿಯಾಗಿ ಬೆಳೆಯುತ್ತಿರುವುದು ನಮ್ಮ ದೇಶದ ಬಹು ದೊಡ್ಡ ಲಾಭವಾಗೇನೂ ಉಳಿದಿಲ್ಲ. ಕೃಷಿಪ್ರಧಾನ ದೇಶಗಳಿಗೆ ಇದು ಬಾಯಿಗೆ ಕಡುಬು ತುರುಕುವಂಥ ತಂತ್ರವಾಗಿ ಪರಿಣಮಿಸಿದೆ. ಸಾಲ ಶೂಲವಾಗಿ ಬಡ್ಡಿ ಬೆಟ್ಟವಾಗಿ ಪರಿವರ್ತಿತವಾಗುತ್ತಿರುವ ಇಂದಿನ ಸಂದರ್ಭದಲ್ಲಿ ಬದುಕುತ್ತಿರುವ ನಮ್ಮ ರೈತನಿಗೆ ಜಾಗತೀಕರಣ ಇತ್ಯಾದಿಗಳು ಯಾವ ಪ್ರಗತಿಯನ್ನು ತರುತ್ತಿವೆ ? ನಮ್ಮ ಆಳುವ ವರ್ಗಕ್ಕೆ ಅಭಿವೃದ್ಧಿಯ ಪರಿಕಲ್ಪನೆ ಇಲ್ಲ. ಇವರಿಗೆ ಅರ್ಥ ಮಾಡಿಕೊಳ್ಳಲು ಇಚ್ಛೆಯಿಲ್ಲ.

ಡಾ|| ಮೃತ್ಯುಂಜಯ ರುಮಾಲೆ
ವಿಜಯನಗರ ಕಾಲೇಜ್, ಹೊಸಪೇಟೆ - ೫೮೩ ೨೦೧

# 'ಹವ್ಯಾಸಿ' ರಂಗಭೂಮಿ ಮತ್ತು ಮಹಿಳೆ – ಕೆಲವು ಚಿಂತನೆಗಳು

*ಅದೆಷ್ಟೇ ಹೊಸ ಪ್ರಯೋಗ, ಸಾಧನೆ ಮಾಡಿದಾಗಲೂ ಹೊಸತನ್ನು ಗುರುತಿಸದೇ ಮೌನ ವಹಿಸುವುದೂ ಕ್ರೌರ್ಯದ ಒಂದು ಮುಖ. ಇನ್ನು ಬೇರೆಲ್ಲ ವಲಯಗಳಿಗಿಂತ ಮಿಗಿಲಾಗಿ ವೈಯಕ್ತಿಕ ಸಂಗತಿಗಳನ್ನು ವೈಭವಿಸಿದ ಬಹಿರಂಗ ಅಪಪ್ರಚಾರ ಕೂಡ ಮಾಡುವ ಮೂಲಕ ಪ್ರತಿಭಾವಂತೆಯರ ಉತ್ಸಾಹವನ್ನು ಇದ್ದಲ್ಲೇ ಅಡಗಿಸುವ ಅಥವಾ ಸ್ವತಂತ್ರ ಅವಕಾಶಗಳು ಸಿಗದಹಾಗೆ ಮಾಡುವುದು ಕೂಡ ಕ್ರೌರ್ಯವೇ. ಬಿ. ಜಯಶ್ರೀ ಏಕಾಂಗಿಯಾಗಿ ನಿಂತು ರಂಗಭೂಮಿಯಲ್ಲಿ ಹೊಸತನ್ನು ಸಾಧಿಸಿದರು. ಆಕೆ ಸಿದ್ಧಪಡಿಸಿದ 'ನಾಗಮಂಡಲ'ದ ರಂಗಕೃತಿ ಸ್ತ್ರೀಪರ ದೃಷ್ಟಿಕೋನದ್ದಾಗಿತ್ತು. ಬಿ. ಜಯಶ್ರೀಗೆ ವೈಯಕ್ತಿಕ ಸಮಸ್ಯೆಗಿಂತ ಆಕೆಯ ಸಾಧನೆಯ ಬಗ್ಗೆ ದಿವ್ಯ ನಿರ್ಲಕ್ಷ್ಯ ತೋರುವ ಬಗೆ ಆಕೆಯನ್ನು ಖಿನ್ನಳಾಗಿಸುತ್ತದೆ. ಹೆಣ್ಣುತನ – ಜಾತಿ ಎರಡೂ ತನ್ನ ಪ್ರಗತಿಯನ್ನು ಹತ್ತಿಕ್ಕುತ್ತವೆ ಎನ್ನುತ್ತಾರಾಕೆ. ಎಸ್. ಮಾಲತಿ ರಂಗ, ವೈಯಕ್ತಿಕ ಬದುಕುಗಳೆರಡರಲ್ಲೂ ಅಗ್ನಿದಿವ್ಯವನ್ನೇ ಎದುರಿಸಿದರು. ಬಹುತೇಕರ ಅನುಭವ ಇದಕ್ಕಿಂತ ಭಿನ್ನವಲ್ಲ.*

ಡಾ|| ವಿಜಯಾ

ರಂಗಭೂಮಿ ಮಹಿಳೆಯನ್ನು ವಿಭಿನ್ನ ರೀತಿಯಲ್ಲಿ ಆಕರ್ಷಿಸುತ್ತಿದೆ. ಈಚೆಗೆ ಎಲ್ಲ ಕ್ಷೇತ್ರದಲ್ಲೂ ನಡೆದ ಹಾಗೆ ರಂಗಭೂಮಿಯಲ್ಲಿ ಮಹಿಳೆಯ ಆಸಕ್ತಿ, ಸ್ಥಾನ ಕುರಿತೂ ಚರ್ಚೆ ಮಾಡುತ್ತಿದ್ದೇವೆ. ಬೇರೆ ಬೇರೆ ರಾಜ್ಯ, ರಾಷ್ಟ್ರಗಳಲ್ಲಿ ಈ ಕುರಿತು ಹತ್ತೂ ದಿಕ್ಕಿನಲ್ಲಿ ಬೆಳವಣಿಗೆ ಆಗಿದೆ. ಕನ್ನಡ ರಂಗಭೂಮಿಯ ಸಂದರ್ಭದಲ್ಲಿ ಇಂಥ ಚರ್ಚೆ ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ.

ಆಗ-ಈಗ ವೃತ್ತಿ ರಂಗಭೂಮಿಯಲ್ಲಿ ಸ್ತ್ರೀಯರ ಸಂಕಷ್ಟಗಳನ್ನು ಕುರಿತು, ಶ್ರೇಷ್ಠ ಅಭಿನೇತ್ರಿಯರ ಬಗ್ಗೆ ಮೆಚ್ಚಿಕೆ, ಅವರ ಜೀವನ ಕಥನವೋ ಸನ್ಮಾನಗಳೋ ನಡೆಯುತ್ತವೆ ಯಾದರೂ ಹವ್ಯಾಸಿ ರಂಗಭೂಮಿಯಲ್ಲಿ ಮಹಿಳೆಯನ್ನು ಕುರಿತು ಹೆಚ್ಚು ಚರ್ಚೆ ಯಾದದ್ದಿಲ್ಲ. ಈ ಹಿನ್ನೆಲೆಯಲ್ಲಿ ಈಚೆಗೆ ನಾಟಕ ಅಕಾಡೆಮಿಯು ಒಂದು ಗೋಷ್ಠಿಯನ್ನು ಏರ್ಪಡಿಸಿತ್ತು. ಹಲವು ಮಗ್ಗುಲಿನಿಂದ ಸ್ತ್ರೀಪರ ಕಾಳಜಿಯಿಟ್ಟು ಅವಲೋಕಿಸುವ ಪ್ರಯತ್ನವಾಗಿ ಅದೊಂದು ಸ್ವಾಗತಾರ್ಹ ಪ್ರಯತ್ನ.

ಹವ್ಯಾಸಿ, ವೃತ್ತಿ ಎಂದು ವಿಂಗಡಿಸುವುದೇ ಅಷ್ಟು ಹಿತವಲ್ಲದ ಸಂಗತಿ. ಆದರೆ ಎರಡು ವಿಭಿನ್ನ ರಂಗವಿಧಾನಗಳನ್ನು ಗುರುತಿಸಿಕೊಳ್ಳುವ ಅನುಕೂಲಕ್ಕಾಗಿ ಪ್ರಭೇದಗಳನ್ನು ಮಾಡಿಕೊಳ್ಳಬೇಕಾಗಿದೆ ಅನ್ನಿಸುತ್ತದೆ. ಸಮಾನಾಂತರ ರೇಖೆಗಳು ಸಂಧಿಸುವ ಕಾಲ ಬಂದಾಗ ಬೇರೊಂದು ನಾಮಕರಣವೂ ಸಾಧ್ಯವಾದೀತು.

ವಿಲಾಸೀ ಅಥವಾ ಹವ್ಯಾಸೀ ರಂಗಭೂಮಿಯೇ ತಡವಾಗಿ ಅಸ್ತಿತ್ವಕ್ಕೆ ಬಂದದ್ದು. ಈ ರಂಗಭೂಮಿಯಲ್ಲಿ ಮಹಿಳೆಯ ಪ್ರವೇಶವೂ ಅಷ್ಟೇನೂ ಬೇಗ ಸಾಧ್ಯವಾಗಿಲ್ಲ. ಪ್ರಾರಂಭ ದಲ್ಲಿ ಇಲ್ಲಿಯೂ ಪುರುಷನೇ ಸ್ತ್ರೀ ಪಾತ್ರ ವಹಿಸುತ್ತಿದ್ದುದನ್ನು ಕಾಣುತ್ತೇವೆ. ಕಡಿಮೆ ಸ್ತ್ರೀ ಪಾತ್ರ ಇರುವ, ಅಥವಾ ಸ್ತ್ರೀಯರೇ ಇಲ್ಲದ ನಾಟಕಗಳ ರಚನೆಯೂ ಅನಿವಾರ್ಯವಾಗಿದ್ದ ದಿನಗಳವು.

ಇಲ್ಲಿಯೂ ಸ್ತ್ರೀಯರು ಸಾಮಾಜಿಕ ಮಾನ್ಯತೆ ಇತ್ಯಾದಿಗಳ ಹಿನ್ನೆಲೆಯಲ್ಲಿ ವೃತ್ತಿರಂಗ ಪ್ರವೇಶಿಸಿದ ಸ್ತ್ರೀಯರಿಗಿಂತ ಹೆಚ್ಚಿನ ಸಮಸ್ಯೆಗಳನ್ನು ಬಗಲಿಗಿಟ್ಟುಕೊಂಡೇ ಪ್ರವೇಶಿಸಿದ್ದಾರೆ. ವೃತ್ತಿರಂಗದವರಿಗೆ ಅದು ವೃತ್ತಿ. ಅವರಿಗೆ ಬದುಕಲು ದುಡಿಮೆ – ಹಣ ಗಳಿಕೆಯ ಅನಿವಾರ್ಯವಿತ್ತು. ಅದಕ್ಕಾಗಿ ಸಾಮಾಜಿಕ ಬದುಕಿನಲ್ಲಿ ಏರ್ಪಟ್ಟ ಅಸಮಾನತೆ, ಒಂದು ಅರ್ಥದಲ್ಲಿ ಅಪಮಾನವನ್ನು ಆಕೆ ನುಂಗಿಕೊಂಡಳು. ಹವ್ಯಾಸಿ ರಂಗಭೂಮಿಗೆ ಬರುವ ಸ್ತ್ರೀಯರಿಗೆ ಆ ಬಗೆಯ ಅನಿವಾರ್ಯಗಳಿಲ್ಲ. ಹವ್ಯಾಸಿ ರಂಗಭೂಮಿಯ ಮಹಿಳೆಯರು ಮನೆಯವರಿಗೆ ಹೇಳದೆ, ಬೈಗುಳ-ಹೊಡೆತ ಸಹ ಸಹಿಸಿಕೊಂಡು ರಂಗವೇರಿದ್ದಾರೆ. ವಿವಾಹಿತೆಯಾದರೆ ಗಂಡ-ಮಕ್ಕಳು ಹಾಗೂ ಹಿರಿಯರ ಕಡೆಯಿಂದ ಬರುವ ತೊಡಕುಗಳು, ಕನ್ನೆಯಾದರೆ ಮತ್ತೂ ಹೆಚ್ಚಿನ ಸಿಕ್ಕುಗಳು ಎದುರಾಗಿವೆ. ಅವನ್ನೆಲ್ಲ ದಾಟಿಯೂ ರಂಗದ ಮೇಲೇರುವುದರ ಹಿಂದೆ ಅವಳ ಒಳಗಿನ ಸೃಜನಶೀಲ ಮನಸ್ಸಿನ ತುಡಿತ ಇದೆ. ಬಹುತೇಕ ಪುರುಷರೇ ಸ್ತ್ರೀ ಪಾತ್ರ ಮಾಡುತ್ತಿದ್ದ ದಿನಗಳಲ್ಲಿ ಟಿ. ಪಿ. ಕೈಲಾಸಂ, ಪರ್ವತವಾಣಿ ಮೊದಲಾದವರ ನಾಟಕಗಳ ರಚನೆಯಲ್ಲೇ ಪ್ರಾರಂಭದಲ್ಲಿ ಪ್ರಯೋಗದ ಅನುಕೂಲ ಗಳನ್ನು ಆಧರಿಸಿ ಸ್ತ್ರೀ ಪಾತ್ರಗಳು ರಚಿತವಾದುದರ ಸುಳಿವು ಕಾಣುತ್ತದೆ. ಪುರುಷರು ಸ್ತ್ರೀ ಪಾತ್ರದಲ್ಲಿ ನಟಿಸಿದಾಗ ಅವರ ಕಲ್ಪನೆಯ ಸ್ತ್ರೀಯಂತೆ ವಿಚಿತ್ರ ಒನಪು, ಒಯ್ಯಾರಗಳು – ಪಾತ್ರದ ವಯಸ್ಸಿಗೆ ಅಗತ್ಯವಾಗಿ ಬೇಕಾದ ಗಾಂಭೀರ್ಯ ವನ್ನು ದಾಟಿ – ತುಂಬಿರುತ್ತಿದ್ದವು. ಆ ದಿನಗಳ ಆಧುನಿಕ ನಾರಿಯರ ಪರಿಕಲ್ಪನೆಯೂ ಈ ಬಗೆಯ ಅಭಿನಯಕ್ಕೆ ಪೋಷಕವಾಗುವಂಥದ್ದು. ವಿದ್ಯಾವಂತೆ, ಉದ್ಯೋಗಸ್ಥೆ ಇವರ ನಾಟಕಗಳಲ್ಲಿ ಚಿತ್ರಿತವಾಗುತ್ತಿದ್ದ ರೀತಿಯನ್ನು ಗಮನಿಸಿ. ಅಂಥ ಗಡಸು-ಒಯ್ಯಾರಕ್ಕೆ ಪುರುಷ ಪಾತ್ರಧಾರಿ ಸಾಕಾಗಿತ್ತು. ಕೈಲಾಸಂ ಸೃಷ್ಟಿಸಿದ ಮಡಿಹೆಂಗಸರ ಪಾತ್ರಗಳ ಹಿನ್ನೆಲೆಯಲ್ಲೂ ಇಂಥದೊಂದು ಆಲೋಚನಾ ಕ್ರಮವಿರಬಹುದಾಗಿದೆ. ಆದ್ದರಿಂದಲೇ 'ಫಣಿಯಮ್ಮ'ನಂಥ ಒಂದು ಪಾತ್ರವನ್ನು ರಂಗದ ಮೇಲೆ ತರಲು ಸಾಧ್ಯವಾಗಲಿಲ್ಲವೇನೊ. ಮಡಿಹೆಂಗಸರೆಲ್ಲ ಪಿರಿಪಿರಿ ಮಾಡುವವರು, ವಿಚಿತ್ರ ಹಾವಭಾವದವರು ಆಗುತ್ತಾರೇಕೆ ? ಈ ಹಿನ್ನೆಲೆಯಲ್ಲಿ ಒಂದು ಕಾಲಘಟ್ಟದಲ್ಲಿ ರಂಗಭೂಮಿಗೆಂದೇ ರಚಿತವಾದ ನಾಟಕಗಳಿಗೆ ಈ ಬಗೆಯ ಪಾತ್ರಧಾರಿಗಳ ಇತಿಮಿತಿಯ ಕಡಿವಾಣ ಇದ್ದಿರಬಹುದೇ ಎಂದು ಯೋಚಿಸಬೇಕಾಗಿದೆ. ಇದಕ್ಕೆ ಒಂದೆರಡು ಅಪವಾದಗಳಿರಬಹುದು. ಅಂಥಲ್ಲಿ ಬಹುಪ್ರಯಾಸದಿಂದ ತಮ್ಮ ಮನೆಯ, ಆಪ್ತಮಿತ್ರರ ಮಡದಿ, ಸಹೋದರಿಯನ್ನು ಕರೆತಂದು ನಾಟಕ ಮಾಡಿದ್ದುಂಟು.

ಧಾರವಾಡದಲ್ಲಿ ಶ್ರೀರಂಗರು ರಂಗಭೂಮಿಯಲ್ಲಿ ನೇರವಾಗಿ ತೊಡಗಿಕೊಂಡ ದಿನಗಳಲ್ಲಿ ಅವರಿಗೆ ಇಂಥ ಸಮಸ್ಯೆ ಎದುರಾಗಿದೆ. ಅವರ ನಾಟಕಗಳನ್ನು ಬೇರೆಯವರು ಆಡಿದಾಗ ದೂರ ನಿಂತು ನೋಡಿದ್ದರಾದರೂ ಅವರೇ ರಂಗಪ್ರಯೋಗದಲ್ಲಿ ತೊಡಗಿ ಕೊಂಡಾಗ, ರಂಗವೇರಿದಾಗ ಸ್ತ್ರೀಪಾತ್ರಗಳ ಅಸಹಜತೆ ಅಸಹನೀಯವೆನಿಸಿದೆ. ಅವರೆದುರು ಅಭಿನಯಿಸಲು ಬಂದ ಸ್ತ್ರೀವೇಷದ ನಟರನ್ನು ನೋಡಿ 'ಕಣ್ಣುಮುಚ್ಚಿಕೊಂಡೆ' ಎನ್ನುತ್ತಾರೆ. ''...ಮುಖ್ಯವಾದ ತೊಂದರೆ ಎಂದರೆ ನಮ್ಮ ಸಾಮಾಜಿಕ ರೀತಿ-ನೀತಿಗಳು. ಯಾವುದೇ ಯುವತಿಗೆ ಪಾತ್ರವನ್ನು ವಹಿಸಬೇಕೆಂಬ ಆಕಾಂಕ್ಷೆ ಇದ್ದರೂ ಅದಕ್ಕೆ ಅವಕಾಶ ದೊರೆಯದು. ಯಾಕೆಂದರೆ ಗಂಡಸು-ಹೆಂಗಸರು ಮದುವೆಯಾಗದೆ ಒಂದೆಡೆ ಸೇರುವಂತಿಲ್ಲ, ಒಂದೆಡೆ ಸೇರಿದ ಪಕ್ಷದಲ್ಲಿ ಮದುವೆಯಾಗಲೇಬೇಕು. ಎರಡನೆಯದಾಗಿ, ಕಲೆಯಲ್ಲಿ ಆಸಕ್ತಿ ವಹಿಸುವ ಸ್ತ್ರೀಯನ್ನು 'ಮೃಚ್ಛಕಟಿಕ'ದ ವಸಂತಸೇನೆಯಂತೆ ಮೆಚ್ಚುವವಾದರೂ ಸಾಮಾಜಿಕ ಜೀವನದಲ್ಲಿ ಆಕೆಗೆ ಸ್ಥಾನಮಾನವಿಲ್ಲ. ಮೂರನೆಯದಾಗಿ, ತಾನೇ ಅವಿವಾಹಿತನಾಗಿದ್ದು ಯುವತಿಯರನ್ನು ಪಾತ್ರವಹಿಸಲು ಆಮಂತ್ರಿಸುವುದು ಸಂಶಯಕ್ಕೆ ಆಸ್ಪದ ಕೊಡಬಹುದು. ಆದರೆ, ಸ್ತ್ರೀಪಾತ್ರ ಸ್ತ್ರೀಯೇ ವಹಿಸುವುದು ಯೋಗ್ಯ...'' ಎಂದು ತಮ್ಮ ಆತ್ಮಚರಿತ್ರೆಯಲ್ಲಿ ಪ್ರಸ್ತಾಪಿಸುವ ಶ್ರೀರಂಗರು ವೃತ್ತಿರಂಗದಲ್ಲಿರುವ ಸ್ತ್ರೀಯರ ಹಣಗಳಿಕೆಯೇ ಪ್ರಧಾನವಾದ ಪ್ರವೃತ್ತಿಗಿಂತ ಬೇರೆಯಾದ, ನಾಟಕವನ್ನೊಂದು ವಿಭಿನ್ನಪ್ರಕಾರವಾಗಿ ನೋಡಬಲ್ಲ ಸುಶಿಕ್ಷಿತ ಮಹಿಳೆಯರು ರಂಗದ ಮೇಲೆ ಬಂದರೆ ಮಾತ್ರ ತಮ್ಮ ಆಧುನಿಕ ಚಿಂತನೆಯ ನಾಟಕಗಳಿಗೆ ಒಂದು ಆಯಾಮ ಸಿಗಬಹು ದೆಂದು ಯೋಚಿಸಿದರು. ಯಾರನ್ನಾದರೂ ಥಟ್ಟನೆ ಕೇಳಿದರೆ ಅದೇ ಕಾರಣ ಮುಂದಿಟ್ಟು ತನ್ನ ಕೆಲಸಕ್ಕೇ ಸಂಚಕಾರ ಅಥವಾ ಅದೊಂದು ನೈತಿಕ ಅನಾಚಾರ (moral turpitude) ಆದೀತೆಂಬ ಆತಂಕವಿದ್ದ ಶ್ರೀರಂಗರು ಪ್ರಾರಂಭಕ್ಕೆ ಕಾಲೇಜಿನ ವಿದ್ಯಾರ್ಥಿನಿಯರಿಗೆ ಸ್ತ್ರೀ

ಪಾತ್ರಗಳೇ ಇರುವ ಪುಟ್ಟ ಪುಟ್ಟ skitಗಳನ್ನು ರಚಿಸಿ ಆಡಿಸಿದರು. ಮೊದಲು ತಮ್ಮ ಬಗೆಗೆ ಒಂದು ವಿಶ್ವಾಸ ಮೂಡಿಸುವ ಅಗತ್ಯವನ್ನು ಹೀಗೆ ತುಂಬಿಕೊಂಡರು. ಅನಂತರ ತಮ್ಮ ಹತ್ತಿರದ ಸ್ನೇಹಿತರ ಅಕ್ಕ-ತಂಗಿಯರನ್ನು ಕಳಿಸುವಂತೆ ಮನ ಒಲಿಸಿದರು. ಕೊನೆಗೂ ನಾಟ್ಯವಿಲಾಸಿ ತಂಡದಲ್ಲಿ ಸ್ತ್ರೀಯರೇ ಪಾತ್ರ ವಹಿಸುವಂತೆ ಮಾಡಿದರು. ''ಉತ್ತರ ಕರ್ನಾಟಕದಲ್ಲಿ ಸ್ತ್ರೀಯರನ್ನು ರಂಗದ ಮೇಲೆ ತಂದ ಮೊದಲಿಗ ನಾನು'' ಎಂದು ಹೇಳುತ್ತಾರೆ ಶ್ರೀರಂಗರು.

ಹಳೆ ಮೈಸೂರು ವಿಭಾಗದಲ್ಲಿ ಯಮುನಾ ಮೂರ್ತಿ ಮೊದಲ ಹವ್ಯಾಸೀ ರಂಗ ಕಲಾವಿದೆ ಎನ್ನಲಾಗುತ್ತಿದೆ !

ಹೀಗೆ ಹವ್ಯಾಸೀ ರಂಗದಲ್ಲಿ ತೊಡಗಿಕೊಂಡ ಕಲಾವಿದೆಯರನ್ನು ೩-೪ ರೀತಿಯಲ್ಲಿ ವಿಭಾಗಿಸಿಕೊಳ್ಳಬಹುದಾಗಿದೆ. ಒಂದು ಸೊಫಿಸ್ಟಿಕೇಟೆಡ್ ಕಲಾವಿದೆಯರ ಪ್ರವೇಶ, ಎಂದರೆ ವಿಮಲಾ ರಂಗಾಚಾರ್, ಗೋದಾ ರಾಮಕುಮಾರ್, ಲಲಿತಾ ಶಿವರಾಂ ಉಭಯಕರ್ ಮೊದಲಾದವರನ್ನು ಅನಂತರದ ಶಾರದಾ ರುದ್ರರವರೆಗೂ ಗುರುತಿಸುತ್ತಾ ಹೋಗಬಹುದು.


ಬಿ. ಜಯಶ್ರೀ

ಇನ್ನೊಂದು, ಮಧ್ಯಮವರ್ಗದಿಂದ ಬಂದ ಕಲಾವಿದೆಯರದ್ದು. ಬುಟ್ಟಿ ನಾಗರತ್ನ ಅವರು ಮಹಿಳಾ ಸಂಘದಲ್ಲಿ ನಾಟಕಗಳನ್ನಾಡಿಸಿದ್ದು, ಚಂದ್ರ, ಸತ್ಯವತಿ, ಭಾರ್ಗವಿ ನಾರಾಯಣ್, ವೈಶಾಲಿ ಮೊದಲಾದವರಿಂದಾರಂಭಿಸಿ ಇವತ್ತಿನ ಅನೇಕ ಯುವ ಕಲಾವಿದೆಯರವರೆಗೆ ಗುರುತಿಸಬಹುದು.

ಇದಲ್ಲದೆ ಇನ್ನೊಂದು ವಿಭಿನ್ನ ಗುಂಪು ಇದೆ. ಅದು ಇಡೀ ಕುಟುಂಬವೇ ಕಲಾವಿದರಾಗಿಬಿಡುವಂಥದ್ದು. ಪ್ರಭಾತ್ ಕಲಾವಿದರು, ಅ. ನ. ಸುಬ್ಬರಾಯರೇ ಮೊದಲಾದವರ ತಂಡಗಳು. ಶ್ರೀಮತಿ ಕಮಲಾ ಮೂರ್ತಿ ಅವರು (ಎ. ಎಸ್. ಮೂರ್ತಿ ಅವರ ಶ್ರೀಮತಿ) ಎಳೆಯ ಕಂದಗಳನ್ನು ಎತ್ತಿಕೊಂಡೇ ಹಳ್ಳಿ ಹಳ್ಳಿಗೆ ತಿರುಗುತ್ತಾ ಅಭಿನಯಿಸಿದರು. ಅದೇನು ಆಕೆ ಬಯಸಿ ಹೋದದ್ದಲ್ಲದಿರಬಹುದು, ಆದರೆ ಅಂಥ ಗೃಹಿಣಿಯರೂ ರಂಗದ ಮೇಲೆ ತೊಡಗುವಂಥ ಅನಿವಾರ್ಯತೆ ಆ ತಂಡಗಳಿಗಿದ್ದವು. ಆ ಕುಟುಂಬದಲ್ಲಿ ಈ ಕ್ಷಣದ ಗೌರಿ ದತ್ತು, ಕಿರಿಯಳಾದ ಸುಷ್ಮಾರವರೆಗೆ ಎಲ್ಲರೂ ರಂಗದಲ್ಲಿ ತೊಡಗಿದ್ದನ್ನು ಗಮನಿಸಿ. ಬಾಡಿಗೆ ಆಧಾರದ ಮೇಲೆ ಬರುತ್ತಿದ್ದ ಕೆಲ ವೃತ್ತಿಪರ ಕಲಾವಿದೆಯರನ್ನು ಸಂಭಾಳಿಸುವುದು ಕಷ್ಟವಾದ್ದರಿಂದ ಪರ್ಯಾಯವಾಗಿ ಕಂಡುಕೊಂಡ ವಿಧಾನ ಇದಾಗಿರಬಹುದು.

ಅನಂತರ ವರ್ಕ್‌ಶಾಪ್‌ಗಳು, ರಾಷ್ಟ್ರೀಯ ರಂಗಶಾಲೆ, ನೀನಾಸಂ, ರಂಗಾಯಣ, ಅಭಿನಯ ತರಂಗ ಮತ್ತಿತರ ರಂಗಶಾಲೆಗಳಿಂದ ಹೊಸ ಪೀಳಿಗೆ ರಂಗಭೂಮಿಗೆ ಬಂದಿದೆ; ಬರುತ್ತಿದೆ. ಅದೇ ರೀತಿ ಈಚೆಗೆ ಕಾಲೇಜು ರಂಗಭೂಮಿಯಿಂದಲೂ ಹೊಸ ಕಲಾವಿದೆಯರು ಬರುತ್ತಿದ್ದಾರೆ.

ಬಹುತೇಕ ಕಲಾವಿದೆಯರು ಆ ಕ್ಷಣದ ಸಮಸ್ಯೆಗೆ ಪರಿಹಾರವಾಗಿ ಬಂದರು. ಇಲ್ಲಿಯೇ ಉಳಿದುಕೊಂಡವರಿಗೆ ಅಭಿನಯವೊಂದೆ ಮುಖ್ಯವಾಯಿತು. ರಂಗ ಶಿಕ್ಷಣ ಪಡೆದವರಿಗೆ ಎಲ್ಲ ಬಗೆಯ ಶಿಕ್ಷಣ ಇದ್ದಾಗಲೂ ಅಭಿನಯವೇ ಮುಖ್ಯವಾಯಿತೇಕೆ ? ಇವರೇಕೆ ಇನ್ನಿತರ ರಂಗಕಾರ್ಯಗಳಲ್ಲಿ ತೊಡಗುತ್ತಿಲ್ಲ ಎಂಬುದು ಇನ್ನೂ ಪ್ರಶ್ನೆಯಾಗೇ ಇದೆ. ಒಂದಿಬ್ಬರು ವಸ್ತ್ರವಿನ್ಯಾಸ ಕ್ಷೇತ್ರದಲ್ಲಿ ತೊಡಗಿದ್ದನ್ನು ಬಿಟ್ಟರೆ, ಬಹುತೇಕರು ನಿರ್ದೇಶನವನ್ನು ಆರಿಸಿಕೊಂಡರಾಗಲೀ ಇನ್ನಿತರ ವಿಭಾಗಗಳಲ್ಲಿ ತೊಡಗಿದ್ದು ಕಡಿಮೆ. ಇದು ಉತ್ತರ ಭಾರತ, ಮಹಾರಾಷ್ಟ್ರ ಮೊದಲಾದ ಕಡೆಗೆ, ಅಷ್ಟೇಕೆ ಬೆಂಗಳೂರಿನ ಇಂಗ್ಲಿಷ್ ರಂಗಭೂಮಿಗೆ ಸಹ ಅನ್ವಯವಾಗುವ ಮಾತಲ್ಲ. ಕೇವಲ ಕನ್ನಡ ರಂಗಭೂಮಿ ಮಾತ್ರ ಈ ನೇಪಥ್ಯದ ಕಾರ್ಯಗಳಲ್ಲಿ ಸ್ತ್ರೀಯರನ್ನು ತೊಡಗಿಸಿಕೊಂಡಿಲ್ಲ ಅನ್ನಿಸುತ್ತದೆ.

ಹಿಂದೆ ಬುಟ್ಟಿ ನಾಗರತ್ನ ಅವರು ಬೇರೆ ಬೇರೆ ನೆಲೆಯಲ್ಲಿ ತೊಡಗಿದ್ದರು. ವಿಮಲಾ ರಂಗಾಚಾರ್ ಅನಿವಾರ್ಯವಾಗಿ ವಸ್ತ್ರವಿನ್ಯಾಸ ಮಾಡಿದ್ದರು. ರಾಣಿರಾವ್ ಎಂಬ ಮಹಿಳೆ ಚಿಕ್ಕಮಗಳೂರಿನಲ್ಲಿ ರಂಗಶ್ರೀ ಎಂಬ ತಂಡವನ್ನು ಪ್ರಾರಂಭಿಸಿ ಹಲವು ನಾಟಕಗಳನ್ನು ನಿರ್ದೇಶಿಸಿದ್ದರು. ಪ್ರತಿಭಾವಂತ ಮಹಿಳೆ. ಇವರ ತಂಡದಲ್ಲೇ ಸತ್ಯಸಂಧ ಎಂಬ ಕಲಾವಿದರಿದ್ದುದು. ಈ ತಂಡ ಪ್ರಯೋಗಿಸಿದ 'ತುಘಲಕ್', 'ಏವಂ ಇಂದ್ರಜಿತ್' ನಾಟಕಗಳು ಆ ಕಾಲಕ್ಕೇ ಬಹಳಷ್ಟು ಸುದ್ದಿ ಮಾಡಿದವು. ಬೆಂಗಳೂರಿನಲ್ಲಿ ಪ್ರದರ್ಶಿತವಾದ ರಾಣಿರಾವ್ ನಿರ್ದೇಶನದ 'ಡಾ|| ಫಾಸ್ಟಸ್' ಒಂದು ವಿಶಿಷ್ಟ ಪ್ರಯೋಗವಾಗಿತ್ತು. ಕೆಲವು ದೃಶ್ಯಗಳು ಇಂದಿಗೂ ಕಣ್ಣಿಗೆ ಕಟ್ಟುವಂತಿವೆ. ಬಹಳ ದಿನಗಳ ನಂತರ ಮರೆತೇ ಹೋದಂತಿದ್ದ ಕಲಾಕ್ಷೇತ್ರದ ರಂಗ ಮಂದಿರದ ಮುಂದಿನ 'ಪಿಟ್' ಬಳಕೆಯಾಗಿತ್ತು. ಆ ನಾಟಕದ ವಿಶೇಷವೆಂದರೆ ತುಂಬ ಸೊಗಸಾಗಿ ಬಳಸಲಾಗಿದ್ದ ಬೆಳಕು ವಿನ್ಯಾಸ. ಆ ನಾಟಕಕ್ಕೆ ಬೆಳಕನ್ನು ನಿರ್ವಹಿಸಿದ್ದ ಡಾ|| ಪರೇಶಕುಮಾರ್ ಅವರು ''ಪ್ರತಿಯೊಂದನ್ನೂ ರಾಣಿರಾವ್ ಅವರೇ ಡಿಸೈನ್ ಮಾಡಿ ಹೀಗೆ ಆಗಬೇಕೆಂದರು. ಅದರ ಯಶಸ್ಸು ನಿರ್ದೇಶಕಿ ರಾಣಿರಾವ್ ಅವರದೇ'' ಎನ್ನುತ್ತಾರೆ. ಆ ದಿನಗಳಲ್ಲಿ ರಾಣಿರಾವ್ ಅವರ ಹಾಗೆ ರಂಗಭೂಮಿಯಲ್ಲಿ ಆಳವಾಗಿ ತೊಡಗಿಕೊಂಡವರು ಅಪರೂಪ. ರಾಣಿರಾವ್ ಅನಂತರ ವಿದೇಶಕ್ಕೆ ತೆರಳಿದರು. ಜಪಾನಿನ 'ನೋ' ಥಿಯೇಟರ್‌ನಲ್ಲೂ ಕೆಲಸಮಾಡಿದ್ದರಂತೆ. ಈಗ ಯು.ಕೆ. ನಲ್ಲಿದ್ದಾರೆಂದು ಕೇಳಿದ್ದೇನೆ. ಇಂಥವರು ಇನ್ನೂ ಕೆಲವರು ಇರಬಹುದು. ಅವರ ಅನುಭವಗಳು, ಸಾಧನೆ ದಾಖಲಾಗಬೇಕು.

ವಸ್ತ್ರವಿನ್ಯಾಸದಲ್ಲಿ ಪ್ರೇಮಾ, ಜಯಂತಿ ಮೊದಲಾದವರಿದ್ದಾರೆ. ಸಂಗೀತ ವಿಭಾಗದಲ್ಲಿ ತೀರಾ ವಿರಳ. 'ಚಕೋರಿ' ನಾಟಕಕ್ಕೆ ಚಿತ್ರಾ ನೀಡಿದ್ದ ಸಂಗೀತ, ಒಂದೆರಡು ಸಂದರ್ಭಗಳಲ್ಲಿ ಸಮತಿಯ ಪ್ರಯತ್ನ ಬಿಟ್ಟರೆ ಉಳಿದಂತೆ ನಾಟಕಗಳಿಗೆ ಮಹಿಳೆಯರು ಸಂಗೀತ ನೀಡಿದ್ದು ತುಂಬಾ ಕಡಿಮೆ. ವಿನ್ಯಾಸ ಪ್ರಸಾಧನ, ರಂಗವಿನ್ಯಾಸ ಹೀಗೆ ಹಲವು ಕ್ಷೇತ್ರಗಳಲ್ಲಿ ಆಕೆಯ ನೇರಪ್ರವೇಶ ಇದ್ದಂತಿಲ್ಲ. ಇವೆಲ್ಲ ಆಕೆಗೆ ಅಸಾಧ್ಯದ ಸಂಗತಿಯಂತೂ ಅಲ್ಲ.

ಸ್ತ್ರೀಯರೇಕೆ ಹೆಚ್ಚಾಗಿ ಅಭಿನಯವನ್ನೇ ಅಂಟಿಕೊಳ್ಳುತ್ತಾರೆ ಎಂದಾಗ ಕೆಲವರು, ಇತರ ಕ್ಷೇತ್ರಗಳು ಬಹಳಷ್ಟು ಸಮಯ, ಶ್ರಮ ಬೇಡುತ್ತವೆ; ಅಭಿನಯ ಹಾಗಲ್ಲ ಮತ್ತು ಆಕೆಯ ಪ್ರದರ್ಶನಪ್ರಿಯ ಮನಸ್ಸಿಗೆ ಇಲ್ಲಿಯೇ ತೃಪ್ತಿ ಸಿಗಬಹುದು, ಎಂದು ಉತ್ತರಿಸಿದ್ದುಂಟು.

ಆದರೆ ನನಗೆ ಈ ಕಾರಣಗಳು ತೀರಾ ಹಾರಿಕೆಯವು ಅನ್ನಿಸುತ್ತದೆ. ಈ ಸಮಸ್ಯೆಯನ್ನು ಹೀಗೆ ವಿಶ್ಲೇಷಿಸಬಹುದೇನೋ : ಸಾಮಾನ್ಯವಾಗಿ 'ಆಕೆ' ಅಂತರ್ಮುಖಿ. ಅವಳಿಗೆ ಭಾವನೆಗಳ ಲೋಕವೇ ಪ್ರಿಯ. ಅವುಗಳ ಅಭಿವ್ಯಕ್ತಿಗೆ ಅಭಿನಯದಲ್ಲಿ ಅವಕಾಶ ಹೆಚ್ಚು. ನೇರವಾಗಿ ಹೇಳುವುದಕ್ಕೆ ಸಂಕೋಚ ಅಥವಾ ಸಾಮಾಜಿಕವಾದ ಭಯವೂ ಇರುತ್ತದೆ. ಹೀಗಾಗಿ ಪರಕಾಯ ಪ್ರವೇಶ ಮಾಡಿ ಇನ್ನೊಂದು ಪಾತ್ರದ ಭಾವನೆಗಳಿಗೆ ವಾಹಕವಾಗುವ ಮೂಲಕ ತನ್ನೊಳಗಿಗೂ ಸ್ಪಂದಿಸುತ್ತಾಳೆ. ಹೀಗಾಗಿ ಅಭಿನಯ ಅವಳಿಗೆ ಕೊಡುವ ಸಮಾಧಾನವೇ ಬೇರೆಯ ತೆರನಾದ್ದು ಮತ್ತು ಅದು ಏಕಕಾಲಕ್ಕೆ ಅವಳ ಏಕಾಂತವೂ ಹೌದು, ಬಿಡುಗಡೆಯೂ ಹೌದು. ಕಾವ್ಯ ರಚನೆ, ಚಿತ್ರ ರಚನೆಯಂಥ ಮಾಧ್ಯಮಗಳಲ್ಲೂ ಇಂಥ ಅಭಿವ್ಯಕ್ತಿ ವಿಧಾನವನ್ನು ಗುರುತಿಸಬಹುದಾಗಿದೆ. ಅವಳು ಅಮೂರ್ತ ಅಭಿವ್ಯಕ್ತಿಯಲ್ಲೇ ಬಿಡುಗಡೆಯ ನಿಟ್ಟುಸಿರನ್ನು ಬಿಡುತ್ತಾಳೆ, ಮತ್ತು ಅಂಥ ಅಭಿವ್ಯಕ್ತಿಯಲ್ಲಿ ಎಲ್ಲ ರೀತಿಯ ಸಂಕೀರ್ಣತೆಯನ್ನು (ಕಾಂಪ್ಲೆಕ್ಸಿಟಿ) ತರಬಲ್ಲಳು. ಧನ ಸಂಪಾದನೆ ಇಲ್ಲದಾಗಲೂ ಸಮಾಧಾನ ಕೊಡುವ ಸಂಗತಿಗಳಿವು.

ಇನ್ನುಳಿದ ಕೆಲಸಗಳು ಅಭಿವ್ಯಕ್ತಿಗಿಂತ ಭಿನ್ನ ಹಾಗೂ ಹೆಚ್ಚಾಗಿ ಅವರವರ ಆಯ್ಕೆಯ ಸಂಗತಿಗಳು.

ಆಕೆಗೆ ತಿಳಿದಿರುವಷ್ಟು ಮೇಕಪ್‌ನ ಅನುಭವ-ವಿವರಗಳು, ವಸ್ತ್ರವಿನ್ಯಾಸ, ಕಲರ್‌ಸೆನ್ಸ್ ಇತ್ಯಾದಿಗಳು ಪುರುಷನಿಗೆ ತಿಳಿದಿರುವುದು ಸಾಧ್ಯವೇ ಇಲ್ಲ. ಆತನಿಗೆ ಎಲ್ಲವೂ ಹೊರಗಿನ ಕಲಿಕೆಯ ಜ್ಞಾನವಾದರೆ ಅವಳಿಗೆ ಇದೆಲ್ಲ ಅಭಿಜಾತ. ಅದರೊಂದಿಗೆ ಅವಳ ಸೃಜನಶೀಲತೆಯೂ ಸೇರಿದರೆ... ಆಯ್ಕೆಯೇ ಆದಾಗ ಆಕೆ ಅದನ್ನು ವೃತ್ತಿಯಾಗಿ ಸ್ವೀಕರಿಸಿ ಬ್ಯೂಟಿ ಪಾರ್ಲರ್‌ಗೆ, ಡಿಸೈನಿಂಗ್ ಸೆಂಟರ್‌ಗೆ, ಇಂಟೀರಿಯರ್ ಡೆಕೋರೇಷನ್‌ಗೆ ಆದ್ಯತೆ ಕೊಡುತ್ತಾಳೆ. ಅಲ್ಲಿ ಅವಳ ಕಲಾವಂತಿಕೆಗೆ ಅವಕಾಶವಿದೆ; ವೃತ್ತಿಯಾಗಿ ಆದಾಯವೂ ಇದೆ. ಅದು ಅವಳಿಗೆ ವೈಯಕ್ತಿಕ ಅಭಿವ್ಯಕ್ತಿ ಆಗಲಾರದು. ಇಲ್ಲಿ ಕುಶಲತೆ ಇದೆಯಾಗಲೀ, ಭಾವಾಭಿವ್ಯಕ್ತಿಗೆ ನೇರವಾದ ಅವಕಾಶ ಕಡಿಮೆ. ಕಾಲದಿಂದ ಅವಳು ಹತ್ತಿಕ್ಕಲ್ಪಟ್ಟವಳು. ಸದಾ ನೇಪಥ್ಯಕ್ಕೆ ದೂಡಲ್ಪಟ್ಟವಳು. ಅವಳು ಆಯ್ಕೆ ಮಾಡಿಕೊಳ್ಳುವಾಗ ಮತ್ತೆ ನೇಪಥ್ಯಕ್ಕೆ ಸರಿಯುವ ಬದಲು ಮುಂಚೂಣಿಯಲ್ಲಿರುವ ಅಭಿನಯ, ನಿರ್ದೇಶನವನ್ನೂ ಆಯ್ದುಕೊಳ್ಳುವುದು ಅತ್ಯಂತ ಸಹಜ, ಸರಿ ಕೂಡಾ ಆಗುತ್ತದೆ. ಇಂಥ ಹಲವು ಮಗ್ಗಲುಗಳಿಂದ ಅವಳ ಮನಸ್ಸಿನ ಹಾಗೂ ಆಯ್ಕೆಯ ದಿಕ್ಕುಗಳನ್ನು ಇನ್ನಷ್ಟು ಆಳವಾಗಿ ಅಭ್ಯಾಸ ಮಾಡುವ ಅಗತ್ಯವಿದೆ.

ಈಚೆಗೆ ಏಕವ್ಯಕ್ತಿ ಪ್ರದರ್ಶನದತ್ತ ಮಹಿಳೆಯ ಗಮನ ಹರಿದಿದೆ. ಈ ತೊಡಗುವಿಕೆಗೆ

ಮೇಲುನೋಟಕ್ಕೆ ಅವಳದೇ ಆದ ಕೆಲವು ಕಾರಣಗಳನ್ನು ಕೊಡಬಹುದಾದರೂ ಅದೇ ಪರಮ ಸತ್ಯ ಎನ್ನಿಸುವುದಿಲ್ಲ. ಇದು ಹೆಚ್ಚು ಆಪ್ತವಾಗಲು ಬೇರೆ ಬೇರೆ ಕಾರಣಗಳಿರಬಹುದು.

ಪ್ರೊಸೀನಿಯಂನ ಚೌಕಟ್ಟಿನಲ್ಲೇ ಉಳಿದಿದ್ದ ಅವಳು ಅದರಿಂದಾಚೆಗೆ ಸಿಡಿದು ಬಂದಿದ್ದಾಳೆ. ಕಟ್ಟುಗಳು ಸಡಿಲುಗೊಂಡಿವೆ. ಅವಳದೇ ಮಾತು, ಅವಳದೇ ಸಮಸ್ಯೆ, ಅವಳದೇ ಆದ ಚಲನೆ, ಅವಳದೇ ಆದ ರಂಗ ಪರಿಕರ, ಅವಳದೇ ಆದ ಅಭಿವ್ಯಕ್ತಿ ವಿಧಾನ – ಇವೆಲ್ಲದರಿಂದ ಒಂದು ವಿಶಿಷ್ಟ ರೀತಿಯ ಬಿಡುಗಡೆ, ಸ್ವಾತಂತ್ರ್ಯ ದಕ್ಕುತ್ತಿದೆ. ಒಂದು 'ಫೆಮಿನಿಸ್ಟ್ ಥಿಯೇಟರ್'ನ ಉಗಮವಾಗುವ ಲಕ್ಷಣಗಳೂ ಇಲ್ಲಿ ಇವೆ. ಈ ದಿಕ್ಕಿನಲ್ಲಿ ಯೋಚಿಸಿದಾಗ ಇದಕ್ಕೆ ಅಗತ್ಯವಿರುವ ವಸ್ತು ಇನ್ನೂ ದಕ್ಕಿಲ್ಲ ಅನ್ನಿಸುತ್ತದೆ. ಒಬ್ಬ ವೆಂಕಟೇಶಮೂರ್ತಿಗಳ ಮಾತುಗಳಷ್ಟೇ ಸಾಲದು, ಅವಳದೇ ಸೃಷ್ಟಿ ಆಗಬೇಕು.

ಹಾಗೆ ನೋಡಿದರೆ ತನ್ನೊಳಗನ್ನು ಹೊರಹಾಕುವಂಥ ನಾಟಕಗಳು ಅವಳಿಂದ ಇನ್ನೂ ಹೊರಟಿಲ್ಲ. ಬಹುತೇಕ ಮಹಿಳೆಯರಿಂದ ರಚಿತವಾದ ನಾಟಕಗಳು ಯಾವುದೋ ಆ ಕ್ಷಣದ ಒತ್ತಡದಿಂದಾಗಿ ಆಗಿವೆ. ಅವು ಅವಳ ಒಳಗಿನ ಒತ್ತಡಗಳಾಗಿ ಮೂಡಿಬಂದದ್ದು ಕಡಿಮೆ. ಮತ್ತು ಬಹಳ ಸುಲಭವಾಗಿ ಅಂಥ ಪ್ರಯತ್ನಕ್ಕೆ ಆಕೆ ಇಳಿಯುವುದಿಲ್ಲ. ಈ ಹಿಂದೆಯೇ ಹೇಳಿದ ಹಾಗೆ ಅಮೂರ್ತವಾದ್ದಕ್ಕೆ ಒಲಿಯುವುದು ಅವಳ ಸ್ವಭಾವ (ಪೈಂಟಿಂಗ್, ಸಂಗೀತ, ಕಾವ್ಯರಚನೆ ಇತ್ಯಾದಿ). ಆದರೆ ಸಾಮಾಜಿಕ ಸಮಸ್ಯೆ, ಸಾರ್ವತ್ರಿಕ ಸಂಗತಿಗಳಿಗೆ ಬಹಳ ಬೇಗ ಸ್ಪಂದಿಸುತ್ತಾಳೆ. ದು. ಸರಸ್ವತಿ – ಚಿತ್ರಾ ಯುದ್ಧವಿರೋಧಿ ವಸ್ತುವನ್ನಾಯ್ದು ಇಬ್ಬರೇ ದೇಶ ಸುತ್ತಿ ನಾಟಕವಾಡಿ ಬಂದರು. ಕೆಲವು ಸ್ವಯಂ ಸೇವಾಸಂಸ್ಥೆಗಳ ಮಹಿಳೆಯರು ವರದಕ್ಷಿಣೆ, ಆಸಿಡ್ ದಾಳಿಯ ಪ್ರಕರಣ, ಮಹಿಳೆಯರ ಮೇಲಿನ ದೌರ್ಜನ್ಯವನ್ನು ವಿರೋಧಿಸುವ ವಸ್ತುಗಳನ್ನಾಧರಿಸಿ ಬೀದಿ ನಾಟಕವಾಡುತ್ತಾರೆ. ಇಂಥವು ಒಂದು ಕರಪತ್ರದ ಹಾಗೆ ಕೆಲಸ ಮಾಡುತ್ತವಾಗಲೀ ಅದಕ್ಕೊಂದು ಬಿಗಿಯಾದ ಬಂಧ-ಶಿಸ್ತು ಇರುವುದಿಲ್ಲ; ಒಂದು ಅನುಭವವನ್ನು ಕಟ್ಟಿಕೊಡಲಾರವು.

ಎಸ್. ಸಂಧ್ಯಾ 'ಹುಚ್ಚೀರಿಯ ಪ್ರಸಂಗ' ನಿರ್ದೇಶಿಸಿದ್ದರು. ನಾಟಕಗಳನ್ನು ರಚಿಸಿದರು. ವೈದೇಹಿ ಅವರೂ ನಾಟಕ ಬರೆದರೂ ಅದು ಒಂದು ತಂಡದ ಬೇಡಿಕೆಯ ಹಿನ್ನೆಲೆಯಿಂದಾದದ್ದು. ಆದರೆ ಅವರ ಕೃತಿ ಆಧರಿಸಿದ 'ಮಲ್ಲಿನಾಥ ಧ್ಯಾನ'ದಂಥ ನಾಟಕಗಳು ಅವರಿಂದ ಇನ್ನೂ ರಚನೆಯಾಗಬೇಕಿದೆ.

ಎಸ್. ಮಾಲತಿ ಅವರ ಪ್ರಯತ್ನಗಳು ಗಮನ ಸೆಳೆದಿವೆ. (ದು.ಸರಸ್ವತಿ ಅವರು ಆಗ – ಈಗ ಸಣ್ಣ ಚಿಮ್ಮಿಯಾಗಿ ವಿಭಿನ್ನ ಅಭಿವ್ಯಕ್ತಿಗೆ ಅವಕಾಶ ಮಾಡಿಕೊಂಡಿದ್ದಾರೆ.) ಎಸ್. ಮಾಲತಿ ಅವರು 'ಡಾಲ್ಸ್ ಹೌಸ್' ಅನ್ನು ಪ್ರಯೋಗಿಸಿದ್ದಾಗ ಆ ನಾಟಕದ ಅಂತ್ಯ ಬೇರೆಯೇ ಆಗಿತ್ತು. ಅಂಥ ಅಂತ್ಯ ಕೆಲವರಿಗೆ ಪ್ರಶ್ನೆಗಳನ್ನು ಉಳಿಸಿತ್ತು. ಆದರೆ ನಾಯಕಿ ಬಾಗಿಲು ಬಡಿದು ಹೊರಟುಹೋದರೂ, ಅನಂತರದ ಸಮಸ್ಯೆಗಳು ಮೊದಲಿನದಕ್ಕಿಂತಲೂ ಭಿನ್ನವೇನಲ್ಲ. ಆದ್ದರಿಂದ ಅವಳ ಅಧಿಕಾರವನ್ನ ಅಲ್ಲೇ ಸ್ಥಾಪಿಸಬೇಕು ಎಂಬಂಥ ವ್ಯಾಖ್ಯಾನವೂ ಸಾಧ್ಯ. ಇದು ಸಿ.ಜಿ.ಕೆ. ನಿರ್ದೇಶನದ 'ಸನ್ನಿವೇಶ'ದ ಅಂತ್ಯಕ್ಕಿಂತ ಭಿನ್ನವಾದ ಆಲೋಚನೆ.

ಎಸ್. ಮಾಲತಿ

ಕೆಲವೊಮ್ಮೆ ನಾಟಕಕಾರರೂ ಸ್ತ್ರೀಪರವಾಗಿ ಅಥವಾ ಪರಕಾಯ ಪ್ರವೇಶ ಮಾಡಿ ನಾಟಕಗಳನ್ನು ರಚಿಸಿದ್ದಿದೆ. ಅಂಥ ಎಲ್ಲವೂ ಸಂಪೂರ್ಣವಾಗಿ ಒಪ್ಪಿತವೆಂದಲ್ಲ. ಅಕ್ಷರಮಟ್ಟಿಗೆ 'ಅವಳ' ಪರವಾಗಿದ್ದವು ಎನ್ನಬಹುದು. ಶ್ರೀರಂಗರ ಕೆಲವು ನಾಟಕಗಳು, ಅದರಲ್ಲೂ 'ಹಳೆಯ ನಾನು ಗೆಳೆಯ ನೀನು' ನಾಟಕದ ಅಂತಿಮ ತಿರುವು, ಕೈಲಾಸಂ ಅವರ 'ಗಂಡಸ್ಕತ್ರಿ', ಲಂಕೇಶರ 'ಸಂಕ್ರಾಂತಿ'ಯ ಉಷೆಯ ಪಾತ್ರ, ಕಾರ್ನಾಡರ ಯಯಾತಿಯ ಸ್ತ್ರೀಪಾತ್ರ ಹೀಗೆ ಹಲವನ್ನು ಪಟ್ಟಿ ಮಾಡಬಹುದು. ಚಂದ್ರಶೇಖರ ಕಂಬಾರರಲ್ಲಿ ಸಂಕೀರ್ಣತೆ ಹೆಚ್ಚು. ನಮಗೆ 'ನಾಗಮಂಡಲ'ಕ್ಕಿಂತ 'ಸಿರಿಸಂಪಿಗೆ' ಚೆನ್ನ ಅನ್ನಿಸುವುದೇ ಈ ಸಂಕೀರ್ಣತೆಯ ಕಾರಣದಿಂದ. ಕಂಬಾರರ ಬಹುತೇಕ ನಾಟಕಗಳು ಸ್ತ್ರೀಪರವಾಗಿವೆ. ಅವರು ಗೌಡ – ಸಾಹುಕಾರನ ಪಾತ್ರ ಚಿತ್ರಣದಲ್ಲಿ ಎಷ್ಟು ಪರವಶಗೊಳ್ಳುತ್ತಾರೆಂದರೆ ನಾಟಕ ನೋಡಿದ ಪ್ರೇಕ್ಷಕನ ಮನಸ್ಸಿನಲ್ಲಿ ಉಳಿಯುವುದು ಸ್ತ್ರೀಪಾತ್ರಗಳಾಗದೇ ಅಸಮರ್ಥನಾದರೂ ಗೌಡನೇ ಉಳಿಯುತ್ತಾನೆ! ಸಿಂಗಾರೆವ್ವನಾಗಲಿ, ಜೈಸಿದ ನಾಯಕನಾಗಲಿ, ಕಾರ್ನಾಡರ ಹಯವದನವಾಗಲಿ, ತಲೆದಂಡವಾಗಲಿ ಅಂತಿಮವಾಗಿ ವಿಜೃಂಭಿಸುವುದು ಪುರುಷ ಪಾತ್ರಗಳೇ.

ಶ್ರೀರಂಗರು ನಾಟಕದ ಸನ್ನಿವೇಶವೊಂದರ ಬಗ್ಗೆ ಹೀಗೆ ವಿವರಿಸುತ್ತಾರೆ :

ನಾಟಕದಲ್ಲಿ ಮುದುಕನೊಬ್ಬ ಸಂತಾನ ಪ್ರಾಪ್ತಿಗಾಗಿ ಮದುವೆಯಾಗುವ ಪ್ರಯತ್ನದಲ್ಲಿದ್ದಾನೆ. ಪಾತ್ರವೊಂದು

''ಈ ವಯಸ್ಸಲ್ಲಿ ಮಕ್ಕಳು ಹೇಗಾಗುತ್ತದೆ ?'' ಎನ್ನುತ್ತದೆ.

''ನೆರೆ ಹೊರೆಯವರ ಕೃಪೆಯಿಂದ'' ಅನ್ನುತ್ತಾನೆ. ಈ ಉತ್ತರಕ್ಕೆ ಇಡೀ ಪ್ರೇಕ್ಷಾಂಗಣ ನಗೆಗಡಲಲ್ಲಿ ಮುಳುಗುತ್ತದೆ. ಇಂಥಲ್ಲಿ ಹಾಸ್ಯಕ್ಕಾಗಿ ಯಾರನ್ನೋ ಅಪಮಾನಿಸುತ್ತಿದ್ದೇವೆ ಎಂಬ ಪ್ರಜ್ಞೆಯೂ ಇರುವುದಿಲ್ಲ. ಇಂಥ ಪ್ರವೃತ್ತಿಯನ್ನು ಕುರಿತು ಶ್ರೀರಂಗರು ''ಮಾನವನ ಹೃದಯದೊಳಗಿನ ಹೊಲಸನ್ನು ಚೇತರಿಸುವುದು ಕಲೆಯಲ್ಲ'' ಎನ್ನುತ್ತಾರೆ.

ಶ್ರೀರಂಗರು ವರದಕ್ಷಿಣೆಯ ಸಮಸ್ಯೆಯನ್ನೆತ್ತಿಕೊಂಡು ಬರೆದ ನಾಟಕ ಸ್ತ್ರೀಯರ ಸಲಿಂಗ ಕಾಮದ ಕಾರಣವನ್ನು ಮುಂದಿಡುತ್ತದೆ. ಅಂಥದೊಂದು ಆಲೋಚನೆ ಶಾಕ್ ಕೊಡಬಹುದಾಗಲೀ ವರದಕ್ಷಿಣೆ ಸಮಸ್ಯೆಗೆ ಅದೇ ಕಾರಣ ಆಗುವುದಿಲ್ಲವಲ್ಲ.

'ಒಡಲಾಳ'ದಂಥ ಕೃತಿ ರಂಗರೂಪ ಪಡೆವವರೆಗೆ ಇನ್ನೊಂದು ಜಾತಿ-ವರ್ಗದ ಒಳನೋಟಗಳು ಈ ಬಗೆಯಲ್ಲಿ ಕನ್ನಡ ರಂಗ ಭೂಮಿಯಲ್ಲಿ ಅನಾವರಣಗೊಂಡೇ ಇರಲಿಲ್ಲ. ಮುಂದೆ ಸ್ತ್ರೀ-ದಲಿತರ ಸಮಸ್ಯೆ, ಒಳತೋಟಿ, ನೋವು-ನಲಿವುಗಳತ್ತ ಗಮನಹರಿಸುವಂಥ ನಾಟಕಗಳು ಕಾಣಿಸಿಕೊಳ್ಳತೊಡಗಿದವು ಎನ್ನಬಹುದು. ಇಂಥ ಸಮಸ್ಯೆಗಳನ್ನು ಅಭಿವ್ಯಕ್ತಿಸುವ ಎಲ್ಲ ಕೃತಿಗಳಲ್ಲೂ ಒಂದು ಅನುಭವವಾಗಿ ಸಂವಹನವಾಗಿದೆಯೇ, ಅದೊಂದು ಕರಪತ್ರ ಅಥವಾ ಘೋಷಣೆಯ ಹಂತದಲ್ಲಿ ನಿಂತುಬಿಡುತ್ತಿದೆಯೇ ?

ಏಕವ್ಯಕ್ತಿ ಪ್ರಸ್ತುತಿಗಳಲ್ಲಿ ಇಂಥ ಅಪಾಯ ಹೆಚ್ಚು. 'ಉರಿಯ ಉಯ್ಯಾಲೆಯ' ದ್ರೌಪದಿಯ ಮಾತುಗಳೆಲ್ಲ 'ಪರ್ಸನಲ್ ಈಸ್ ಪೊಲಿಟಿಕಲ್' ಎಂಬ ಸ್ತ್ರೀವಾದಿ ಹೇಳಿಕೆಗೆ ಹತ್ತಿರವಾಗುತ್ತವಾದರೂ ಸ್ತ್ರೀ ತನ್ನ ಬದುಕಿನ ಬಗ್ಗೆ ಸದಾ ಗೋಳಾಡುವುದಿಲ್ಲ. ಹಮ್ಮು ಬಿಮ್ಮಿನ ಸಂಗತಿಗಳೂ ಇರುತ್ತವೆ. ಐವರು ಪತಿಯರನ್ನು ಪಡೆದೂ ಸಮಾಜದಲ್ಲಿ ಗಣ್ಯಳಾಗಿ ಮೆರೆವ, ಯಾರಿಗೂ ಇಲ್ಲದ ಸವಲತ್ತು ತನ್ನದೆಂದು ದ್ರೌಪದಿ ಕ್ಷಣವಾದರೂ ಚಿಂತಿಸಲಾರಳೇ ? ಲಕ್ಷ್ಮಿ ಚಂದ್ರಶೇಖರ್ 'ಹೆಣ್ಣಲ್ಲವೇ ?' ಪ್ರಸ್ತುತಿಯಲ್ಲಿ ಸ್ತ್ರೀಯೊಳಗಿನ ಛಲವನ್ನು ಉಕ್ಕಿಸುವುದಕ್ಕಿಂತ ಕೇಸ್ ಹಿಸ್ಟರಿ ಅಥವಾ ಕರಪತ್ರದ ಗುಣವೇ ಅಧಿಕವಲ್ಲವೇ ? ಹೀಗೆ ಹಲವು ಪ್ರಶ್ನೆಗಳೂ ನಮ್ಮೆದುರಿಗಿವೆ. ಆಗಿರುವ ಕೆಲಸಗಳ ಜೊತೆಗೆ ಆಗಬೇಕಾದ ಕೆಲಸಗಳು ಮತ್ತು ಸಮಸ್ಯೆಗಳನ್ನು ನಿವಾರಿಸಿಕೊಳ್ಳುತ್ತಲೇ ಅಭಿವ್ಯಕ್ತಿ ಮಾಧ್ಯಮವನ್ನು ಹೊಸದಾಗಿ ರೂಪಿಸಿಕೊಳ್ಳಬೇಕಾಗಿದೆ. ಈ ಹಿನ್ನೆಲೆಯಲ್ಲಿ ಏಕವ್ಯಕ್ತಿ ಪ್ರಸ್ತುತಿ ಗಮನಾರ್ಹ.

ಆ ಪ್ರಸ್ತುತಿಗಳ ಮೂಲಕ ಅವಳಿಂದಲೇ ಅವಳ ಒಳಗು ತೆರೆದುಕೊಳ್ಳುವುದು ಮುಖ್ಯ. ನಿರೂಪಣೆ-ಅಭಿವ್ಯಕ್ತಿ ಸತ್ತ್ವಯುತವಾಗಬೇಕಾದರೆ ಅವಳ ಒಳಗನ್ನು ಅವಳೇ ತೆರೆದಿಡಬೇಕು. ಅವಳು ಸತ್ತ್ವಶಾಲಿಯಾದ ಪ್ರಕಾರವನ್ನು ತನ್ನದಾಗಿಸಿಕೊಳ್ಳದೇ ಹೋದರೆ ಎಂಥ ವಿಷಯವನ್ನೂ ತನ್ನ ಅನುಕೂಲಕ್ಕೆ ತಕ್ಕಹಾಗೆ ವ್ಯಾಖ್ಯಾನಿಸಿ, ರೂಪಿಸಿ ಸ್ವಾಮ್ಯ ಸ್ಥಾಪಿಸುವ ಪುರುಷವರ್ಗ ಇದನ್ನೂ ಅನಾಮತ್ತಾಗಿ ಎತ್ತಿಕೊಂಡುಬಿಡಬಹುದು. ಈ ದಿಕ್ಕಿನಲ್ಲಿ ರಂಗಭೂಮಿಯಲ್ಲಿ ಸಕ್ರಿಯವಾಗಿರುವ ಕಲಾವಿದೆಯರು ಗಂಭೀರವಾಗಿ ಯೋಚಿಸಬೇಕು.

* * *

ಸಾಮಾನ್ಯವಾಗಿ ಬೇರೆ ಬೇರೆ ಕ್ಷೇತ್ರಗಳಲ್ಲಿ ಮಹಿಳೆಯ ಮೇಲೆ ನಡೆಯುವ ದೌರ್ಜನ್ಯ ಕುರಿತು ಚರ್ಚೆಯಾಗುತ್ತದೆ. ರಂಗಭೂಮಿಯಲ್ಲಿ ಮಹಿಳೆಯರ ಮೇಲಿನ ಕ್ರೌರ್ಯ ಎಂಥದ್ದು ಎಂದು ಆಲೋಚಿಸುವಾಗ, ವೃತ್ತಿ ರಂಗಭೂಮಿಯ ಬಗೆಗಾದರೆ ಬಣ್ಣ ಬಣ್ಣವಾಗಿ ಹೇಳುತ್ತಾರೆ. ಹವ್ಯಾಸಿ ರಂಗಭೂಮಿಯ ಮಾತಿಗೆ ಬಂದರೆ ಮೇಲುನೋಟಕ್ಕೆ ಎಲ್ಲವೂ ಚಂದವೆ. ಆ ಬಗ್ಗೆ ಕೆಲವು ಅಭಿನೇತ್ರಿಯರ ಬಳಿ ಚರ್ಚಿಸಿದಾಗಲೂ ಸಮರ್ಪಕ ಉತ್ತರ ಸಿಗಲಿಲ್ಲ. 'ಸುಶಿಕ್ಷಿತರೇ ಹೆಚ್ಚಾಗಿ ಇರುವುದರಿಂದ ಇಲ್ಲಿ ಕ್ರೌರ್ಯದಂಥ ವಿಷಯಕ್ಕೆ ಅವಕಾಶವಿಲ್ಲ' ಎಂಬಂಥ ಮಾತುಗಳು ಕೇಳುತ್ತವೆ. ಆದರೆ ಮಾತು ಬೆಳೆಸುತ್ತ ಹೋದಾಗ ಅನುಭವ, ಘಟನೆಗಳನ್ನು ವಿವರಿಸುವಾಗ ಶಬ್ದಗಳ ನಡುವೆ ವಿಷಾದದ ಎಳೆಯೊಂದು ಇಣಿಕಿಹಾಕುತ್ತದೆ. ಅಲ್ಲೆಲ್ಲ ತನ್ನ ಪ್ರತಿಭೆಯನ್ನು ಹತ್ತಿಕ್ಕುವ ಪ್ರಯತ್ನ ನಡೆದಿರಬಹುದು ಎಂಬುದನ್ನು ಸ್ಪಷ್ಟವಾಗಿ ಗುರುತಿಸಲು ಆಕೆಗೆ ಸಾಧ್ಯವಾಗುತ್ತಿಲ್ಲ.

ಈ ಹೊತ್ತು ಪ್ರಸಿದ್ಧಿಯನ್ನು ಪಡೆದಿರುವ ಕೆಲವೇ ಪ್ರತಿಭಾವಂತೆಯರು ಹತ್ತಿಕ್ಕುವ ಶಕ್ತಿಗಳನ್ನು ನಿರ್ಲಕ್ಷಿಸಿ ಮುಂದೆ ಸಾಗಬಲ್ಲ ಸಮರ್ಥರಾದ್ದರಿಂದ ಉಳಿದುಕೊಂಡಿದ್ದಾರೆ.

ಹಾಗಿಲ್ಲವಾದರೆ ಅವರುಗಳನ್ನು ತುಂಬ ಜಾಣತನದಿಂದಲೇ ಹಿಂದೆ ಸರಿಸಲಾಗುತ್ತಿತ್ತು.

ಪ್ರೇಮಾ ಕಾರಂತ, ಬಿ. ಜಯಶ್ರೀ, ಎಸ್. ಮಾಲತಿ, ಮಂಗಳಾ, ಉಷಾ ಮೊದಲಾದ ರಂಗಾಯಣದ ಕಲಾವಿದೆಯರು – ಹೀಗೆ ಒಂದಷ್ಟು ಪಟ್ಟಿಮಾಡುತ್ತ ಹೋಗಬಹುದು.

ಅದೆಷ್ಟೇ ಹೊಸ ಪ್ರಯೋಗ, ಸಾಧನೆ ಮಾಡಿದಾಗಲೂ ಹೊಸತನ್ನು ಗುರುತಿಸದೇ ಮೌನ ವಹಿಸುವುದೂ ಕ್ರೌರ್ಯದ ಒಂದು ಮುಖ. ಇನ್ನು ಬೇರೆಲ್ಲ ವಲಯಗಳಿಗಿಂತ ಮಿಗಿಲಾಗಿ ವೈಯಕ್ತಿಕ ಸಂಗತಿಗಳನ್ನು ವೈಭವಿಸಿದ ಬಹಿರಂಗ ಅಪಪ್ರಚಾರ ಕೂಡ ಮಾಡುವ ಮೂಲಕ ಪ್ರತಿಭಾವಂತೆಯರ ಉತ್ಸಾಹವನ್ನು ಇದ್ದಲ್ಲೇ ಅಡಗಿಸುವ ಅಥವಾ ಸ್ವತಂತ್ರ ಅವಕಾಶಗಳು ಸಿಗದಹಾಗೆ ಮಾಡುವುದು ಕೂಡ ಕ್ರೌರ್ಯವೇ. ಬಿ. ಜಯಶ್ರೀ ಏಕಾಂಗಿಯಾಗಿ ನಿಂತು ರಂಗಭೂಮಿಯಲ್ಲಿ ಹೊಸತನ್ನು ಸಾಧಿಸಿದರು. ಆಕೆ ಸಿದ್ಧಪಡಿಸಿದ 'ನಾಗಮಂಡಲ'ದ ರಂಗಕೃತಿ ಸ್ತ್ರೀಪರ ದೃಷ್ಟಿಕೋನದ್ದಾಗಿತ್ತು. ಬಿ. ಜಯಶ್ರೀಗೆ ವೈಯಕ್ತಿಕ ಸಮಸ್ಯೆಗಿಂತ ಆಕೆಯ ಸಾಧನೆಯ ಬಗ್ಗೆ ದಿವ್ಯ ನಿರ್ಲಕ್ಷ್ಯ ತೋರುವ ಬಗೆ ಆಕೆಯನ್ನು ಖಿನ್ನಳಾಗಿಸುತ್ತದೆ. ಹೆಣ್ಣುತನ – ಜಾತಿ ಎರಡೂ ತನ್ನ ಪ್ರಗತಿಯನ್ನು ಹತ್ತಿಕ್ಕುತ್ತವೆ ಎನ್ನುತ್ತಾರಾಕೆ. ಎಸ್. ಮಾಲತಿ ರಂಗ, ವೈಯಕ್ತಿಕ ಬದುಕುಗಳೆರಡರಲ್ಲೂ ಅಗ್ನಿದಿವ್ಯವನ್ನೇ ಎದುರಿಸಿದರು. ಬಹುತೇಕರ ಅನುಭವ ಇದಕ್ಕಿಂತ ಭಿನ್ನವಲ್ಲ.


ಎಸ್. ಮಂಗಳಾ

'ಸುಶಿಕ್ಷಿತವಲಯ'ವಾದ್ದರಿಂದ ಅತ್ಯಂತ ಸೂಕ್ಷ್ಮ ನೆಲೆಯಲ್ಲಿ, ಅದು ತನ್ನ ಮೇಲೆ ಆಗುತ್ತಿರುವ ವ್ಯವಸ್ಥಿತ ಸಂಚು, ದೌರ್ಜನ್ಯ ಎಂದು ಅರ್ಥವೇ ಆಗದ ಹಾಗೆ ನಡೆಯುತ್ತಿರುತ್ತದೆ.

ಇನ್ನು ಹವ್ಯಾಸಿ ರಂಗಭೂಮಿಯಲ್ಲಿ ಅವಳಿಗೆ ಹಲವು ಸಂಗತಿಗಳಿಗೆ ಟ್ಯಾಬೂ ಇದೆ. ರಂಗಾಯಣದಲ್ಲಿ 'ಅಕ್ಕ' ಉತ್ಸವ ನಡೆದಾಗ ಕೆಲವು ಮಹಿಳಾ ತಂಡಗಳು ಅಪರೂಪದ ಪ್ರತಿಭೆಯನ್ನು ಮೆರೆದವು. ಅಂಥ ತಂಡಗಳಲ್ಲಿದ್ದ ಸ್ತ್ರೀಯರ ಬದುಕಿನ ಬಗ್ಗೆ, ಅವರು ಸಿಗರೇಟು ಸೇದಿದ ಬಗ್ಗೆ ಮಾಡಿದಷ್ಟು ಸುದ್ದಿ, ಹರಟೆಗಳನ್ನು ಅವರ ಪ್ರಯೋಗಗಳ ಬಗ್ಗೆ ಮಾಡದೆ ಗೌಣವಾಗಿಸಲಾಯಿತು. ಇದು ಹವ್ಯಾಸಿ ರಂಗಭೂಮಿಯ ಮಹಿಳೆಯ ಸ್ವಾತಂತ್ರ್ಯವೆ? ನಾವು ಇಟ್ಟಹಾಗೆ ಸ್ತ್ರೀ ಇರಬೇಕೆಂಬ ಅಘೋಷಿತ ತಾಕೀತಲ್ಲವೇ?

ಇವೆಲ್ಲವೂ ಅನಾವರಣಗೊಳ್ಳಬೇಕು. ಹೇಳುವ ಮಾತಿಗೆ ಸರಿಯಾದ ಕ್ಯಾನ್ವಾಸ್ ಬೇಕು. ಆದ್ದರಿಂದಲೇ ಫೆಮಿನಿಸ್ಟ್ ಥಿಯೇಟರ್‌ನ ಪರಿಕಲ್ಪನೆಯೊಂದು ಇನ್ನಾದರೂ ರೂಪುಗೊಳ್ಳುವ ಅಗತ್ಯವಿದೆ. ಕಲಾವಿದೆಯರು ರಂಗತಜ್ಞೆಯರು ಈ ದಿಕ್ಕಿನಲ್ಲಿ ಯೋಚಿಸಬೇಕು.

ಸ್ತ್ರೀವಾದಿ ಚಿಂತಕರು ಅನೇಕ ಪ್ರಕಾರಗಳಲ್ಲಿ ಆಗಿರುವ ಕೆಲಸಗಳನ್ನು ಬಗೆದು ಪುನರ್ನಿರ್ಮಿಸುವ ಕಾರ್ಯ ಕೈಗೊಂಡಿದ್ದಾರೆ. ರಂಗಮಾಧ್ಯಮದತ್ತಲೂ ಆ ಬಗೆಯ ಗಮನ ಹರಿಸಬೇಕು. ರಂಗಭೂಮಿಯಲ್ಲಿ ವಸ್ತು, ನಿರೂಪಣಾ ತಂತ್ರ, ಭಾಷೆ ಇತರ ಪ್ರಕಾರಗಳು ಸೇರಿದಂತೆ ಎಲ್ಲವನ್ನೂ ಬಗೆದು ತೆಗೆಯಬೇಕಾಗಿದೆ. ಹೊಸದಾಗಿ ಕಟ್ಟುವ ಕೆಲಸವೂ ಆಗಬೇಕಿದೆ. ಇನ್ನಾದರೂ ಅಂಥ ಕೆಲಸ ಪ್ರಾರಂಭವಾಗಬೇಕು. ಈಗ ಆ ಬಗೆಯ ಎಚ್ಚರ ಮೂಡುತ್ತಿದೆ. ಸಮರ್ಥರು ರಂಗಕ್ಕೆ ಬರುತ್ತಿದ್ದಾರೆ. ಆಗಬೇಕಾದ ಕೆಲಸಕ್ಕೆ ಭೂಮಿಕೆಯಂತೂ ಇದೆ. ಮಾಧ್ಯಮಾಸಕ್ತರು ಇತ್ತ ಗಮನ ಹರಿಸಬೇಕು.

(ಕರ್ನಾಟಕ ನಾಟಕ ಅಕಾಡೆಮಿಯು ಆಯೋಜಿಸಿದ್ದ ವಿಚಾರ ಸಂಕಿರಣದಲ್ಲಿ ಮಂಡಿತವಾದ ಪ್ರಬಂಧ. 'ಅಂತರಂಗ' ತಂಡದ ರಜತಾಂತರಂಗ ಸ್ಮರಣ ಸಂಚಿಕೆಯಲ್ಲಿ ಪ್ರಕಟವಾಗಿದೆ.)

**ಡಾ॥ ವಿಜಯಾ**
ಇಳಾ ಪ್ರಿಂಟರ್ಸ್, ನಂ. ೩೬, ೪೦ ಅಡಿ ರಸ್ತೆ, ರಾಘವನಗರ,
ನ್ಯೂ ಟಿಂಬರ್ ಯಾರ್ಡ್ ಲೇಔಟ್, ಬೆಂಗಳೂರು - ೫೬೦ ೦೨೬

## ಸೂಫಿ

ಅಲ್ಲಿ ದಿಗಂತದ
ದೂರವೆಂಬೊ ದೂರದಲ್ಲಿ
ಇಲ್ಲಿ ಮನಸಿನ
ಆಳವೆಂಬೋ ಆಳದಲ್ಲಿ
ಅವನು ಕೂಗಿ ಹೇಳುತ್ತಿದ್ದ,
"ನಿನಗೆ ಕಿಚ್ಚನ್ನ ಬೆಳಕು
ಮಾಡುವ ಕಾಯಕ ಗೊತ್ತೆ ?
ಬಾ, ಕಲಿಸಿಕೊಡುತ್ತೇನೆ !"

ಕಾಯಕದಂಬಲದಲ್ಲಿ
ತಂಬೆಲರ ಬಯಕೆಗಳೆಲ್ಲಾ
ತಾಯ್ತನವಾಗಿ
ಮಡಿಲು ತುಂಬಿದ್ದು ಏನಚ್ಚರಿ ?

ಅವನ ವಿಶಾಲ ಎದೆಯ ಮೇಲೆ
"ಮಕ್ಕಳಾಡುತ್ತಿದ್ದವು !"
ತ್ರಿವಿಧ ದಾಸೋಹದರಮನೆಯಲ್ಲಿ
ಶರಣ ಸಂಕುಲ ಪ್ರೀತಿ ಹಂಚುತ್ತಿತ್ತು
ಆನಂದ ಹರಡುತ್ತಿತ್ತು.

ಮಂದಿರ, ಮಸೀದಿ, ಚರ್ಚುಗಳ,
ಸಂಕರದ ಸಂಕ್ರಾಂತಿಯಲ್ಲಿ
ಲೋಕದ ಜಡಕರಗಿ ನೀರಾಗಿದ್ದು
ಅವನಿಗೆ 'ಲಿಂಗಮಜ್ಜನ !'



ಶರಣಸತಿಗೆ ಪತಿಯಾದ
ಪರಮ ಗುರುವು !
ಆತ್ಮ ಸಂಗಾತದ
ಬುದ್ಧ ಅರಿವು !!

**ಬಿ. ಸಿ. ಶೈಲಾ ನಾಗರಾಜ್**
'ಶೈನಾ', ೨ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ವಿಜಯನಗರ
ತುಮಕೂರು - ೫೭೨ ೧೦೩

# ಮಹಾನ್ ಪ್ರಜಾಪ್ರಭುತ್ವವಾದಿ ಡಾ|| ಅಂಬೇಡ್ಕರ್

*ಡಾ|| ಅಂಬೇಡ್ಕರ್ ಅವರು ಸದಾ ಕಾಲಕ್ಕೂ ಎಲ್ಲ ದೇಶಗಳಿಗೂ ಅನ್ವಯವಾಗುವಂತಹ ಒಂದು ಎಚ್ಚರಿಕೆಯನ್ನು ಕೊಟ್ಟಿರುತ್ತಾರೆ. ಅದೆಂದರೆ, ''ಸಂವಿಧಾನ ಒಂದು ಎಷ್ಟೇ ಉತ್ತಮವಾದುದಾದರೂ ಅದನ್ನು ಕಾರ್ಯಗತಗೊಳಿಸುವವರು ಕೆಟ್ಟ ಜನರಾಗಿದ್ದರೆ ಅದರ ಪರಿಣಾಮ ಕೆಟ್ಟದ್ದೇ ಆಗುವುದೆಂದೂ, ಹಾಗೂ ಸಂವಿಧಾನ ಎಷ್ಟೇ ಕೆಟ್ಟದ್ದಾಗಿದ್ದರೂ ಅದರ ಕಾರ್ಯಾಚರಣೆಗೊಳಿಸುವ ಜನ ಒಳ್ಳೆಯವರಾಗಿದ್ದರೆ ಅದರ ಪರಿಣಾಮ ಒಳ್ಳೆಯದೇ ಆಗುವುದೆಂದು ಹೇಳಲು ಯಾವ ಪ್ರವಾದಿಯೂ ಬೇಕಾಗಿಲ್ಲ'' ಎಂದಿರುವರು. ಇದು, ನಾವಿಂದು ಇರುವ ಸಾಮಾಜಿಕ-ರಾಜಕೀಯ-ಆರ್ಥಿಕ ಪರಿಸ್ಥಿತಿಯಲ್ಲಿ ಅಂತಃಕರಣಪೂರ್ವಕವಾಗಿ ಪರ್ಯಾಲೋಚಿಸಬೇಕಾದ ವಿಷಯ.*



**ಸಿ. ಎಚ್. ಜಾಕೋಬ್ ಲೋಬೊ**

೧೮೯೧ರ ಏಪ್ರಿಲ್ ೧೪ರಂದು ಮಿಲಿಟರಿ ಶಾಲೆಯ ಮುಖ್ಯೋಪಾಧ್ಯಾಯರಾದ ಸುಬೇದಾರ್ ರಾಮ್‌ಜಿ ಮಲ್ಹೋಜಿ ಸಕ್ಪಾಲ್ ಮತ್ತು ಶ್ರೀಮತಿ ಭೀಮಾಬಾಯಿ ಅವರ ಹದಿನಾಲ್ಕನೆಯ ಮಗುವಾಗಿ ಡಾ|| ಭೀಮ್‌ರಾವ್ ರಾಮ್‌ಜಿ ಅಂಬೇಡ್ಕರ್ ಮಧ್ಯಪ್ರದೇಶದ ಮ್ಹಾವು ಎಂಬಲ್ಲಿ ಜನಿಸಿದರು. ೨೦೦೬ರ ಏಪ್ರಿಲ್ ೧೪ಕ್ಕೆ ಅಂಬೇಡ್ಕರ್ ಅವರ ೧೧೫-೧೧೬ರ ಜನ್ಮೋತ್ಸವ.

ಡಾ|| ಅಂಬೇಡ್ಕರ್ ಅವರ ಜೀವನ ಸಾಧನೆ ಅನನ್ಯ, ಅನುರೂಪ ಹಾಗೂ ಅನುಕರಣೀಯ. ಆ ವಿವರಗಳನ್ನು ಅವರ ಆಪ್ತ ಕಾರ್ಯದರ್ಶಿಗಳಾಗಿದ್ದ ಶ್ರೀ ಧನಂಜಯ ಕೀರ್ ಅವರು ಬರೆದಿರುವ ಅವರ ಜೀವನ ಚರಿತ್ರೆಯಲ್ಲಿ ಕಂಡುಕೊಂಡು ಜೀವನದಲ್ಲಿ ಉತ್ತಮ ಆದರ್ಶಗಳನ್ನು ಅಳವಡಿಸಿಕೊಳ್ಳಬಹುದು. ಅವರ ಕುಟುಂಬವು ಜಾತ್ಯತೀತ ಕಬೀರ್ ಪಂಥಕ್ಕೆ ಸೇರಿದ್ದರೂ ಸಂಪ್ರದಾಯವಾದಿ ಸಮಾಜದಲ್ಲಿ ಅಸ್ಪೃಶ್ಯ ಮಹಾರ್ ಜಾತಿಯವರಾಗಿದ್ದರು.

ಡಾ|| ಅಂಬೇಡ್ಕರ್ ಅವರು ಅಗಾಧ ವಿದ್ಯಾಪಾರಂಗತ ಖನಿ. ಅವರ ಪದವಿಗಳು ಅಪಾರ. ಮುಂಬಯಿ ಎಲ್ಫಿನ್‌ಸ್ಟನ್ ಕಾಲೇಜಿನ ಪದವೀಧರ. ಕೊಲಂಬಿಯ ವಿಶ್ವವಿದ್ಯಾಲಯದ ಅರ್ಥಶಾಸ್ತ್ರದಲ್ಲಿ ಎಂ.ಎ. ಅದೇ ವಿಶ್ವವಿದ್ಯಾಲಯದ ಪಿಹೆಚ್.ಡಿ. ಪದವಿ; ಭಾರತ ಪ್ರಾಂತ್ಯಗಳ ಆರ್ಥಿಕ ವಿಕಸನ ವಿಷಯಕ್ಕೆ, ಬ್ರಿಟಿಷ್ ಇಂಡಿಯಾದ ಬ್ರಿಟನ್ ಆರ್ಥಿಕತೆಯ ಪ್ರಾಂತೀಯ ವಿಕೇಂದ್ರೀಕರಣ ಲೇಖನಕ್ಕೆ ಲಂಡನ್ ವಿಶ್ವವಿದ್ಯಾಲಯದ ಎಮ್ಮೆಸ್ಸಿ ಪದವಿ. ರೂಪಾಯಿಯ ಸಮಸ್ಯೆ ಕೃತಿಗೆ ಲಂಡನ್ ವಿಶ್ವವಿದ್ಯಾಲಯದ ಡಾಕ್ಟರ್ ಆಫ್ ಸೈನ್ಸ್ ಪದವಿ. ಲಂಡನ್ನಿನ ಬಾರ್-ಎಟ್-ಲಾ ಉತ್ಕೃಷ್ಟ ಕಾನೂನು ಪದವಿ. ಜರ್ಮನಿಯ ಬಾನ್ ವಿಶ್ವವಿದ್ಯಾಲಯದಲ್ಲಿ ವ್ಯಾಸಂಗ ಮಾಡಿದವರು. ಅವರ ಸರ್ವತೋಮುಖಿ ಸಮಾಜಮುಖಿ ಪ್ರತಿಭೆಗಳೆಲ್ಲ ಅಪಾರವಾದ ಶಿಸ್ತುಬದ್ಧ ಜ್ಞಾನಾರ್ಜನೆಯ ತಳಹದಿಯಲ್ಲಿ ರೂಪುಗೊಂಡವುಗಳು. ಯೂರೋಪ್ ಮತ್ತು ಅಮೆರಿಕಾದ ವಿಶ್ವವಿದ್ಯಾಲಯಗಳನ್ನೂ ಅಲ್ಲಿನ ಜನಜೀವನವನ್ನೂ ನೋಡಿ ಅವುಗಳ ಆಳ ಹರವುಗಳನ್ನು ಅರಿತುಕೊಂಡ ಅಂಬೇಡ್ಕರ್ ಅವರಿಗೆ ತಮ್ಮ ತಾಯ್ನಾಡಿನ ಸಮಾಜದ ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಬದಲಾವಣೆ ತರಮಾಡುವ ಬಗೆಗೆ ಎಲ್ಲಿಲ್ಲದ ಕಾತರ, ಉತ್ಕಟೇಚ್ಛೆ. ಅದಕ್ಕಾಗಿ ಅವರು ಅವಿರತ ಶ್ರಮಿಸಿದರು. ಅರಿತುಕೊಳ್ಳಲು ಅಸಮರ್ಥರಾದ ಸಂಪ್ರದಾಯವಾದಿಗಳಿಗೆ ಅವರೊಬ್ಬ ಅಸ್ಪೃಶ್ಯರ ಮುಂದಾಳಾಗಿ ಮಾತ್ರ ಕಾಣಿಸುತ್ತಾರೆ. ಆದರೆ ಅವರೊಬ್ಬ ಮಹಾಮಾನವತಾವಾದಿ. ಅಸದೃಶ ರಾಷ್ಟ್ರಪ್ರೇಮಿ. ಜೀವನದ ಒಪ್ಪ ಓರಣಗಳಷ್ಟೇ ಅಲ್ಲದೆ ನಿಸ್ಪೃಹ, ತೆರೆದ ಹೃದಯದ ಆಶಾವಾದಿ. ಎಲ್ಲ ಶೋಷಿತರ ಸಂರಕ್ಷಣೆಯ ಹರಿಕಾರ. ಕಾರ್ಮಿಕರ, ಮಹಿಳೆಯರ, ಕೃಷಿಕೂಲಿಗಳ, ಗುಡ್ಡಗಾಡು ಜನರ, ಹಿಂದುಳಿದವರ, ಅಲ್ಪಸಂಖ್ಯಾತರ, ಅಲೆಮಾರಿಗಳ, ಅಸ್ಪೃಶ್ಯರ, ದಾಸ್ಯಗಳ ವಿರೋಧವಿದ್ದ ಅವರು ಅನನ್ಯ ಪ್ರಗತಿಗಾಮಿಯಾಗಿದ್ದರು. ನಿಜವಾಗಿಯೂ ಅವರ ಧ್ಯೇಯ ಧೋರಣೆಗಳಿಗೆ ವಿರೋಧ ಸಾಧ್ಯವೇ ಇಲ್ಲ. ಡಾ|| ಬಾಬಾಸಾಹೇಬ್ ಶೋಷಣೆಯ ಶತ್ರು, ಮಾನವೀಯತೆಯ ಮಿತ್ರ. ಮೀಸಲಾತಿ ವಿರೋಧ ೫೫ ವರ್ಷಗಳ ಸ್ವಾತಂತ್ರ್ಯದ ನಂತರವೂ 'ಬ್ಯಾಕ್‌ಲಾಗ್' ಬಡಿದಾಟದಲ್ಲಿ ನಿರತವಾಗಿದೆ.

ಅಸ್ಪೃಶ್ಯತೆಯ ಬವಣೆಗಳನ್ನೆಲ್ಲ ಅನುಭವಿಸಿ ಸಮಾನತೆಯ ಸೌಂದರ್ಯವನ್ನು ಸವಿದಿದ್ದ ಅಂಬೇಡ್ಕರ್ ಅವರು ಒಮ್ಮೆ ಮಹಾತ್ಮಾ ಗಾಂಧಿ ಅವರ ಜತೆ ನಡೆಸಿದ ವಾಗ್ವಾದವೊಂದರಲ್ಲಿ ''ನನ್ನ ಜನರಿಗೊಂದು ಮಾತೃಭೂಮಿ ಇಲ್ಲ'' ಎಂದು ಹೇಳಿ ದಂಗುಬಡಿಸಿದ್ದರು. ಗಾಂಧೀಜಿ ಅವರು ''ಇದೇ ನಿಮ್ಮ ಜನ್ಮಭೂಮಿ'' ಎಂದು ಮನವರಿಕೆ ಮಾಡಿಕೊಡಲು ಇನ್ನಿಲ್ಲದಂತೆ ಹೆಣಗಿದ್ದರು. ಗಾಂಧಿ ಅವರಿಗೆ ಅಂಬೇಡ್ಕರ್ ಅವರ ವಾದಗಳು, ಭಾರತೀಯ ಸಾಮಾಜಿಕ ಪರಿಸ್ಥಿತಿ, ಅನಕ್ಷರತೆ, ದಾರಿದ್ರ್ಯ ಹಾಗೂ ದಾಸ್ಯದ ಪರಿಚಯ ಚೆನ್ನಾಗಿಯೇ ಇತ್ತು. ಹಾಗೆಯೇ ಮೂರು ದುಂಡು ಮೇಜಿನ ಪರಿಷತ್ತುಗಳಲ್ಲಿ ಅಂಬೇಡ್ಕರ್ ಅವರ ನೈಜಕಾಳಜಿಗಳನ್ನೂ ವಿದ್ವತ್ತನ್ನೂ ಪ್ರತ್ಯಕ್ಷ ಕಂಡುಕೊಂಡಿದ್ದರು. ಅಸ್ಪೃಶ್ಯತೆ ಮತ್ತು ದಾಸ್ಯ ಭಾವಗಳ ಉಚ್ಚಾಟನೆ ಹಾಗೂ ಸಮಾನತೆ ಮತ್ತು ಭ್ರಾತೃಭಾವಗಳ ನಿಜವಾದ ಅಳವಡಿಕೆಯಂತಹ ವಿಷಯಗಳಲ್ಲಿ ಇಬ್ಬರಿಗೂ ಅಂತರಾಳದ ಸಮಸಮವಾದ ಉತ್ಕಟ ಇಚ್ಛೆ ಒಂದೇ ಆಗಿತ್ತು. ವ್ಯತ್ಯಾಸವೆಂದರೆ ದಾಸ್ಯ ತೊಡೆದುಹಾಕಿದ ಮೇಲೆ ಸ್ವಾತಂತ್ರ್ಯಕ್ಕಾಗಿ ಹೋರಾಡಬಹುದು ಎಂಬುದು ಅಂಬೇಡ್ಕರ್ ವಾದವಾದರೆ, ಸ್ವಾತಂತ್ರ್ಯ ಪಡೆದುಬಿಟ್ಟರೆ ನಮ್ಮ ಸಮಸ್ಯೆಗಳನ್ನೆಲ್ಲಾ ನಾವು ಬಗೆಹರಿಸಿಕೊಳ್ಳಬಹುದು ಎಂಬ ಆಶಾವಾದ ದಿವ್ಯವ್ಯಕ್ತಿತ್ವದ ಗಾಂಧೀಜಿ ಅವರ ಸ್ಪಷ್ಟ, ಸತ್ಯನಿಷ್ಠ ಅಭಿಪ್ರಾಯ. ಸ್ವಾತಂತ್ರ್ಯ ಪಡೆದು ಐವತ್ತು ವರ್ಷ ದಾಟಿದ ಇಂದು ದಾಸ್ಯ, ಜಾತೀಯತೆ ನೋಡಿದಾಗ ಡಾ|| ಅಂಬೇಡ್ಕರ್ ಅವರ ಅಭಿಪ್ರಾಯ ಎಷ್ಟೊಂದು ಸತ್ಯ ಎಂಬುದು ನಿಚ್ಚಳವಾಗುತ್ತದೆ. ದೇಶವು ಸ್ವಾತಂತ್ರ್ಯವನ್ನು ಇಡಿ ಇಡಿಯಾಗಿ ಒಪ್ಪಿಕೊಂಡು ಬಳಸಿಕೊಳ್ಳುತ್ತಿದ್ದರೂ, ಸಮಾನತೆ ಪ್ರಶ್ನೆಯನ್ನು ಅರಗಿಸಿಕೊಳ್ಳಲೇ ಇಲ್ಲ. ಭ್ರಾತೃಭಾವವನ್ನು ತಿರಸ್ಕೃತ ದೃಷ್ಟಿಯಿಂದಲೇ ಕಾಣುತ್ತಿದ್ದೇವೆ. ಈ ಪರಿಸ್ಥಿತಿಯಲ್ಲಿ ಗಾಂಧಿ-ಅಂಬೇಡ್ಕರ್ ಅವರ ದೃಷ್ಟಿಕೋನಗಳನ್ನು ಸರಿ-ತಪ್ಪು ಎಂದು ಹೇಳುವ ಸಂದರ್ಭ ಒದಗಿಬಂದೀತೇ ? ಸಾಮಾಜಿಕ ಪರಿವರ್ತನೆ ಎಷ್ಟೊಂದು ದೂರ ಉಳಿದಿದೆ !



ಅಂದು ಡಾ|| ಅಂಬೇಡ್ಕರ್ ಅವರಿಗೆ ಉಂಟಾದ ಉಭಯಸಂಕಟಗಳ ಪರಿಸರ ಹೇಗಿತ್ತೆಂದರೆ ಒಂದು ಕಡೆ ಒಡೆದು ಆಳುವ ಕುಟಿಲ ನೀತಿಯ ಬ್ರಿಟಿಷರು. ಸ್ವರಾಜ್ಯಕ್ಕೆ ಗಂಟುಬಿದ್ದಿದ್ದ ಏಕೈಕ ರಾಷ್ಟ್ರೀಯ ಪಕ್ಷ ಕಾಂಗ್ರೆಸ್ ಇನ್ನೊಂದು ಕಡೆ. ತಮ್ಮ ಜನ ಕಳೆದುಕೊಂಡಿದ್ದ ಮಾನವೀಯ ಹಕ್ಕುಗಳನ್ನು ಗಳಿಸುವ ಗುರಿ. ಅಲ್ಲೇ ಬಿರುಗಣ್ಣಿಂದ ದುರುಗುಟ್ಟುತ್ತಿರುವ ಪರಿ ಎದುರುಗಡೆ. ತಮ್ಮ ಜನರನ್ನು ಶತ ಶತಮಾನಗಳಿಂದ ಸಾಂಸ್ಕೃತಿಕ ಆರ್ಥಿಕ ಸ್ವಾತಂತ್ರ್ಯದಿಂದ ಹೊರತುಪಡಿಸಿ ದಮನಕ್ಕೊಳಗುಮಾಡಿದ ಮನುವಾದಿ ಸವರ್ಣೀಯರ ಕುಹಕತೆ ಹಿಂದುಗಡೆ. ಎಲ್ಲೂ ಇಲ್ಲದ ಭಯಂಕರ ಸಾಮಾಜಿಕ ಪರಿಸ್ಥಿತಿ. ಎಂಥವರನ್ನೂ ದಿಗಿಲುಗೊಳಿಸುವ ಪರಿಸರ. ಬ್ರಿಟಿಷರು ಉಂಟುಮಾಡಿದ ಪರಿಸ್ಥಿತಿ ಏನಲ್ಲ! ಧ್ಯೇಯೋದ್ದೇಶಗಳು ಎಷ್ಟೇ ಉದಾತ್ತವೂ ನ್ಯಾಯಬದ್ಧವೂ ಆಗಿದ್ದರೂ ಹೋರಾಟಮಾಡುವ ಪರಿಸರಣವಂತೂ ಅಲ್ಲವೇ ಅಲ್ಲ. ಇಂತಹ ಸಮಯದಲ್ಲಿ ಡಾ|| ಅಂಬೇಡ್ಕರ್ ಅವರು ಎದುರಿಸಿದ ಎಡರುತೊಡರುಗಳು, ಸಂದಿಗ್ಧಗಳು, ಕಷ್ಟಕಾರ್ಪಣ್ಯಗಳು, ತಂತ್ರಕುತಂತ್ರಗಳು, ಅರ್ಥವಿಲ್ಲದ ಮುಗುಳ್ನಗೆಗಳ ಹಿಂದಣ ಕುಹಕಗಳು, ಆರ್ಥಿಕ ಸಂಕಷ್ಟಗಳು, ಕೌಟುಂಬಿಕ ಇಕ್ಕಟ್ಟುಗಳು, ಆರೋಗ್ಯ ಹಾನಿ, ಒಂದೆರಡಲ್ಲ. ಈ ಮುಳ್ಳಿನ ಹಾದಿಯಲ್ಲಿ ಸಿಕ್ಕುಬಿಡಿಸಿಕೊಂಡು, ಸಡ್ಡುಹೊಡೆದು ಪ್ರತಿಪಟ್ಟಿಗೆ ತಕ್ಕ ತೋಡುಹಾಕಿ ಗೆದ್ದು ಗುರಿಮುಟ್ಟಿದ ವೀರ, ಧೀರ ಸಮಾಜೋದ್ಧಾರಕ ಡಾ|| ಅಂಬೇಡ್ಕರ್. ದಿಕ್ಕುಗೆಟ್ಟಿದ್ದ ಸಮಾಜದಲ್ಲಿ ನವಚೇತನ ಮೂಡಿಸಲು ಆದರ್ಶವಾದಿ ಭಾರತೀಯರಿಗೆ ಮಾರ್ಗದರ್ಶನವಾಗಿ ಅತ್ಯಂತ ಉತ್ಕೃಷ್ಟವಾದ ಅಂಶಗಳನ್ನೊಳಗೊಂಡ ಭಾರತ ಸಂವಿಧಾನವನ್ನು ರಚಿಸಿದರು. ಇದು ಹಲವು ರಾಷ್ಟ್ರಗಳ ಸಂವಿಧಾನಗಳಲ್ಲಿ ಒಳಗೊಂಡ ಸಮರ್ಪಕ ಅಂಶಗಳನ್ನು ಭಾರತದ ಪರಿಸರಣಕ್ಕೆ ಸರಿಹೊಂದುವಂತೆ ಸೇರಿಸಿಕೊಂಡು ನಿರ್ಮಾಣವಾದ ಸಂವಿಧಾನ. ಉಳಿದಿರುವುದೊಂದೇ ಭಾಗ – ಕೃತಿಯಲ್ಲಿ ಕಾರ್ಯಸಾಧನೆ, ಉಲ್ಲೇಖಿಸಿರುವ ವಿಧಿವಿಧಾನದಲ್ಲಿ ಸಮಾಜ ಪುನರ್ನಿರ್ಮಾಣಕ್ಕೆ ತೊಡಗುವಿಕೆ.

ಕರಡು ಸಂವಿಧಾನ ರಚನಾ ಸಮಿತಿಯಲ್ಲಿ ಸಮಿತಿಯ ಅಧ್ಯಕ್ಷ ಡಾ|| ಅಂಬೇಡ್ಕರ್ ಜೊತೆಗೆ ಶ್ರೀ ಎನ್. ಮಾಧವರಾವ್, ಶ್ರೀ ಸೈಯದ್ ಸಾದುಲ್ಲಾ, ಶ್ರೀ ಅಲ್ಲಾಡಿ ಕೃಷ್ಣಸ್ವಾಮಿ ಅಯ್ಯರ್, ಸರ್ ಬಿ. ಎನ್. ರಾವ್, ಶ್ರೀ ಎಸ್. ಎಸ್. ಮುಖರ್ಜಿ ಮತ್ತು ಶ್ರೀ ಜುಗಲ್ ಕಿಶೋರ್ ಖನ್ನ ಅವರುಗಳು ನೇಮಿತರಾಗಿದ್ದರು. ೧೯೪೭ರ ಆಗಸ್ಟ್ ೨೯ರಂದು ನೇಮಿತವಾದ ಈ ಸಮಿತಿಯ ಅಧ್ಯಕ್ಷರು ೧೯೪೮ರ ಫೆಬ್ರವರಿಯಲ್ಲಿ ಕರಡುಪ್ರತಿಯನ್ನು ಸಂವಿಧಾನ ರಚನಾ ಸಭೆಯ ಅಧ್ಯಕ್ಷರಾದ ಡಾ|| ರಾಜೇಂದ್ರಪ್ರಸಾದರಿಗೆ ಒಪ್ಪಿಸಿದರು. ನೇಮಕಗೊಂಡ ಸಮಿತಿ ಸದಸ್ಯರಲ್ಲಿ ಒಬ್ಬರು ರಾಜೀನಾಮೆ ಕೊಟ್ಟಿದ್ದರು. ಒಬ್ಬರು ಮರಣಹೊಂದಿದ್ದರು. ಒಬ್ಬರು ಅಮೆರಿಕಾಕ್ಕೆ ಹೋಗಿದ್ದರು. ಇನ್ನೊಬ್ಬರು ತಮ್ಮ ಪ್ರಾಂತ್ಯದ ರಾಜಕೀಯದಲ್ಲಿ ತಲ್ಲೀನರಾಗಿದ್ದರು. ಉಳಿದವರು ದೆಹಲಿಯಿಂದ ದೂರವಿದ್ದು ಅನಾರೋಗ್ಯದಿಂದಾಗಿ ಈ ಕೆಲಸದಲ್ಲಿ ಭಾಗಿಯಾಗದೆ ಉಳಿದಿದ್ದರು. ಹೀಗಾಗಿ ಕರಡು ಸಂವಿಧಾನ ರಚನಾ ಕಾರ್ಯ ಸಂಪೂರ್ಣ ಡಾ|| ಅಂಬೇಡ್ಕರ್ ಅವರ ಮೇಲೆ ಬಿದ್ದಿತು. ಈಗಲೂ ಹಲವಾರು ಸಮಿತಿಗಳ ಅಧ್ಯಕ್ಷರುಗಳೇ ನಿರ್ವಹಿಸಿದ ಕೆಲಸಗಳನ್ನು ಹೇಗೋ ನಿಭಾಯಿಸುತ್ತಾರೆ. ಇದೊಂದು ಜಾಯಮಾನವೇ ಆಗಿದೆ. ಹೇಗೂ ಕಷ್ಟಪಟ್ಟು ಮುಗಿಸಿದ ಅಮೋಘವಾದ ಕೆಲಸಕ್ಕಾಗಿ ಡಾ|| ಅಂಬೇಡ್ಕರ್ ಅವರು 'ಭಾರತ ಸಂವಿಧಾನ ನಿರ್ಮಾತೃ' ಎಂಬ ಕರೆಗೆ ಭಾಜನರಾದರು.

ಇಲ್ಲೊಂದು ಮಾತು. ಗಾಂಧಿ-ಅಂಬೇಡ್ಕರ್ ಸಾಮರಸ್ಯ ಸಾದೃಶ್ಯಕ್ಕೆ ಒಂದು ಅಷ್ಟು ಪ್ರಚಲಿತದಲ್ಲಿಲ್ಲದ ಕಥೆ. ಒಂದು ಸಂಜೆ ಗಾಂಧೀಜಿಯವರನ್ನು ಕಾಣಬಂದಿದ್ದ ನೆಹರು ಮತ್ತು ಸರೋಜಿನಿ ನಾಯಿಡು ಅವರುಗಳು ಖಿನ್ನರಾಗಿದ್ದು ಕಂಡುಬಂತು. ಕಾರಣ ಅವರು ಸಂವಿಧಾನ ರಚನಾ ಸಮಿತಿಗೆ ಬೇಕಾದ ಸಂವಿಧಾನತಜ್ಞನನ್ನು ಆರಿಸುವಲ್ಲಿ ಸೋತು ಹೋಗಿದ್ದಂತೆ ತಿಳಿಯಿತು. ಹಲವು ದೇಶಗಳ ಸಂವಿಧಾನಗಳನ್ನು ರಚಿಸಿದ್ದ ಸರ್ ಐವರ್ ಜೆನ್ನಿಂಗ್ಸ್ ಎಂಬ ವಿದೇಶೀಯ ಸಂವಿಧಾನ ತಜ್ಞರ ಹೆಸರು ಸೂಚಿಸಿ ಅವರನ್ನು ಕರೆಸುವ ಆಲೋಚನೆ ಅವರದಾಗಿತ್ತು. ಗಾಂಧೀಜಿ ಅವರು ಆ ಸ್ಥಾನಕ್ಕೆ ಡಾ|| ಅಂಬೇಡ್ಕರ್ ಅವರ ಹೆಸರನ್ನು ಸೂಚಿಸಿ ಆ ವಿಷಯ ಮುಗಿಸಿದ್ದರು. ಏನೇ ಭಿನ್ನಾಭಿಪ್ರಾಯಗಳಿದ್ದರೂ ಗಾಂಧೀಜಿ ಅವರಿಗೆ ಡಾ|| ಅಂಬೇಡ್ಕರ್ ಅವರ ದೇಶಪ್ರೇಮದಲ್ಲೂ ದಕ್ಷತೆಯಲ್ಲೂ ಪ್ರಾಮಾಣಿಕತೆಯಲ್ಲೂ ಅಸದೃಶ ಜ್ಞಾನಾರ್ಜನೆಯಲ್ಲೂ ಸಂಪೂರ್ಣ ನಂಬಿಕೆ ಇತ್ತು. ಆ ನಂಬಿಕೆಯನ್ನು ತಮ್ಮ ಅಮೋಘ ಕಾರ್ಯಪ್ರವೃತ್ತತೆಯಿಂದ ಮಾಡಿಕೊಟ್ಟ ಪ್ರಗತಿಪರ ಕರಡು ಸಂವಿಧಾನದ ಮೂಲಕ ಡಾ|| ಅಂಬೇಡ್ಕರ್ ಅವರು ದೃಢಪಡಿಸಿಕೊಟ್ಟರು.

ಡಾ|| ಅಂಬೇಡ್ಕರ್ ಅವರು ಸದಾ ಕಾಲಕ್ಕೂ ಎಲ್ಲ ದೇಶಗಳಿಗೂ ಅನ್ವಯವಾಗುವಂತಹ ಒಂದು ಎಚ್ಚರಿಕೆಯನ್ನೂ ಕೊಟ್ಟಿರುತ್ತಾರೆ. ಅದೆಂದರೆ, "ಸಂವಿಧಾನ ಒಂದು ಎಷ್ಟೇ ಉತ್ತಮವಾದುದಾದರೂ ಅದನ್ನು ಕಾರ್ಯಗತಗೊಳಿಸುವವರು ಕೆಟ್ಟ ಜನರಾಗಿದ್ದರೆ ಅದರ ಪರಿಣಾಮ ಕೆಟ್ಟದ್ದೇ ಆಗುವುದೆಂದೂ, ಹಾಗೂ ಸಂವಿಧಾನ ಎಷ್ಟೇ ಕೆಟ್ಟದ್ದಾಗಿದ್ದರೂ ಅದರ ಕಾರ್ಯಾಚರಣೆಗೊಳಿಸುವ ಜನ ಒಳ್ಳೆಯವರಾಗಿದ್ದರೆ ಅದರ ಪರಿಣಾಮ ಒಳ್ಳೆಯದೇ ಆಗುವುದೆಂದು ಹೇಳಲು ಯಾವ ಪ್ರವಾದಿಯೂ ಬೇಕಾಗಿಲ್ಲ" ಎಂದಿರುವರು. ಇದು, ನಾವಿಂದು ಇರುವ ಸಾಮಾಜಿಕ-ರಾಜಕೀಯ-ಆರ್ಥಿಕ ಪರಿಸ್ಥಿತಿಯಲ್ಲಿ ಅಂತಃಕರಣಪೂರ್ವಕವಾಗಿ ಪರ್ಯಾಲೋಚಿಸಬೇಕಾದ ವಿಷಯ.

ಇದಕ್ಕೊಂದು ಪೂರಕ ವ್ಯಾಖ್ಯಾನವನ್ನೂ ಕೊಡಬಹುದು. ಯೂರೋಪ್ ಕ್ರಾಂತಿಗೆ ಕಾರಣಕರ್ತರಾದವರಲ್ಲಿ ಒಬ್ಬನಾದ ರೂಸೋ ಅವರ ಅಭಿಪ್ರಾಯ. ಅವರ ಪ್ರಸಿದ್ಧ ಆತ್ಮಚರಿತ್ರೆ 'ಕನ್ಫೆಷನ್ಸ್'ನಲ್ಲಿ ಒಂದು ಕಡೆ ಹೀಗೆಂದಿದ್ದಾರೆ: "ವಿದ್ಯಾವಂತರು ಎಲ್ಲೆಲ್ಲೂ ಕಾಣಿಸಿಕೊಳ್ಳ ತೊಡಗಿದಾಗ ಪ್ರಾಮಾಣಿಕರೇ ಕಾಣಸುತ್ತಿಲ್ಲ ಎಂದು ತತ್ವಜ್ಞಾನಿಗಳು ಹೇಳಿಕೊಳ್ಳುತ್ತಿದ್ದಾರೆ. ಶಿಕ್ಷಣ ಮನುಷ್ಯನನ್ನು ಒಳ್ಳೆಯವನನ್ನಾಗಿ ಮಾಡುತ್ತಿಲ್ಲ. ಅವನನ್ನು ಚತುರನನ್ನಾಗಿ ಮಾಡುತ್ತಿದೆ. ಅದೂ ಕೇಡು ಎಸಗುವುದಕ್ಕಾಗಿ" ಎಂದಿದ್ದಾರೆ. ಗಮನಿಸಿ. ೧೮ನೇ ಶತಮಾನದ ಮಾರ್ಮಿಕ ವ್ಯಾಖ್ಯಾನವಿದು.

ಭಾರತ ಸಂವಿಧಾನ ಭಾರತದ ಸಾಂಸ್ಕೃತಿಕ ಪುನರುಜ್ಜೀವನದ ದ್ಯೋತಕ. ಆಧುನಿಕ ಭಾರತಕ್ಕೆ ಡಾ|| ಅಂಬೇಡ್ಕರ್ ಅವರು ಈ ಸಂಪದ್ಭರಿತ ಕೊಡುಗೆಯನ್ನು ನೀಡಿ ೧೯೫೬ರ ಡಿಸೆಂಬರ್ ೬ರಂದು ಕಾಲವಶರಾದರು. ಜೀವನದುದ್ದಕ್ಕೂ ಅವರು ಭಾರತದಲ್ಲಿ

೫೦ನೇ ಪುಟಕ್ಕೆ




ತಾರೀಖು ೧೧.೦೩.೨೦೦೬ರಂದು ನವಕರ್ನಾಟಕ ಮತ್ತು ಕನ್ನಡ ವೈದ್ಯಸಾಹಿತ್ಯ ಪರಿಷತ್ತು ಏರ್ಪಾಟು ಮಾಡಿದ್ದ ಸಮಾರಂಭದಲ್ಲಿ ನವಕರ್ನಾಟಕದ ಮೂರು ವೈದ್ಯಕೀಯ ಪುಸ್ತಕಗಳ ಲೋಕಾರ್ಪಣೆ ನಡೆಯಿತು. 'ಹಲ್ಲಿನ ರಕ್ಷಣೆ' (ಡಾ|| ಗುರುರಾಜ ಅರಕೇರಿ), 'ಬಸಿರು' (ಡಾ|| ಎಚ್. ಗಿರಿಜಮ್ಮ) ಮತ್ತು 'ಕ್ಯಾನ್ಸರ್ ಯಾರಿಗೆ ಮತ್ತು ಏಕೆ ಬರುತ್ತದೆ?' (ಪ್ರೊ|| ಎ. ರಮೇಶ ರಾವ್) ಈ ಮೂರು ಕೃತಿಗಳನ್ನು ಡಾ|| ಸಿ. ಆರ್. ಚಂದ್ರಶೇಖರ್ ಅನಾವರಣಗೊಳಿಸಿದರು. ಡಾ|| ನಾ. ಸೋಮೇಶ್ವರ ಪುಸ್ತಕಗಳ ಪರಿಚಯ ಮಾಡಿಕೊಟ್ಟರು. ಡಾ|| ಬಿ. ಜಿ. ಬೆನಕಪ್ಪ ಅಧ್ಯಕ್ಷತೆ ವಹಿಸಿದ್ದರು. ಕೃತಿಗಳ ಲೇಖಕರು ಉಪಸ್ಥಿತರಿದ್ದರು.

# ಉಸಿರಾಟದ ಹೊಸ ಶಿಕ್ಷಕರು



ಹಲವು ವರ್ಷಗಳ ಹಿಂದೆ, ಅದೊಂದು ದಿನ, ಟಿವಿಯಲ್ಲಿ ಪ್ರಸಾರವಾಗುತ್ತಿದ್ದ ಒಂದು ಕಾರ್ಯಕ್ರಮವನ್ನು ವೀಕ್ಷಿಸುತ್ತಿದ್ದೆ. ಯಾವುದೋ ಚಾನೆಲ್‌ನಿಂದ ಆಂಗ್ಲ ಮಹಿಳೆಯೊಬ್ಬಳು ಕೇಸರಿ ವಸ್ತ್ರಗಳನ್ನು ಧರಿಸಿ, ಯೋಗಾಸನದಲ್ಲಿ ಕುಳಿತು, 'ಓಂ' ಶಬ್ದದ ಮಹಿಮೆಯನ್ನು ಆಂಗ್ಲ ಭಾಷೆಯಲ್ಲಿ ಬಣ್ಣಿಸುತ್ತಿದ್ದಳು. ವೈದ್ಯನಾದ ನನಗೆ ಸಹಜವಾಗಿಯೇ ಈ ಕಾರ್ಯಕ್ರಮದಲ್ಲಿ ಆಸಕ್ತಿ ಮೂಡಿ ತದೇಕ ಚಿತ್ತದಿಂದ ವೀಕ್ಷಿಸಲಾರಂಭಿಸಿದೆ.

''ನೀವು ಪ್ರತಿಬಾರಿಯೂ 'ಓಂ' ಎಂದು ಉಚ್ಚರಿಸುವಾಗ, ಈ ಶಬ್ದದ ಮೂರು ಭಾಗಗಳಾದ ಅ, ಉ ಮತ್ತು ಅಂ ಗಳನ್ನು ಉಚ್ಚರಿಸುತ್ತಿರುತ್ತೀರಿ. ಓಂ ಎಂಬ ಮಹಾ ಶಬ್ದದ ಈ ಮೂರೂ ಉಪಸ್ವರಗಳಿಗೆ ತಮ್ಮದೇ ಆದ ವೈಶಿಷ್ಟ್ಯವಿದೆ. ಈ ಮೂರೂ ಉಪಸ್ವರಗಳು ನಮ್ಮ ಉಸಿರಾಟದಲ್ಲಿ ಮಹತ್ತರ ಪಾತ್ರವಹಿಸುತ್ತವೆ. ಓಂ ಶಬ್ದವನ್ನು ಉಚ್ಚರಿಸುವಾಗ, ಈ ಶಬ್ದದ ಮೊದಲ ಸ್ವರವು ನಾವು ತೆಗೆದುಕೊಳ್ಳುವ ಶ್ವಾಸವನ್ನು ಶ್ವಾಸಕೋಶಗಳ ಮೇಲ್ಗಡೆ ಭಾಗಗಳಿಗೆ, ಎರಡನೆಯ ಸ್ವರವು ಶ್ವಾಸವನ್ನು ಶ್ವಾಸಕೋಶಗಳ ಮಧ್ಯಭಾಗಕ್ಕೆ ಹಾಗೂ ಮೂರನೆಯ ಸ್ವರವು ಶ್ವಾಸವನ್ನು ಶ್ವಾಸಕೋಶಗಳ ಕೆಳ ಭಾಗಗಳಿಗೆ ಪ್ರವಹಿಸುವಂತೆ ಮಾಡುತ್ತವೆ. ಹೀಗಾಗಿ, ಓಂಕಾರವನ್ನು ಉಚ್ಚರಿಸುವುದರಿಂದ, ಶ್ವಾಸಕೋಶಗಳ ಎಲ್ಲಾ ಭಾಗಗಳಿಗೂ ಶ್ವಾಸದ ಪೂರೈಕೆಯಾಗುತ್ತದೆ'' ಎಂದು ಆಕರ್ಷಕ ಹಸ್ತ ಮತ್ತು ಮುಖಮುದ್ರೆಗಳಿಂದ ಅತ್ಯಂತ ಆತ್ಮವಿಶ್ವಾಸದಿಂದ ವಿವರಿಸುತ್ತಿದ್ದಳು.

ಈ ಒಂದು ಅಪೂರ್ವವಾದ ವಿವರಣೆಯಿಂದ ನಾನೂ ಮೊದಮೊದಲು ಸಂಪೂರ್ಣ ಪ್ರಭಾವಿತನಾದರೂ, ಮನದ ಯಾವುದೋ ಮೂಲೆಯಲ್ಲಿ, ಈ ವಿವರಣೆಯಲ್ಲಿ ಯಾವುದೋ ಅಸಹಜತೆಯಿದೆ ಎಂದೆನಿಸುತ್ತಿತ್ತು. ಆಗ ತಟ್ಟನೇ ಜ್ಞಾನೋದಯವಾಯಿತು. ಆಕೆಯ ವಿವರಣೆ ಶುದ್ಧ ಸುಳ್ಳೆಂದು! ನಾವು ಮಾತನಾಡುವಾಗ, ಶ್ವಾಸವನ್ನು ಧ್ವನಿಪೆಟ್ಟಿಗೆಯ ಮೂಲಕ ಹೊರತಳ್ಳುತ್ತಿರುತ್ತೇವೆಯೇ ಹೊರತು, ಶ್ವಾಸವನ್ನು ಒಳಗೆ ತೆಗೆದುಕೊಳ್ಳುವುದಿಲ್ಲ. ಹಾಗಾಗಿ, ನಾವು ಓಂ ಎಂದು ಉಚ್ಚರಿಸುವಾಗ, ಶ್ವಾಸವು ಶ್ವಾಸಕೋಶಗಳನ್ನು ಪ್ರವೇಶಿಸುವ ಸಂದರ್ಭವೇ ಇಲ್ಲ. ಆಕೆ 'ಓಂ' ಶಬ್ದವನ್ನು ಉಚ್ಚರಿಸುವುದರಿಂದಾಗುವ ಲಾಭಗಳನ್ನು ಅತ್ಯಂತ ಅವೈಜ್ಞಾನಿಕವಾಗಿ ಸಮರ್ಥಿಸಿಕೊಳ್ಳುತ್ತಿದ್ದಳು! ಈ ಬಗ್ಗೆ ವಿವರಣೆ ಕೋರಿ ಆ ಚಾನೆಲ್‌ನವರಿಗೆ ಪತ್ರ ಬರೆದಿದ್ದೆ. ಇದುವರೆಗೂ ಅವರಿಂದ ಯಾವ ಉತ್ತರವೂ ಬಂದಿಲ್ಲ.

ನಮ್ಮ ದೇಹಕ್ಕೆ ಬೇಕಾಗುವ ಆಮ್ಲಜನಕದ ಪ್ರಮಾಣದಲ್ಲಾಗುವ ಏರುಪೇರುಗಳನ್ನು ಗಮನಿಸಿ ತಕ್ಷಣವೇ ಅದಕ್ಕೆ ಪ್ರತಿಕ್ರಿಯಿಸುವಂತಹ ಒಂದು ಅದ್ಭುತ ಏರ್ಪಾಟು ನಮ್ಮ ದೇಹದಲ್ಲಿದೆ. ನೀವೇ ಇದನ್ನು ಗಮನಿಸಿ ನೋಡಿ. ನೀವು ಆರಾಮಕುರ್ಚಿಯಲ್ಲಿ ಕುಳಿತು ವಿರಮಿಸುತ್ತಿರುವಾಗ ನಿಮ್ಮ ಉಸಿರಾಟದ ಆಳ ಮತ್ತು ವೇಗವನ್ನು ಗಮನಿಸಿ. ಈಗ, ಕುರ್ಚಿಯಿಂದ ಎದ್ದು ಕೆಲವು ನಿಮಿಷಗಳಷ್ಟು ಕಾಲ ನಿಮಗೆ ತೋಚಿದ ಯಾವುದೇ ಬಗೆಯ ವ್ಯಾಯಾಮವನ್ನು ಮಾಡಿ. ನಿಮ್ಮ ಉಸಿರಾಟದಲ್ಲಾಗಿರುವ ಬದಲಾವಣೆಯನ್ನು ಗಮನಿಸಿ. ನಿಮ್ಮ ಉಸಿರಾಟದ ಆಳ ಮತ್ತು ವೇಗ ಹೆಚ್ಚಾಗಿರುವುದನ್ನು ನೀವು ಗಮನಿಸಬಹುದು. ಇದು ಅನೈಚ್ಛಿಕವಾಗಿ ಆದಂತಹ ಬದಲಾವಣೆ.

ರಾಧಾರಮೇಶ

ಇತ್ತೀಚೆಗೆ, ಈ ಬಗೆಯ ಅನೇಕ ಸ್ವಘೋಷಿತ ಉಸಿರಾಟದ ಶಿಕ್ಷಕರು ಅಥವಾ ಉಸಿರಾಟದ ಚಿಕಿತ್ಸಕರು ಉದ್ಭವಿಸಿದ್ದಾರೆ. ಪ್ರತಿಯೊಬ್ಬರೂ ತಾವು ಪ್ರತಿಪಾದಿಸುವ ಉಸಿರಾಟದ ಪದ್ಧತಿಗಳಿಗೆ ತಮ್ಮದೇ ಆದ (ಅ)ವೈಜ್ಞಾನಿಕ ಸಮರ್ಥನೆಗಳನ್ನು ನೀಡುತ್ತಿದ್ದಾರೆ. ಅವರು ಪ್ರತಿಪಾದಿಸುವ ಮತ್ತು ಘೋಷಿಸುವ ಯಾವುದೇ ವಿಷಯಕ್ಕೂ ನನ್ನ ಆಕ್ಷೇಪವಿಲ್ಲ. ಅವರು ಪ್ರಚುರಪಡಿಸುತ್ತಿರುವ ವಿಧಾನಗಳಿಂದಾಗುವ ಯಾವ ಪ್ರಭಾವವನ್ನೂ ನಾನು ಪ್ರಶ್ನಿಸುವುದಿಲ್ಲ. ಆದರೆ ತಮ್ಮ ವಿಧಾನಗಳಿಗೆ ಅವರು ಕೊಡುವ ಈ (ಅ)ವೈಜ್ಞಾನಿಕ ಸಮರ್ಥನೆಗಳಿಗೆ ಮಾತ್ರ ನನ್ನ ಪ್ರತಿರೋಧವಿದೆ.

ಬಹಳ ಸಾಮಾನ್ಯವಾಗಿ ನೀಡುವ ಸಮರ್ಥನೆಯೆಂದರೆ, ಈ ಬಗೆಯ ಕ್ರಿಯೆಗಳಿಂದ ದೇಹಕ್ಕೆ ಹೆಚ್ಚು ಆಮ್ಲಜನಕ ದೊರೆಯುತ್ತದೆ ಎಂದು. ಇದರ ಬಗ್ಗೆ ಸ್ವಲ್ಪ ಗಮನಹರಿಸೋಣ. ನಾವು ಜೀವಂತವಾಗಿರಲು ನಮಗೆ ಬಹಳ ಅಗತ್ಯವಾದ ಮೂರು ಅಂಶಗಳಿವೆ. ಅವುಗಳೆಂದರೆ, ಆಹಾರ, ನೀರು ಮತ್ತು ಆಮ್ಲಜನಕ. ಒಂದು ವೇಳೆ, ಯಾವುದೇ ಕಾರಣದಿಂದ ಬಹಳಷ್ಟು ದಿನಗಳ ಕಾಲ ನಮ್ಮ ದೇಹಕ್ಕೆ ಆಹಾರ ಮತ್ತು ನೀರು ದೊರೆಯದೇ ಹೋದಾಗ, ದೇಹದಲ್ಲಿ ಶೇಖರಿಸಿಟ್ಟಿರುವ ಆಹಾರವನ್ನೇ ಬಳಸಿಕೊಂಡು ಜೀವಿಸಿರಲು ಸಾಧ್ಯವಿದೆ. ಆದರೆ, ಆಮ್ಲಜನಕದ ವಿಷಯದಲ್ಲಿ ಮಾತ್ರ ಹಾಗಿಲ್ಲ. ನಮ್ಮ ದೇಹಕ್ಕೆ ಆಮ್ಲಜನಕ ಕೇವಲ ಕೆಲವು ನಿಮಿಷಗಳಷ್ಟು ಕಾಲ ದೊರೆಯದೇ ಹೋದರೂ, ಮರಣ ಸಂಭವಿಸಬಹುದಾಗಿದೆ. ಇದನ್ನು ಅರ್ಥಮಾಡಿಕೊಳ್ಳಲು ನಾನು ಈ ಉದಾಹರಣೆ ಕೊಡುತ್ತೇನೆ. ಜಲ ಮಂಡಳಿಯವರು ಒಂದು ಪ್ರಕಟಣೆ ಹೊರಡಿಸಿ, ನೀರಿನ ಸರಬರಾಜಿನಲ್ಲಿ ಮುಂದಿನ ಎರಡು ಮೂರು ದಿನಗಳ ಕಾಲ ಅಡಚಣೆಯಿದೆಯಾದ ಕಾರಣ, ಈ ದಿನವೇ ಸಾಕಷ್ಟು ನೀರನ್ನು ಸಂಗ್ರಹಿಸಿಟ್ಟುಕೊಳ್ಳಬೇಕೆಂದು ಸಾರ್ವಜನಿಕರಿಗೆ ಸೂಚನೆ ಕೊಟ್ಟಲ್ಲಿ, ಸ್ವಲ್ಪ ಕಷ್ಟವಾದರೂ ಅವರ ಸೂಚನೆಯನ್ನು ಪಾಲಿಸಲು ಸಾಧ್ಯವಿದೆ. ಆದರೆ, ಇಂತಹುದೇ ಆದೇಶವನ್ನು ವಿದ್ಯುತ್ ಮಂಡಲಿಯವರು ನೀಡಿದರೆ ಅದನ್ನು ಪಾಲಿಸಲು ಸಾಧ್ಯವೇ? ವಿದ್ಯುತ್ತನ್ನು ಶೇಖರಿಸಿಟ್ಟುಕೊಳ್ಳುವಂತಹ ವ್ಯವಸ್ಥೆ ನಮ್ಮಲ್ಲಿಲ್ಲ. ಅಂತೆಯೇ, ನಮಗೆ ದೊರೆಯಬಹುದಾದ ಹೆಚ್ಚು ಆಮ್ಲಜನಕವನ್ನು ನಾವು ಶೇಖರಿಸಿಟ್ಟುಕೊಳ್ಳಲು ನಮ್ಮ ದೇಹದಲ್ಲಿ ಯಾವುದೇ ವ್ಯವಸ್ಥೆಯಿಲ್ಲ.

ನಮ್ಮ ದೇಹಕ್ಕೆ ಬೇಕಾಗುವ ಆಮ್ಲಜನಕದ ಪ್ರಮಾಣದಲ್ಲಾಗುವ ಏರುಪೇರುಗಳನ್ನು ಗಮನಿಸಿ ತಕ್ಷಣವೇ ಅದಕ್ಕೆ ಪ್ರತಿಕ್ರಿಯಿಸುವಂತಹ ಒಂದು ಅದ್ಭುತ ಏರ್ಪಾಟು ನಮ್ಮ ದೇಹದಲ್ಲಿದೆ. ನೀವೇ ಇದನ್ನು ಗಮನಿಸಿ ನೋಡಿ. ನೀವು ಆರಾಮಕುರ್ಚಿಯಲ್ಲಿ ಕುಳಿತು ವಿರಮಿಸುತ್ತಿರುವಾಗ ನಿಮ್ಮ ಉಸಿರಾಟದ ಆಳ ಮತ್ತು ವೇಗವನ್ನು ಗಮನಿಸಿ. ಈಗ, ಕುರ್ಚಿಯಿಂದ ಎದ್ದು ಕೆಲವು ನಿಮಿಷಗಳಷ್ಟು ಕಾಲ ನಿಮಗೆ ತೋಚಿದ ಯಾವುದೇ ಬಗೆಯ ವ್ಯಾಯಾಮವನ್ನು ಮಾಡಿ. ನಿಮ್ಮ ಉಸಿರಾಟದಲ್ಲಾಗಿರುವ ಬದಲಾವಣೆಯನ್ನು ಗಮನಿಸಿ. ನಿಮ್ಮ ಉಸಿರಾಟದ ಆಳ ಮತ್ತು ವೇಗ ಹೆಚ್ಚಾಗಿರುವುದನ್ನು ನೀವು ಗಮನಿಸಬಹುದು. ಇದು ಅನೈಚ್ಛಿಕವಾಗಿ ಆದಂತಹ ಬದಲಾವಣೆ.

ನಮ್ಮ ಮಿದುಳಿನ ಒಂದು ಭಾಗವಾದ ಮೆಡುಲ್ಲಾ ಒಬ್ಲಾಂಗೇಟಾದಲ್ಲಿ ನಮ್ಮ ಉಸಿರಾಟದ ಉಸ್ತುವಾರಿಯನ್ನು ನೋಡಿಕೊಳ್ಳುವ ಕೇಂದ್ರವಿದೆ. ಈ ಕೇಂದ್ರ ಸದಾ ಜಾಗೃತವಾಗಿದ್ದು (ನಾವು ನಿದ್ರಿಸುವ ಸಮಯದಲ್ಲೂ). ನಮ್ಮ

ದೇಹದ ಆಮ್ಲಜನಕದ ಆವಶ್ಯಕತೆ ಮತ್ತು ಪೂರೈಕೆಯ ಬಗ್ಗೆ ನಿಗಾ ಇರಿಸಿರುತ್ತದೆ. ನಮ್ಮ ದೇಹದ ಅಗತ್ಯಕ್ಕೆ ತಕ್ಕಂತೆ ನಮ್ಮ ಉಸಿರಾಟದಲ್ಲಿ ಸೂಕ್ತ ಮಾರ್ಪಾಟನ್ನು ಮಾಡುತ್ತಿರುತ್ತದೆ. ನಮ್ಮ ರಕ್ತದಲ್ಲಿನ ಆಮ್ಲಜನಕದ ಪ್ರಮಾಣದಲ್ಲಿ ಸೂಕ್ಷ್ಮವಾದ ವ್ಯತ್ಯಾಸವಾದರೂ ಅದಕ್ಕೆ ತಕ್ಕಂತೆ ಸ್ಪಂದಿಸುತ್ತದೆ.

ಪ್ರಾಣಿಗಳಲ್ಲಿ ಉಸಿರಾಟವು ಸಂಪೂರ್ಣ ಅನೈಚ್ಛಿಕ ಕ್ರಿಯೆಯಾಗಿರುತ್ತದೆ. ಆದರೆ ಮಾನವ ದೇಹದಲ್ಲಿ ಉಸಿರಾಟವು ಬಹುತೇಕ ಅನೈಚ್ಛಿಕ ಕ್ರಿಯೆಯಾದರೂ ಸ್ವಲ್ಪಮಟ್ಟಿನ ಐಚ್ಛಿಕ ನಿಯಂತ್ರಣ ಸಾಧ್ಯವಿದೆ. ಪ್ರಕೃತಿ ಮಾನವನಿಗೆ ಈ ಒಂದು ರಿಯಾಯಿತಿಯನ್ನು ನೀಡಿರುವುದರಿಂದಲೇ ಮಾನವನಿಗೆ ವಾಕ್‌ಶಕ್ತಿ ಲಭ್ಯವಾಗಿದೆ. ಉಸಿರನ್ನು ಶ್ವಾಸಕೋಶಗಳಲ್ಲಿ ಎಳೆದುಕೊಂಡು ಅದನ್ನು ಐಚ್ಛಿಕ ನಿಯಂತ್ರಣದಿಂದ ಧ್ವನಿಪೆಟ್ಟಿಗೆಯ ಮೂಲಕ ಹಾಯಿಸುವುದರಿಂದ ನಮಗೆ ಮಾತನಾಡಲು ಸಾಧ್ಯವಾಗುತ್ತದೆ. ದಿನದ ಅತಿ ಹೆಚ್ಚಿನ ಸಮಯದಲ್ಲಿ ಉಸಿರಾಟವು ಮಾನವನಲ್ಲಿ ಕೂಡ ಅನೈಚ್ಛಿಕವಾಗಿರುತ್ತದೆ.




ನಮ್ಮ ಸಹಜ ಉಸಿರಾಟದಲ್ಲಿ ಉಚ್ಛ್ವಾಸ ಮತ್ತು ನಿಶ್ವಾಸಗಳೆಂಬ ಎರಡು ಕ್ರಿಯೆಗಳಿವೆ. ಶ್ವಾಸಕೋಶಗಳಿಗೆ ಉಸಿರನ್ನು ತುಂಬುವ ಉಚ್ಛ್ವಾಸ ಕ್ರಿಯೆಯು ಸಚೇತಕವಾದ ಕ್ರಿಯೆಯಾಗಿದ್ದರೆ, ಉಸಿರನ್ನು ಹೊರಬಿಡುವ ನಿಶ್ವಾಸ ಕ್ರಿಯೆಯು ನಿರಾಯಾಸ ಕ್ರಿಯೆಯಾಗಿರುತ್ತದೆ. ಅರ್ಥಾತ್, ಶ್ವಾಸಕೋಶದಿಂದ ಉಸಿರನ್ನು ಹೊರದೂಡುವ ಕ್ರಿಯೆಯಲ್ಲಿ ನಾವು ಎಳ್ಳಷ್ಟು ಶಕ್ತಿಯನ್ನೂ ವ್ಯಯಿಸುವ ಅಗತ್ಯವಿಲ್ಲ. ಒಂದು ಬಲೂನಿಗೆ ಗಾಳಿ ತುಂಬುವ ಪ್ರಕ್ರಿಯೆಗೆ ಇದನ್ನು ಹೋಲಿಸಬಹುದು. ಬಲೂನಿನಲ್ಲಿ ಗಾಳಿಯನ್ನು ತುಂಬುವಾಗ ನಾವು ಸ್ವಲ್ಪ ಶ್ರಮ ವಹಿಸಬೇಕಾಗುತ್ತದೆ. ಆದರೆ, ಬಲೂನಿನ ಬಾಯಿಯನ್ನು ತೆರೆದ ಕೂಡಲೇ, ಬಲೂನಿನ ರಬ್ಬರಿನ ಸ್ಥಿತಿಸ್ಥಾಪಕ ಗುಣದಿಂದ, ಗಾಳಿಯು ಯಾವ ಶ್ರಮವಿಲ್ಲದೇ ಹೊರದೂಡಲ್ಪಡುತ್ತದೆ. ಕಪಾಲಭಾತಿಯಲ್ಲಿ ನಾವು ಉಚ್ಛ್ವಾಸ ಮತ್ತು ನಿಶ್ವಾಸಗಳೆರಡಕ್ಕೂ ಶಕ್ತಿಯನ್ನು ವ್ಯಯಿಸಬೇಕಾಗುತ್ತದೆ. ನಿಶ್ವಾಸಕ್ಕಾಗಿ, ಕೆಲವು ಬಲವಾದ ಸ್ನಾಯುಗಳನ್ನು ಬಳಸುವುದರಿಂದ ಬಹಳಷ್ಟು ಶಕ್ತಿ ವ್ಯಯವಾಗುತ್ತದೆ. ಹೀಗಾಗಿ, ಕಪಾಲಭಾತಿಯು ಒಂದು ಪ್ರಭಾವಕಾರಿಯಾದ ವ್ಯಾಯಾಮವೆನಿಸಿದರೂ, ಒಂದು ಬಗೆಯ ಅಸಹಜ ಉಸಿರಾಟವಾಗಿರುತ್ತದೆ.

ನಮ್ಮ ಉಸಿರಾಟದ ಮೇಲೆ ಸ್ವಲ್ಪಮಟ್ಟಿನ ಹತೋಟಿ ಸಾಧ್ಯವಿದೆ ಎಂದು ನಾನಾಗಲೇ ಹೇಳಿದೆ. ಈ ಹತೋಟಿಗೂ ಇತಿಮಿತಿಯಿದೆ. ಒಂದು ದಿಸೆಯಲ್ಲಿ, ನಾವು ಉಸಿರನ್ನು ಐದು ನಿಮಿಷಗಳಿಗಿಂತಲೂ ಹೆಚ್ಚು ಸಮಯ ಹಿಡಿದಿಡಲಾರದಂತಹ ಮಿತಿಯಿದ್ದರೆ, ಇನ್ನೊಂದು ದಿಸೆಯಲ್ಲಿ ನಾವು ನಮ್ಮ ಉಸಿರಾಟವನ್ನು ಅತಿ ರಭಸವಾಗಿ ನಡೆಸಲು ಒಂದು ನಿಮಿಷಕ್ಕಿಂತಲೂ ಹೆಚ್ಚು ಸಮಯ ಸಾಧ್ಯವಿಲ್ಲದಿರುವುದು. ಒಂದು ವೇಳೆ ನಾವು ನಮ್ಮ ಉಸಿರನ್ನು ಕೆಲವು ನಿಮಿಷಗಳಷ್ಟು ಕಾಲ ತಡೆಹಿಡಿಯಲು ಯತ್ನಿಸಿದರೆ, ಎರಡು ಮೂರು ನಿಮಿಷಗಳ ನಂತರ ಆ ಪ್ರಯತ್ನದಿಂದ ಉಸಿರನ್ನು ಎಳೆದುಕೊಳ್ಳುವ ಅವಸ್ಥೆ ಉಂಟಾಗುತ್ತದೆ. ಅದೇ ರೀತಿ ನಾವು ಅತಿ ರಭಸದಿಂದ ಉಸಿರಾಟವಾಡಲು ತೊಡಗಿದಲ್ಲಿ, ಒಂದೇ ನಿಮಿಷದಲ್ಲಿ ಅನೈಚ್ಛಿಕವಾಗಿ ನಮ್ಮ ಉಸಿರಾಟ ಸ್ವಲ್ಪ ಸಮಯ ಸ್ತಬ್ಧಗೊಳ್ಳುತ್ತದೆ.

ನಮ್ಮ ಉಸಿರಾಟದ ಮೇಲೆ ಸ್ವಲ್ಪವಾದರೂ ಹತೋಟಿಯಿದೆಯೆಂದೇ ಈ ಉಸಿರಾಟದ ಶಿಕ್ಷಕರಿಗೆ ತಮ್ಮ ವಿಧವಿಧವಾದ ಪ್ರಯೋಗಗಳ ಬಗ್ಗೆ ಮಾತನಾಡಲು ಅವಕಾಶವುಂಟಾಗಿದೆ. ನಮ್ಮ ಹೃದಯದ ಕಾರ್ಯದಂತೆಯೇ ಉಸಿರಾಟವೂ ಸಂಪೂರ್ಣ ಅನೈಚ್ಛಿಕ ಕ್ರಿಯೆಯಾಗಿದ್ದಿದ್ದರೆ ಇವರ ಯಾವ 'ಉಪದೇಶ'ಕ್ಕೂ ಆಸ್ಪದವಿರುತ್ತಿರಲಿಲ್ಲ. ಸರಿಯಾಗಿ ಉಸಿರಾಟ ಮಾಡಲು ನಮಗೆ ನಿರ್ದೇಶನವನ್ನು ನೀಡುವ ಇವರಿಗೆ ನನ್ನದೊಂದು ಚಿಕ್ಕ ಸವಾಲು. ತಮ್ಮ ಉಸಿರಾಟವನ್ನು ಐದು ನಿಮಿಷಗಳ ಕಾಲ ಸ್ತಬ್ಧಗೊಳಿಸಿ ಉಸಿರಾಟದ ಮೇಲೆ ತಮಗಿರುವ ಪ್ರಭುತ್ವವನ್ನು ಮನದಟ್ಟುಮಾಡಿಕೊಡಲಿ.

ಟಿವಿಯ ಇನ್ನೊಂದು ಚಾನೆಲ್‌ನಲ್ಲಿ ಮತ್ತೊಬ್ಬ 'ಉಸಿರಾಟದ ಶಿಕ್ಷಕರು' ಈ ರೀತಿ ಹೇಳುತ್ತಿದ್ದರು : ''ನೀವು ಉಸಿರಾಡುವಾಗ ನಿಮ್ಮ ಹೊಟ್ಟೆಯ ಭಾಗ ಹಿಂದೆ ಮುಂದೆ ಚಲಿಸುತ್ತಿದ್ದರೆ, ನೀವು ಉಸಿರಾಡುವ ವಿಧಾನ ಸರಿಯಿಲ್ಲ'' ಎಂದು. ಈ ಹೇಳಿಕೆಯೂ ಸರಿಯಲ್ಲ. ನಮಗೆ ಇನ್ನೂ ಸ್ಪಷ್ಟವಾಗಿರದ ಕಾರಣಗಳಿಂದ, ಪುರುಷರು ಉಸಿರಾಡುವಾಗ ಹೊಟ್ಟೆಯ ಭಾಗ ಪ್ರಧಾನವಾಗಿ ಚಲಿಸಿದರೆ, ಸ್ತ್ರೀಯರು ಉಸಿರಾಡುವಾಗ ಎದೆಯ ಭಾಗ ಪ್ರಧಾನವಾಗಿ ಚಲಿಸುವುದು ಸಹಜವಾಗಿದೆ.

ಈ ಉಸಿರಾಟದ ಶಿಕ್ಷಕರ ನೆರವಿಲ್ಲದೇ, ಇದುವರೆಗೂ ಮನುಜ ಕುಲ ಅದು ಹೇಗೆ ಉಳಿದುಕೊಂಡು ಬಂದಿದೆಯೋ ಎಂದು ನನಗೆ ಕೆಲವೊಮ್ಮೆ ಅಚ್ಚರಿಯಾಗುತ್ತದೆ !

ಅದೇನೇ ಇರಲಿ, ಒಟ್ಟಾರೆ ಹೇಳುವುದಾದರೆ, ನಮ್ಮ ಉಸಿರಾಟದ ಉಸ್ತುವಾರಿಯನ್ನು ನಾವು ನೋಡಿಕೊಳ್ಳುವ ಅಗತ್ಯವಿಲ್ಲ. ಅದಕ್ಕೆ ಪ್ರಕೃತಿಯೇ ಸೂಕ್ತ ವ್ಯವಸ್ಥೆಯನ್ನು ಮಾಡಿದೆ. ನಾವು ನೆಮ್ಮದಿಯಿಂದ ಉಸಿರಾಡಿದರೆ ಅಷ್ಟೇ ಸಾಕು !

**ಡಾ|| ಕ. ರಮೇಶ ಬಾಬು**
೫೧/ಡಿ, ವಿಶ್ವಗಿರಿ, ಹೊಸ ಬಾದಾಮಿನಗರ,
ಹುಬ್ಬಳ್ಳಿ - ೫೮೦ ೦೨೩

*೪೮ನೇ ಪುಟದಿಂದ (ಡಾ|| ಅಂಬೇಡ್ಕರ್)*

ಪ್ರಜಾಪ್ರಭುತ್ವದ ಆದರ್ಶದ ತಳಹದಿಯಲ್ಲಿ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವಗಳ ಆಚರಣೆಯುಳ್ಳ ಸಮಾಜ ಸ್ಥಾಪನೆಗಾಗಿ ಸತತ ಹೋರಾಡಿದರು. ಡಾ|| ಅಂಬೇಡ್ಕರ್ ಅವರು ಅಧಿಕಾಂಶ ಜನರನ್ನು ಸಾಕ್ಷಾತ್ ಗುಲಾಮಗಿರಿಯಲ್ಲಿ ನಿರ್ವೀರ್ಯರನ್ನಾಗಿಸಿ ಸಂಕಟಕ್ಕೊಳಪಡಿಸುವ ಸಾಮಾಜಿಕ ಮತ್ತು ಆರ್ಥಿಕ ಕ್ರಮಗಳನ್ನು ಬದಲಾಯಿಸುವ ಮೂಲಕ ಅಂತಹ ಜನರ ಜೀವನಗಳಿಂದ ದುಃಖವನ್ನು ಮೂಲೋತ್ಪಾಟನ ಮಾಡಲು ಪ್ರಯತ್ನಿಸಿದರು. ವಿಜ್ಞಾನ ಮತ್ತು ತಾಂತ್ರಿಕ ಜ್ಞಾನಗಳನ್ನು ವಿವೇಚನೆಯಿಂದ ಅನುಸರಿಸಿ ಅದರ ಪ್ರತಿಫಲವನ್ನು ಪ್ರತಿಯೊಬ್ಬರಿಗೂ ದೊರಕುವಂತೆ ಮಾಡಿದಾಗ ಮನುಷ್ಯನ ದುಃಖಕ್ಕೆ ಕಾರಣವಾದ ಅಭಾವಗಳಿಂದಲೂ, ಭೀತಿಯಿಂದಲೂ ಸಾಮಾನ್ಯ ಜನರನ್ನು ಬಿಡುಗಡೆಮಾಡಬಹುದು ಎಂದು ಅವರು ಮನಸಾರೆ ನಂಬಿ ಕಾರ್ಯಪ್ರವೃತ್ತರಾಗಿದ್ದರು. ಅಂತರಾಳದಿಂದ ನಿಚ್ಚಳ ಫಲಪ್ರಮಾಣವಾದಿಯಾದ ಡಾ|| ಅಂಬೇಡ್ಕರ್ ಪ್ರಕಾರ ಆರ್ಥಿಕ ಮತ್ತು ಸಾಮಾಜಿಕ ನ್ಯಾಯವಿಲ್ಲದ ರಾಜಕೀಯ ಸ್ವಾತಂತ್ರ್ಯ ನಿರರ್ಥಕ. ರಾಷ್ಟ್ರೀಯತೆಗೆ ಅವಶ್ಯಕವಾದ ಸಾಮಾಜಿಕ ಐಕಮತ್ಯವನ್ನೂ ರಾಷ್ಟ್ರೀಯ ಸಮಗ್ರತೆಯನ್ನೂ ಸಿದ್ಧಿಸಿಕೊಳ್ಳಲು ಚಾತುರ್ವರ್ಣ್ಯದ ಅಡಿಪಾಯದ ಮೇಲೆ ನಮ್ಮ ಸಮಾಜದಲ್ಲಿರುವ ಉತ್ತಮಾಧಮ ಶ್ರೇಣೀಗತ ರಚನೆಯ ಜಾತೀಯತೆಯ ನಿರ್ಮೂಲನೆ ಪ್ರಥಮ ಹೆಜ್ಜೆ. ಜಾತಿವಿನಾಶ ಹಾಗೂ ಅಂತಸ್ತುಗಳ ಮೇಲೆ ಇರುವ ಸೌಕರ್ಯಗಳ ಅಮಾನತು ಅವಶ್ಯ. ರಾಷ್ಟ್ರದ ಒಗ್ಗಟ್ಟು ಅನಿವಾರ್ಯ ಅಗತ್ಯ. ಅದಕ್ಕಾಗಿ ವ್ಯಕ್ತಿಗತ ಗೌರವ ಮತ್ತು ಸ್ವಾತಂತ್ರ್ಯಕ್ಕಾಗಿ ಅವರು ಅಹರ್ನಿಶಿ ಹೋರಾಡಿದರು. ಭಾರತೀಯನು ಸಿಲುಕಿಕೊಂಡಿರುವುದು ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ. ಅಸ್ಪೃಶ್ಯತೆ ಈ ವ್ಯವಸ್ಥೆಯ ಭಾಗ. ಈ ವ್ಯವಸ್ಥೆಯನ್ನು ಪೂರ್ಣ ಬದಲಿಸಿ ಮಾನವೀಯತೆಯ ಎಡೆಗೆ ಈ ಸಮಾಜವನ್ನು ತೆಗೆದುಕೊಳ್ಳುವಂತೆ ಮಾಡುವ ಕ್ರಿಯಾಶೀಲ ಸಂವಿಧಾನ ಕೊಟ್ಟ ಮಹಾನುಭಾವ ಡಾ|| ಅಂಬೇಡ್ಕರ್, ಗಾಂಧೀಜಿ ಅವರ ಕಣ್ಮಣಿ. ಅಂತೆಯೇ ವ್ಯಕ್ತಿಗತ ಗೌರವ, ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ತೋರಿಸಿಕೊಡುವಲ್ಲಿ ಕೃತಕೃತ್ಯರಾದ ಡಾ|| ಅಂಬೇಡ್ಕರ್ ದೇಶದ ಸರ್ವ ಜನಾಂಗಗಳ ಮಹಾನ್ ಧೀಮಂತ ಕಾಲಪುರುಷ. ಇದನ್ನರಿಯದ ಭಾರತೀಯರು ಕಣ್ಣಿದ್ದೂ ಕುರುಡರಾಗಿರುವರೆಂದು ಹೇಳಬಹುದು.

**ಸಿ. ಎಚ್. ಜಾಕೋಬ್ ಲೋಬೊ**
೯೯೩, ತುಕ್ಕಾಡಿ ನಿವಾಸ, ೩ನೇ ಮುಖ್ಯರಸ್ತೆ, ೭ನೇ ಬ್ಲಾಕ್
೨ನೇ ಘಟ್ಟ, ಹೊಸಕೆರೆಹಳ್ಳಿ ಬಿ.ಡಿ.ಎ. ಎಕ್ಸ್‌ಟೆನ್‌ಷನ್
ಬಿ.ಎಸ್.ಕೆ. ೩ನೇ ಹಂತ, ಬೆಂಗಳೂರು - ೫೬೦ ೦೮೫

# ಭಾಷೆ ಮತ್ತು ಮಾಧ್ಯಮ



*ಶಿಕ್ಷಣದಲ್ಲಿ ಭಾಷೆ ಮತ್ತು ಮಾಧ್ಯಮದ ವಿಷಯ ಚರ್ಚೆಗೆ ಬಂದಾಗ ತಕರಾರುಗಳು, ಜಗಳಗಳು, ಪುಕಾರುಗಳು, ವಾದ ವಿವಾದಗಳು ಹುಟ್ಟಿಕೊಳ್ಳುತ್ತವೆ. ವಿದ್ಯಾರ್ಥಿಗಳು ಶಾಲಾ ಹಂತದಲ್ಲಿ ಎಷ್ಟು ಭಾಷೆಗಳನ್ನು ಕಲಿಯಬೇಕು ? ಏಕೆ ಕಲಿಯಬೇಕು ? ಹೇಗೆ ಕಲಿಯಬೇಕು ? ದ್ವಿತೀಯ ಭಾಷೆಯ ಕಲಿಕೆಯನ್ನು ಬೇಗನೆ ಆರಂಭಮಾಡಿದರೆ ಸಾಧಕ-ಬಾಧಕಗಳೇನು ? ಶಿಕ್ಷಣ ಮಾಧ್ಯಮದ ಭಾಷೆ ಯಾವುದಿರಬೇಕು ? ಮತ್ತು ಏಕೆ ? ಬದಲಾದ ಸಾಮಾಜಿಕ ಸಂದರ್ಭದಲ್ಲಿ, ವಿವಿಧ ಸಾಮಾಜಿಕ, ಆರ್ಥಿಕ ಗುಂಪುಗಳ ಒತ್ತಡಗಳಿಗೆ ಬಲಿಯಾಗಿ ಶಿಕ್ಷಣದಲ್ಲಿ ಭಾಷಾನೀತಿಯನ್ನು ಬದಲಿಸಬೇಕೆ ? ನಮ್ಮ ಶಿಕ್ಷಣದ ಭಾಷಾ ನೀತಿ ಏನು ? ಅಂಥ ನೀತಿ ಇದೆಯೆ ? ಇದ್ದರೆ ಅದು ಎಷ್ಟು ಪುರೋಗಾಮಿಯಾಗಿದೆ ? ಇವೆಲ್ಲ ಪ್ರಶ್ನೆಗಳು ಹುಟ್ಟಿಕೊಂಡು ದೊಡ್ಡ ಭಾಷಾ ವಿವಾದಗಳಿಗೆ ಹೇತುವಾಗುತ್ತವೆ.*

''**ಭಾ**ಷೆ ಎಂಬ ಬೆಳಕು ಇಲ್ಲದಿರುತ್ತಿದ್ದರೆ ಈ ಜಗತ್ತು ಅಂಧಕಾರದಲ್ಲಿ ಮುಳುಗುತ್ತಿತ್ತು'' ಎಂಬ ಸೊಗಸಾದ ಮಾತನ್ನು ಕಾವ್ಯಮೀಮಾಂಸಕ ದಂಡಿ ಹೇಳಿದ್ದಾನೆ. ಭಾಷೆಯೇ ಬೆಳಕು. ಈ ನುಡಿ ಬೆಳಕು ಅಂತರಂಗದ ಕತ್ತಲನ್ನು ಚದುರಿಸುತ್ತದೆ. ಅಂತರಂಗ ಬಹಿರಂಗಗೊಳ್ಳುವಂತೆ ಮಾಡುತ್ತದೆ. ಮಾತು, ಬರೆಹ ಹಾಗೂ ಚಿಂತನ ಶಕ್ತಿ ಇಲ್ಲವಾಗಿದ್ದರೆ ನಾವು ಪ್ರಾಣಿ ಸದೃಶ ಬದುಕು ಬದುಕಬೇಕಾಗಿರುತ್ತಿತ್ತು. ಆದರೆ ಭಾಷೆಯ ಬೆಳಕು ಮಾನವನ ಬಾಳನ್ನು ಬೆಳಗಿದೆ.

ಭಾಷೆ ಮಾನವ ಸಹಜ ಜೈವಿಕ ವ್ಯವಹಾರ. ಭಾಷೆ ಮಾನವನ ಪಾಲಿಗೆ ದತ್ತವಾಗಿದೆ. ಭಾಷೆಯ ಕಲಿಕೆಗೆ ಮತ್ತು ಗಳಿಕೆಗೆ ಅವಶ್ಯಕವಾದ ಸಾಮರ್ಥ್ಯಗಳು ಮಾನವನಲ್ಲಿ ಜನ್ಮಜಾತವಾಗಿವೆ. ಜನ್ಮಜಾತವಾದ ಈ ಸಾಮರ್ಥ್ಯದ ಬೆಳವಣಿಗೆಗೆ ಸೂಕ್ತ ಪರಿಸರ, ಅಭಿಪ್ರೇರಣೆ, ಉದ್ದೇಶ ಪ್ರಾಪ್ತವಾದಾಗ ಭಾಷೆಯ ಕಲಿಕೆ ಸುಗಮವಾಗುತ್ತದೆ.

''ಭಾಷೆ ಅತ್ಯಂತ ಸೃಷ್ಟಿಶೀಲವಾದ ಮಾನವ ಕ್ರಿಯೆಗಳಲ್ಲೊಂದು. ಭಾಷೆ ಅನಂತ ಸಾಧ್ಯತೆಗಳ ಸಾಂತ ಸಾಧನ'' ಎಂದು ಖ್ಯಾತ ಭಾಷಾವಿಜ್ಞಾನಿ ನೋಮ್ ಚೋಮ್‌ಸ್ಕಿ ಅಭಿಪ್ರಾಯಪಡುತ್ತಾರೆ. ಮಾನವನ ಬುದ್ಧಿಶಕ್ತಿಯ ವಿಶಿಷ್ಟಾಂಶವಾದ ಭಾಷೆಯನ್ನು ಆರ್ಜಿಸಲು, ಕಲಿಯಲು ಅಗತ್ಯವಾದ ಸಾಧನ ಮಾನವನ ಮೆದುಳಿನಲ್ಲಿದೆ. ಬುದ್ಧಿಯ ವ್ಯಕ್ತಾಂಶವೇ ಭಾಷೆ. ಭಾಷೆಯ ಅವ್ಯಕ್ತಾಂಶ ಬುದ್ಧಿ. ಭಾಷೆ-ಚಿಂತನ ಹಾಗೂ ಅನುಭವಗಳ ನಡುವೆ ಹೊಕ್ಕುಳಬಳ್ಳಿಯ ಸಂಬಂಧವಿದೆ. ಚಿಂತನ ಭಾಷೆಯ ರೂಪದಲ್ಲಿ ಹೊರಹೊಮ್ಮುತ್ತದೆ. ಭಾಷೆ ಚಿಂತನವಾಗಿ ಹರಳುಗಟ್ಟುತ್ತದೆ. ಭಾಷೆ ಹಾಗೂ ಚಿಂತನಕ್ಕೆ ಅನುಭವ ಮೂಲದ್ರವ್ಯವಾಗುತ್ತದೆ. ಹೀಗಾಗಿ ಅನುಭವದ ಹೊರತು ಭಾಷೆಯಿಲ್ಲ, ಭಾಷೆಯ ಹೊರತು ಅನುಭವವಿಲ್ಲ ಎಂಬ ಮಾತು ಜನಜನಿತವಾಗಿದೆ. ಅನುಭವ ಭಾಷೆಯ ಮೂಲಕ ಅಭಿವ್ಯಕ್ತಗೊಳ್ಳುತ್ತದೆ. ಭಾಷೆ ಅನುಭವವಾಗಿ ಮೈದಳೆಯುತ್ತದೆ.

ಭಾಷೆ ಪ್ರಧಾನವಾಗಿ ವ್ಯಕ್ತಿತ್ವದ ಅಭಿವ್ಯಕ್ತಿಯ ಸಾಧನ. ಲಿಖಿತ, ಮುದ್ರಿತ, ಮೌಖಿಕ –ಭಾಷೆಯ ರೂಪ ಯಾವುದೇ ಇರಲಿ, ಅದು ಇರುವುದೇ ನಮ್ಮ ಭಾವನೆ, ಕನಸು, ವಿಚಾರ, ಅಭಿಪ್ರಾಯ, ತಳಮಳ ಇತ್ಯಾದಿಗಳನ್ನು ತೋಡಿಕೊಳ್ಳುವುದಕ್ಕೆ, ಹಂಚಿಕೊಳ್ಳುವುದಕ್ಕೆ. ಅದು ಅನುಭವಗಳ ವಿನಿಮಯದ ಸಾಧನ. ಮೈಕೆಲ್ ಹ್ಯಾಲಿಡೇ ಎಂಬ ತಜ್ಞರು (೧೯೭೩) ಸಾಧನಾಕಾರ್ಯ, ನಿಯಂತ್ರಕ ಕಾರ್ಯ, ಪಾರಸ್ಪರಿಕ ಕಾರ್ಯ, ಪ್ರಾತಿನಿಧ್ಯ ಕಾರ್ಯ, ವೈಯಕ್ತಿಕ ಕಾರ್ಯ, ಅನ್ವೇಷಣ ಕಾರ್ಯ ಹಾಗೂ ಕಲ್ಪನಾತ್ಮಕ ಕಾರ್ಯವೆಂದು ಭಾಷೆಯ ಏಳು ಕಾರ್ಯಗಳನ್ನು ಪಟ್ಟಿಮಾಡುತ್ತಾರೆ. ಅಂದರೆ ವಿವಿಧ ಬಗೆಗಳಲ್ಲಿ ನಾವು ಭಾಷೆಯನ್ನು ಬಳಸುತ್ತೇವೆ. ಕವಿ ಕುವೆಂಪು ಅವರು ಇದನ್ನೇ ಸಮೀಕರಿಸಿ ಹೇಳಿದ ಹಾಗೆ ಲೋಕೋಪಯೋಗಿ ಶಾಸ್ತ್ರೋಪಯೋಗಿ ಹಾಗೂ ಬಹೂಪಯೋಗಿ ಎಂಬ ಮೂರು ಮುಖಗಳಲ್ಲಿ ಭಾಷೆಯ ಮೂಲಕ ನಾವು ಅಭಿವ್ಯಕ್ತಿ ಕ್ರಿಯೆಯಲ್ಲಿ ತೊಡಗುತ್ತೇವೆ. ಭಾಷೆಯಿಲ್ಲದೆ ಅಭಿವ್ಯಕ್ತಿಯಿಲ್ಲ, ಅಭಿವ್ಯಕ್ತಿ ಶೂನ್ಯವಾದ ಭಾಷೆ ಭಾಷೆಯೇ ಅಲ್ಲ ಎನ್ನಬಹುದು.

ಡಾ|| ಮಹಾಬಲೇಶ್ವರ ರಾವ್

ನಿತ್ಯ ವ್ಯವಹಾರದಲ್ಲಿ ಭಾಷೆಗಳ ಕಲಿಕೆ ಮತ್ತು ಅಭಿವ್ಯಕ್ತಿ ಮಾಧ್ಯಮಕ್ಕೆ ಸಂಬಂಧಿಸಿದಂತೆ ಸಾಮಾನ್ಯವಾಗಿ ಜಗಳಗಳಿಲ್ಲ. ನಮ್ಮ ನಮ್ಮ ಅಗತ್ಯಗಳು, ಉದ್ದೇಶಗಳು ಹಾಗೂ ವ್ಯವಹಾರಗಳಿಗೆ ಸಂಬಂಧಿಸಿದಂತೆ ನಮ್ಮ ಇಚ್ಛೆಯಂತೆ ನಾವು ಭಾಷೆಗಳನ್ನು ಆರ್ಜಿಸುತ್ತೇವೆ ಅಥವಾ ಕಲಿಯುತ್ತೇವೆ. ತಾಯ್ನುಡಿ ಅಥವಾ ಮನೆಯ ಮಾತು ಅಥವಾ ನಿಕಟ ಪರಿಸರದ ಭಾಷೆಯನ್ನು ನಾವೆಲ್ಲ ಎಳವೆಯಿಂದಲೇ ಆರ್ಜಿಸುತ್ತೇವೆ. ಈ ನುಡಿ ನಮ್ಮ ಅನುಭವವೈವಿಧ್ಯಕ್ಕೆ ತಕ್ಕಂತೆ ನಮ್ಮೊಡನೆ ಬಲಿಯುತ್ತದೆ. ತೀರ ಅಗತ್ಯ ಅಥವಾ ಅನಿವಾರ್ಯ ಅನ್ನಿಸಿದಾಗ ಇತರ ಭಾಷೆಗಳನ್ನು ಕೇಳಿ ಕಲಿಯಲು ಪ್ರಯತ್ನಿಸುತ್ತೇವೆ. ಈ ಭಾಷೆಗಳಲ್ಲಿ ವಿದ್ವಾಂಸರಂತೆ ಪ್ರಾವೀಣ್ಯ ಗಳಿಸದಿದ್ದರೂ ನಿತ್ಯ ವ್ಯವಹಾರಕ್ಕೆ ತಕ್ಕಷ್ಟು ಪರಿಣತಿ ಸಂಪಾದಿಸುತ್ತೇವೆ. ಮನೆಯಲ್ಲೇ ಮೂರು ನಾಲ್ಕು ಭಾಷೆಗಳನ್ನು ನುಡಿಯುವ ಸಂದರ್ಭಗಳಿದ್ದರೆ ಅವನ್ನು ಕಲಿಯುತ್ತೇವೆ. ಎಷ್ಟು ಬೇಕೋ ಅಷ್ಟು ಭಾಷೆಗಳನ್ನು ಕಲಿಯುವ ಸಾಮರ್ಥ್ಯ ನಮ್ಮಲ್ಲಿದೆ. ಆದರೆ ಅದಕ್ಕೆ ತಕ್ಕ ಬುದ್ಧಿಶಕ್ತಿ, ಭಾಷಿಕ ಬುದ್ಧಿಶಕ್ತಿ ಅಥವಾ ಅಭಿಕ್ಷಮತೆ, ಭಾಷಿಕ ಪರಿಸರ ಹಾಗೂ ಅಭಿಪ್ರೇರಣೆ ಬೇಕು. ಅನ್ಯಭಾಷಿಕ ಪರಿಸರ ನಮ್ಮ ಭಾಷಿಕ ಪರಿಸರದ ಜೊತೆ ಸಹಜೀವನ ನಡೆಸುತ್ತಿದ್ದರೂ ಅನ್ಯ ಭಾಷೆಯ ಕಲಿಕೆ ನಮಗೆ ಅಗತ್ಯವಿಲ್ಲ ಎಂದಾದರೆ ನಾವು ಅದನ್ನು ಕಲಿಯಲು ಮನ ಮಾಡುವುದಿಲ್ಲ. ಇಲ್ಲಿ ಆಕ್ಷೇಪ, ಜಗಳ, ವಾದ ವಿವಾದದ ಪ್ರಶ್ನೆಯಿಲ್ಲ.

ಶಿಕ್ಷಣದಲ್ಲಿ ಭಾಷೆ ಮತ್ತು ಮಾಧ್ಯಮದ ವಿಷಯ ಚರ್ಚೆಗೆ ಬಂದಾಗ ತಕರಾರುಗಳು, ಜಗಳಗಳು, ಪುಕಾರುಗಳು, ವಾದವಿವಾದಗಳು ಹುಟ್ಟಿಕೊಳ್ಳುತ್ತವೆ. ವಿದ್ಯಾರ್ಥಿಗಳು ಶಾಲಾ ಹಂತದಲ್ಲಿ ಎಷ್ಟು ಭಾಷೆಗಳನ್ನು ಕಲಿಯಬೇಕು ? ಏಕೆ ಕಲಿಯಬೇಕು ? ಹೇಗೆ ಕಲಿಯಬೇಕು ? ದ್ವಿತೀಯ ಭಾಷೆಯ ಕಲಿಕೆಯನ್ನು ಬೇಗನೆ ಆರಂಭಮಾಡಿದರೆ ಸಾಧಕ-ಬಾಧಕಗಳೇನು ? ಶಿಕ್ಷಣ ಮಾಧ್ಯಮದ ಭಾಷೆ ಯಾವುದಿರಬೇಕು ? ಮತ್ತು ಏಕೆ ? ಬದಲಾದ ಸಾಮಾಜಿಕ ಸಂದರ್ಭದಲ್ಲಿ, ವಿವಿಧ ಸಾಮಾಜಿಕ, ಆರ್ಥಿಕ ಗುಂಪುಗಳ ಒತ್ತಡಗಳಿಗೆ ಬಲಿಯಾಗಿ ಶಿಕ್ಷಣದಲ್ಲಿ ಭಾಷಾನೀತಿಯನ್ನು ಬದಲಿಸಬೇಕೆ ? ನಮ್ಮ ಶಿಕ್ಷಣದ ಭಾಷಾ ನೀತಿ ಏನು ? ಅಂಥ ನೀತಿ ಇದೆಯೆ ? ಇದ್ದರೆ ಅದು ಎಷ್ಟು ಪುರೋಗಾಮಿಯಾಗಿದೆ ? ಇವೆಲ್ಲ ಪ್ರಶ್ನೆಗಳು ಹುಟ್ಟಿಕೊಂಡು ದೊಡ್ಡ ಭಾಷಾ ವಿವಾದಗಳಿಗೆ ಹೇತುವಾಗುತ್ತವೆ.

ಭಾರತದಂಥ ಬಹುಭಾಷಿಕ ಸಂದರ್ಭದಲ್ಲಿ ಈ ವಿವಾದ ಕಳೆದ ೧೭೦ ವರ್ಷಗಳಿಂದಲೂ ಇದೆ. ಇತ್ತೀಚೆಗಂತೂ ಕರ್ನಾಟಕದ ಸಂದರ್ಭದಲ್ಲಿ ಅದು ಶೈಕ್ಷಣಿಕ ವಿವೇಕದ ಹಳಿ ತಪ್ಪಿದೆ.

ದುರ್ದೈವದ ಸಂಗತಿ ಎಂದರೆ ಭಾಷೆಯ ಕಲಿಕೆಗೂ ಭಾಷೆ ಬಗೆಗಿನ ಕಲಿಕೆಗೂ ಹಾಗೂ ಭಾಷಾ ಮಾಧ್ಯಮದ ಮೂಲಕವಾದ ಕಲಿಕೆಗೂ ಇರುವ ವ್ಯತ್ಯಾಸ ಅನೇಕರಿಗೆ ತಿಳಿದೇ ಇಲ್ಲ. ಇಂಗ್ಲಿಷ್ ಮಾಧ್ಯಮದ ಬಗೆಗೆ ವಿರೋಧವೆಂದರೆ ಇಂಗ್ಲಿಷ್‌ಗೆ ವಿರೋಧವೆಂದು ತಪ್ಪಾಗಿ ತಿಳಿಯುತ್ತಾರೆ. ತೀರ ಕೆಳಗಿನ ಹಂತಗಳಲ್ಲಿ ಇಂಗ್ಲಿಷ್‌ಅನ್ನು ಎರಡನೆಯ ಭಾಷೆಯಾಗಿ ಕಲಿಯುವುದಕ್ಕೆ ವಿರೋಧ ಎಂದರೆ ಪ್ರಗತಿ ವಿರೋಧಿಗಳು ಎಂದು ಹಣೆಪಟ್ಟಿ ಹಚ್ಚಲಾಗುತ್ತದೆ. ಕನ್ನಡದ ಪರವಾಗಿ ಮಾತನಾಡಿದರೆ ಭಾವುಕರು, ಸಂಪ್ರದಾಯ ವಾದಿಗಳು ಎಂದು ಮೂಗುಮುರಿಯಲಾಗುತ್ತದೆ. ಕನ್ನಡ ಕಲಿಕೆ ಕಡ್ಡಾಯ ಎಂದರೆ ಕನ್ನಡ ಮಾಧ್ಯಮ ಕಡ್ಡಾಯ ಎಂದು ತಪ್ಪಾಗಿ ಭಾವಿಸಲಾಗುತ್ತದೆ.

ಶಾಲಾ ಹಂತದಲ್ಲಿ ಕಲಿಯುವವರಿಗೆ ವಿಷಯಜ್ಞಾನ, ಭಾಷಾಜ್ಞಾನ ಹಾಗೂ ಪರಿಣತಿ – ಇವುಗಳಲ್ಲಿ ಯಾವುದಾದರೊಂದು ಅಗತ್ಯವಾಗಿ ಇರಲೇಬೇಕು. ವಿಷಯ ಜ್ಞಾನವಿದ್ದರೆ ಭಾಷೆ ಗೊತ್ತಿಲ್ಲದಿದ್ದರೂ ಹೇಗೋ ಸರಿದೂಗಿಸಿಕೊಂಡು ಹೋಗಬಹುದು ಮತ್ತು ಕಾಲಕ್ರಮೇಣ ಭಾಷೆಯನ್ನು ಕಲಿಯುತ್ತ ಸುಧಾರಿಸಿಕೊಳ್ಳಬಹುದು. ವಿಷಯಜ್ಞಾನ ಇಲ್ಲದೆ ಭಾಷಾ ಜ್ಞಾನವಿದ್ದರೆ ಶ್ರದ್ಧಾಪೂರ್ವಕವಾಗಿ ಅಧ್ಯಯನ ಮುಖೇನ ಜ್ಞಾನ ಸಂಪಾದಿಸಬಹುದು. ಇವೆರಡರ ಕೊರತೆಯಿಂದ ಕಲಿಕೆ ಹೊರೆಯಾಗುತ್ತದೆ. ಪ್ರಾಥಮಿಕ ಹಾಗೂ ಪ್ರಾಥಮಿಕ ಪೂರ್ವ ಹಂತದಲ್ಲಿ ಆಂಗ್ಲಮಾಧ್ಯಮ ಶಿಕ್ಷಣವನ್ನು ವಿರೋಧಿಸುವುದು ಈ ಕಾರಣಕ್ಕಾಗಿ. ಇಲ್ಲಿ ಭಾಷೆ ಪರಕೀಯ ಅಥವಾ ಅಪರಿಚಿತ; ನಿತ್ಯವ್ಯವಹಾರದ್ದಲ್ಲ. ಅದು ಮನೆಯ ಮಾತಲ್ಲ. ತರಗತಿಯ ನಾಲ್ಕು ಗೋಡೆಗಳ ನಡುವೆ ಕಿವಿಗೆ ಬೀಳುವಂಥದ್ದು. ಭಾಷೆಯ ಕಲಿಕೆಯ ಪರಿಸರ ಸಹಜವಲ್ಲ. ಶಿಕ್ಷಕರ ಭಾಷಿಕ ಜ್ಞಾನ ಸಾಮರ್ಥ್ಯ ಮತ್ತು ಅಭಿವ್ಯಕ್ತಿ ಶಕ್ತಿ ನಿರಾಶಾದಾಯಕ. ಕೃತ್ರಿಮ ಪರಿಸರ, ಅಪರಿಚಿತ ಭಾಷೆ, ಅದಕ್ಷ, ಅಸಮರ್ಥ ಮತ್ತು ದೋಷಪೂರಿತ ಬೋಧನೆಯ ಮೂಲಕ ಒದಗುವ ಮಾಹಿತಿಯ – ಜ್ಞಾನ ಕೂಡ ಅಪರಿಚಿತ ಮತ್ತು ದೋಷಪೂರ್ಣ; ಕಲಿಕೆಯೂ ಅಪರಿಪೂರ್ಣ ಎಂಬುದನ್ನು ಗಮನಿಸಬೇಕು. ವಿದ್ಯಾರ್ಥಿಗಳಿಗೆ ಯಾವ ಮಾಧ್ಯಮ ದಲ್ಲಿ ಬೋಧನೆ ಮಾಡಬೇಕು ? ಎಂಬ ಜಿಜ್ಞಾಸೆ ಮುಗಿದುಹೋದ ಅಧ್ಯಾಯವಾದರೂ ಮತ್ತೆ ಮತ್ತೆ ಹಳೆಯ ಗಾಯಗಳನ್ನು ಕೆದಕಿ ಸಂತೋಷಪಡುವುದು ಖೇದಕರ ವಿಚಾರ.

ಶಿಕ್ಷಣದಲ್ಲಿ ಮಾಧ್ಯಮದ ಪ್ರಶ್ನೆ ಮುಖ್ಯವಾದುದು ಮತ್ತು ಮೂಲಭೂತವಾದುದು. ಇದು ಒಂದು ನಿರ್ದಿಷ್ಟ ಭಾಷೆಯ ಮೂಲಕವೇ ಸಕಲ ಜ್ಞಾನಸಂಪತ್ತನ್ನು ಗಳಿಸಬೇಕಾದ ಮತ್ತು ಅಭಿವ್ಯಕ್ತಿಸಬೇಕಾದ ವ್ಯವಹಾರ. ಶೈಕ್ಷಣಿಕವಾಗಿ ಸ್ವೀಕೃತವಾದ ವಿಚಾರವೆಂದರೆ ತಾಯ್ನುಡಿ ಅಥವಾ ಮಗುವಿನ ಪರಿಸರದ ಭಾಷೆಯೇ ಶಿಕ್ಷಣ ಮಾಧ್ಯಮಕ್ಕೆ ಸೂಕ್ತ. ಇದೇ ಮಗುವಿನ ಸಹಜ ಚಿಂತನೆಯ, ಕಲ್ಪನೆ, ಕನಸುಗಳ ಅಭಿವ್ಯಕ್ತಿಯ ಭಾಷೆ. ಎಲ್ಲ ಶೈಕ್ಷಣಿಕ ವರದಿಗಳು, ವಿದ್ವಾಂಸರು ಶಾಲಾ ಹಂತದಲ್ಲಿ ತಾಯ್ನುಡಿ ಅಥವಾ ಪ್ರಾದೇಶಿಕ ಭಾಷಾ ಮಾಧ್ಯಮವನ್ನು ಮತ್ತೆ ಮತ್ತೆ ಎತ್ತಿಹಿಡಿದಿದ್ದಾರೆ. ಕರ್ನಾಟಕದ ಮಟ್ಟಿಗೆ ಸ್ವಾತಂತ್ರ್ಯ ಪೂರ್ವ ದಿಂದಲೂ ಶಾಲೆಗಳಲ್ಲಿ ಕನ್ನಡ ಮಾಧ್ಯಮ ಬಳಕೆಯಲ್ಲಿತ್ತು. ೪೫ ವರ್ಷಗಳ ಹಿಂದೆಯೇ ಪ್ರೌಢಶಾಲಾ ಹಂತದಲ್ಲಿ ಕನ್ನಡ ಮಾಧ್ಯಮವನ್ನು ಶಿಕ್ಷಣ ಇಲಾಖೆಯ ಮುಖ್ಯಾಧಿಕಾರಿ ಶ್ರೀ ಎನ್. ಎಸ್. ಸುಬ್ಬರಾವ್ ಜಾರಿಗೆತಂದರು. ಕುವೆಂಪು ಅವರು ಇನ್ನೂ ನಾಲ್ಕು ಹೆಜ್ಜೆ ಮುಂದೆಹೋಗಿ ಉನ್ನತ ಶಿಕ್ಷಣ ಹಂತದಲ್ಲಿ ಕನ್ನಡ ಮಾಧ್ಯಮದಲ್ಲಿ ಬೋಧನೆಗೆ ನೆರವಾಗ ಲೆಂದು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಮೂಲಕ ನೂರಾರು ಕನ್ನಡ ಗ್ರಂಥಗಳನ್ನು ವಿದ್ವಾಂಸರಿಂದ ಬರೆಯಿಸಿ, ಭಾಷಾಂತರ ಮಾಡಿಸಿ ಪ್ರಕಟಿಸಿದರು. ಆದರೆ ನಾವಿಂದು ಹೊಸ ಕಾಲದ ಸವಾಲುಗಳ ನೆಪದಲ್ಲಿ ಬೆಳೆದುಬಂದ ಈ ಆರೋಗ್ಯಕರ ಪರಂಪರೆಯನ್ನೇ ಧಿಕ್ಕರಿಸಿ ನಿಂತಿದ್ದೇವೆ.

ಹಿರಿಯ ಪ್ರಾಥಮಿಕ ಹಾಗೂ ಪ್ರೌಢ ಹಂತದಲ್ಲಿ ತ್ರಿಭಾಷಾ ಸೂತ್ರ ಜಾರಿಗೆ ಬಂದು ನಾಲ್ಕು ದಶಕಗಳೇ ಕಳೆದಿವೆ. ತ್ರಿಭಾಷಾ ಸೂತ್ರ ಇಡೀ ರಾಷ್ಟ್ರದಲ್ಲಿ ಹೇಗೆ ಜಾರಿಗೆಬಂದಿದೆ ಎಂಬುದನ್ನಾಗಲಿ ಅದರ ಔಚಿತ್ಯವನ್ನಾಗಲಿ ನಾನಿಲ್ಲಿ ಪ್ರಶ್ನಿಸುವುದಿಲ್ಲ. ಆದರೆ ಈ ಸೂತ್ರದ ದೆಸೆಯಿಂದಾಗಿ ಅನೇಕ ವಿದ್ಯಾರ್ಥಿಗಳು ಸಂಸ್ಕೃತ ಅಥವಾ ಹಿಂದಿ ಭಾಷೆಯ ಕಲಿಕೆಯಿಂದ ವಂಚಿತರಾಗುತ್ತಾರೆ. ಈ ಭಾಷೆಗಳನ್ನು ಕಲಿಯಬೇಕೆಂಬ ಹಂಬಲವುಳ್ಳವರಿಗೆ ಶಾಲಾ ವ್ಯವಸ್ಥೆಯಲ್ಲಿ ಅವನ್ನು ಹೆಚ್ಚುವರಿಯಾಗಿ ಬೋಧಿಸುವ ಸಾಂಸ್ಥಿಕ ವ್ಯವಸ್ಥೆ ನಮ್ಮಲ್ಲಿಲ್ಲ. ಅಂತೆಯೇ ಕೋರ್ ಪೇಪರ್ಸ್ ಹೆಸರಿನಲ್ಲಿ ವಿಜ್ಞಾನ, ಸಮಾಜ ಅಧ್ಯಯನ ಹಾಗೂ ಗಣಿತ ಅಧ್ಯಯನ ಕಡ್ಡಾಯ ವಾಗಿದೆ. ಇವುಗಳಲ್ಲಿ ಆಸಕ್ತಿ ಮತ್ತು ಪರಿಣತಿ ಇಲ್ಲದ ವಿದ್ಯಾರ್ಥಿಗಳಿಗೆ ಇದೊಂದು ಹೊರಲಾರದ ಹೊರೆ. ಭಾಷೆಗಳ ಕಲಿಕೆಯಲ್ಲಿ ವಿಶೇಷ ಆಸಕ್ತಿ ಮತ್ತು ಅಭಿಕ್ಷಮತೆ ಉಳ್ಳ ಮಕ್ಕಳಿಗೆ ವಿಜ್ಞಾನ, ಗಣಿತ ಇತ್ಯಾದಿ ವಿಷಯಗಳ ಬದಲಿಗೆ ಎರಡೋ ಮೂರೋ ಭಾಷೆಗಳನ್ನು ಹೆಚ್ಚುವರಿಯಾಗಿ ಕಲಿಯುವ ಅಥವಾ ಉನ್ನತ ಹಂತದ ಭಾಷಾಧ್ಯಯನ ಮಾಡುವ ಅವಕಾಶಗಳೂ ಇಲ್ಲ. ಒಟ್ಟಿನಲ್ಲಿ ವಿಷಯಗಳ ಆಯ್ಕೆ, ಅಧ್ಯಯನದಲ್ಲಿ ಶಾಲಾ ಹಂತದಲ್ಲಿ ಆಯ್ಕೆಗಳೇ ಇಲ್ಲದ ಸ್ಥಿತಿಯಲ್ಲಿ ನಾವಿದ್ದೇವೆ. ರಾಷ್ಟ್ರಮಟ್ಟದ ಪಠ್ಯಕ್ರಮಗಳೂ ಈ ಅಂಶವನ್ನು ಮನಗಾಣದಿರುವುದು ಶೋಚನೀಯ. ಸಬಲೀಕರಣ, ಸ್ವಾಯತ್ತತೆ, ವಿಕೇಂದ್ರೀಕರಣದ ಘೋಷಣೆಗಳು ಮೊಳಗುತ್ತಿವೆಯೇ ಹೊರತು ಆಚರಣೆಯಲ್ಲಿ ಕಂಡು ಬರುತ್ತಿಲ್ಲ. ಈಗ ಒಂದನೆಯ ತರಗತಿಯಿಂದ ಇಂಗ್ಲಿಷ್ ಕಲಿಕೆಯ ಮೂಲಕ ಕನ್ನಡವನ್ನು ಉಳಿಸಲು ಕಂಕಣಬದ್ಧರಾಗಿದ್ದೇವೆ ! ದ್ವಿಭಾಷಿಕತೆ ಹಾಗೂ ದ್ವಿತೀಯ ಭಾಷಾ ಕಲಿಕೆಯ ಸಿದ್ಧಾಂತ, ಬೋಧನ ವಿಧಾನ ಇತ್ಯಾದಿಗಳ ಸ್ಪಷ್ಟ ಕಲ್ಪನೆಯಿಲ್ಲದೆ ಕೇವಲ ಸಾಮಾಜಿಕ ಒತ್ತಡಗಳನ್ನು ಪರಿಗಣಿಸಿ ಯಾವ ಪೂರ್ವ ಸಿದ್ಧತೆಗಳನ್ನು ಮಾಡಿಕೊಳ್ಳದೆ ತರಾತುರಿಯಿಂದ ಚಕ್ರಸುಳಿಗಳುಳ್ಳ ಮಡುವಿಗೆ ಹಾರಲು ತುದಿಗಾಲಲ್ಲಿದ್ದೇವೆ !

ದ್ವಿತೀಯ ಭಾಷೆಯ ಕಲಿಕೆಗೆ ಸಂಬಂಧಿಸಿದ ಕೆಲವು ವಿಚಾರಗಳನ್ನು ಸೂತ್ರರೂಪದಲ್ಲಿ ಹೀಗೆ ಹಿಡಿದಿಡಬಹುದು :

೧. ಪ್ರಥಮ ಭಾಷೆ ಮತ್ತು ಆ ಭಾಷೆಯ ಸಂಸ್ಕೃತಿ ಪ್ರಬಲವಾಗಿದ್ದರೆ ದ್ವಿತೀಯ ಭಾಷೆ ಅದರ ಜೊತೆ ಸೇರಿಕೊಳ್ಳುತ್ತದೆ. ಪ್ರಥಮ ಭಾಷೆ ಹಾಗೂ ಅದರ ಸಂಸ್ಕೃತಿ ದುರ್ಬಲ ವಾಗಿದ್ದರೆ ದ್ವಿತೀಯ ಭಾಷಾ ಜ್ಞಾನ ಪ್ರಬಲವಾಗಿ ಪ್ರಥಮ ಭಾಷೆ ಕ್ರಮೇಣ ವ್ಯಕ್ತಿಯ ವ್ಯವಹಾರದಲ್ಲಿ ಮೂಲೆಗುಂಪಾಗುತ್ತದೆ.

೨. ಪ್ರಥಮ ಭಾಷಾ ಶಿಕ್ಷಣ ಉತ್ತಮವಾಗಿದ್ದರೆ ಅದು ದ್ವಿತೀಯ ಭಾಷಾ ಕಲಿಕೆಗೆ ನೀರೆರೆದು ಪೋಷಿಸುತ್ತದೆ.

೩. ದ್ವಿತೀಯ ಭಾಷಾ ಕಲಿಕೆ-ಬೋಧನೆಯು ಭಾಷಾ ವಿಜ್ಞಾನ, ನರ ಭಾಷಾ ವಿಜ್ಞಾನ, ಸಮಾಜ ಭಾಷಾ ವಿಜ್ಞಾನ, ಸಾಮಾಜಿಕ ಹಾಗೂ ಜ್ಞಾನ ಮನೋವಿಜ್ಞಾನ ಕ್ಷೇತ್ರಗಳನ್ನು ವಿಶೇಷವಾಗಿ ಅವಲಂಬಿಸಿದೆ.

೪. ದ್ವಿತೀಯ ಭಾಷಾ ಗಳಿಕೆ ಅಥವಾ ಕಲಿಕೆಯು ವಿದ್ಯಾರ್ಥಿಯ ವಿಕಾಸದ ವಿವಿಧ ಹಂತ ಗಳನ್ನು ಸಾಮಾಜಿಕ ಪಾರಸ್ಪರಿಕ ಕ್ರಿಯೆ ಹಾಗೂ ಜ್ಞಾನ ಗ್ರಹಿಕೆಯ ಶಕ್ತಿಯನ್ನು ಅವಲಂಬಿಸಿದೆ.

೫. ಭಾಷಾ ಗಳಿಕೆಯ ಶಿಖರಕಾಲ ಎರಡರಿಂದ ಆರು ವರ್ಷ ಪ್ರಾಯ ಎಂದರೂ ಕೂಡ ದ್ವಿತೀಯ ಭಾಷಾ ಕಲಿಕೆಗೆ ಅತ್ಯಂತ ಸೂಕ್ಷ್ಮವೂ ಪ್ರಶಸ್ತವೂ ಆದ ಕಾಲ ಎಂಬುದಿಲ್ಲ.

೬. ದ್ವಿತೀಯ ಭಾಷಾ ಕಲಿಕೆಯಲ್ಲಿ ಕಲಿಯುವವರು ಮಾಡುವ ದೋಷಗಳಿಗೆ ಪ್ರಥಮ ಭಾಷಾ ಸನ್ನಿವೇಶದಿಂದ ದ್ವಿತೀಯ ಭಾಷಾ ಸನ್ನಿವೇಶಕ್ಕೆ ಆಗುವ ಕಲಿಕೆಯ ನೇತ್ಯಾತ್ಮಕ ವರ್ಗಾವಣೆ ಮತ್ತು ವಿಕಾಸದ ಹಂತಗಳಲ್ಲಿನ ನ್ಯೂನತೆಗಳೇ ಕಾರಣ.

ಕರ್ನಾಟಕದಲ್ಲಿ ರಾಜ್ಯ ಭಾಷೆಯೂ ಪ್ರಾದೇಶಿಕ ಭಾಷೆಯೂ ವ್ಯಾವಹಾರಿಕ ಭಾಷೆಯೂ ಆಡಳಿತ ಭಾಷೆಯೂ ಆದ ಕನ್ನಡವನ್ನು ಎಲ್ಲ ಮಕ್ಕಳು ಒಂದನೆಯ ತರಗತಿಯಿಂದಲೇ ಕಡ್ಡಾಯವಾಗಿ ಕಲಿಯಬೇಕು ಎಂದು ಒತ್ತಾಯಿಸದೆ ಇಂಗ್ಲಿಷನ್ನು ಕಡ್ಡಾಯವಾಗಿ ಕಲಿಸಬೇಕು ಎಂದು ವಾದ ಮಾಡುತ್ತಿರುವವರು ದ್ವಿತೀಯ ಭಾಷಾ ಕಲಿಕೆ-ಬೋಧನೆಗೆ ಸಂಬಂಧಿಸಿದಂತೆ ಈಗ ಉಲ್ಲೇಖಿಸಿದ ವಿಚಾರಗಳನ್ನು ಪರಿಶೀಲಿಸಿದ್ದಾರೆಯೆ ?

ನಾವಿಂದು ನಮ್ಮನ್ನು ಆಳುವ ಸರಕಾರವನ್ನು ಕೇಳಬೇಕಾಗಿದೆ : ಪ್ರಾಥಮಿಕ ಹಂತದಿಂದ ಮೊದಲ್ಗೊಂಡು ಸ್ನಾತಕೋತ್ತರ ಶಿಕ್ಷಣ ಹಂತದವರೆಗೆ ಶಿಕ್ಷಣ ಮಾಧ್ಯಮದ ವಿಷಯದಲ್ಲಿ ಸರಕಾರದ ಅಧಿಕೃತ ಭಾಷಾ ನೀತಿ ಏನು ? ಈ ನೀತಿಯ ಅನುಷ್ಠಾನ ಕ್ರಮ ಹೇಗೆ ? ಕನ್ನಡದ ಸರ್ವಾಂಗೀಣ ವಿಕಾಸಕ್ಕೆ ಸಂಬಂಧಿಸಿದಂತೆ ಸರಕಾರದ ಮುಂದೆ ಏನು ನೀಲನಕ್ಷೆ ಇದೆ ? ಅದು ಎಷ್ಟು ವರ್ಷಗಳಲ್ಲಿ ವ್ಯವಸ್ಥಿತವಾಗಿ ಯೋಜನಾಬದ್ಧವಾಗಿ ಜಾರಿಗೆ ಬರುತ್ತದೆ ? ಪ್ರಾಥಮಿಕ ಶಿಕ್ಷಣದಿಂದ ಹಿಡಿದು ಉನ್ನತ ಶಿಕ್ಷಣ ಮತ್ತು ಸಂಶೋಧನೆಯವರೆಗೆ ಕನ್ನಡ ಮಾಧ್ಯಮದಲ್ಲಿ ಕಲಿಯಬೇಕೆಂದು ಬಯಸುವ ವಿದ್ಯಾರ್ಥಿಗಳಿಗೆ ಸರಕಾರ ಯಾವ ಬಗೆಯಲ್ಲಿ ಪ್ರೋತ್ಸಾಹ ನೀಡುತ್ತದೆ ? ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಸರಕಾರಿ, ಖಾಸಗಿ ಹಾಗೂ ಐಟಿ-ಬಿಟಿ ಸಾಮ್ರಾಜ್ಯದಲ್ಲಿ ಏನು ಉದ್ಯೋಗಾವಕಾಶಗಳನ್ನು ಕಲ್ಪಿಸಲಿದೆ ? ಜಾಗತೀಕರಣ, ಉದಾರೀಕರಣ, ವಾಣಿಜ್ಯೀಕರಣದ ಈ ದಿನಗಳಲ್ಲಿ ಕನ್ನಡದ ಅಂತಃಸತ್ವವನ್ನು ಕರ್ನಾಟಕ ಸರಕಾರ ಹೇಗೆ ಕಾಪಾಡುತ್ತದೆ ? ಎಂದು ಕನ್ನಡದ ಜನತೆ ಪ್ರಶ್ನಿಸಬೇಕಾಗಿದೆ. ನಮ್ಮ ನಮ್ಮ ನೆಲೆಗಳಲ್ಲಿ ಕನ್ನಡವನ್ನು ಬೆಳೆಸುವ ನಿಟ್ಟಿನಲ್ಲಿ ನಾವು ಏನು ಮಾಡಬಹುದೆಂದು ಅಂತರವಲೋಕನ ಮಾಡಿಕೊಳ್ಳುವ ಮತ್ತು ಕನ್ನಡದ ವಿಕಾಸಕ್ಕಾಗಿ ನಮ್ಮದೇ ಆದ ಕಿರುಹೆಜ್ಜೆಗಳನ್ನಿಡುವ ಪ್ರಾಮಾಣಿಕ ಪ್ರಯತ್ನಗಳನ್ನು ನಾವಿಂದು ಮಾಡಬೇಕಾಗಿದೆ.

**ಡಾ॥ ಮಹಾಬಲೇಶ್ವರ ರಾವ್**
ಪ್ರಾಚಾರ್ಯರು, ಡಾ॥ ಟಿ. ಎಂ. ಎ. ಪೈ ಶಿಕ್ಷಣ ಕಾಲೇಜು, ಉಡುಪಿ - ೫೭೬ ೧೦೨

# ನಮ್ಮನ್ನು ಸೆಳೆದು ಕಾಡುವ ತೂಫಾನ್ ಮೇಲ್

ಡಾ|| ನಾ. ಸೋಮೇಶ್ವರ




**ತೂಫಾನ್ ಮೇಲ್** ಜಯಂತ ಕಾಯ್ಕಿಣಿಯವರ ಸಣ್ಣ ಕಥೆಗಳ ಸಂಗ್ರಹ. ಜಯಂತ ಕಾಯ್ಕಿಣಿ ನಮ್ಮ ನಡುವಿನ ಅತ್ಯುತ್ತಮ ಸಣ್ಣ ಕಥೆಗಾರರಲ್ಲಿ ಒಬ್ಬರು. ಕಾಯ್ಕಿಣಿ ಅವರದು ಬಹುಮುಖ ಪ್ರತಿಭೆ. ಇವರು ಕವಿ, ಕಥೆಗಾರರು, ನಾಟಕಕಾರರು, ಟೆಲಿವಿಶನ್ ಆ್ಯಂಕರ್ ಹಾಗೂ ಚಿತ್ರ ಸಾಹಿತಿ. ಇವೆಲ್ಲ ಪ್ರವೃತ್ತಿಯ ಮಾತು. ವೃತ್ತಿಯಲ್ಲಿ ಇವರು ಜೀವ ಔಷಧ ರಸಾಯನ ತಜ್ಞರು. ಮೂಲತಃ ಗೋಕರ್ಣದವರಾದರೂ ತಮ್ಮ ಬದುಕಿನ ಬಹು ಕಾಲವನ್ನು ಮುಂಬೈಯಲ್ಲಿ ಕಳೆದ ಲೇಖಕರು. ಈಗ ಬೆಂಗಳೂರು ನಿವಾಸಿಗಳು. ಹೊಟ್ಟೆ ಪಾಡಿಗಾಗಿ ಯಾವುದೋ ಒಂದು ಕಾರ್ಖಾನೆಯಲ್ಲಿ ವೃತ್ತಿ ನಡೆಸುತ್ತಿದ್ದ ಕಾಯ್ಕಿಣಿ, ಅದನ್ನೆಲ್ಲ ಬಿಟ್ಟು ಈಗ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ಪೂರ್ಣ ತೊಡಗಿಸಿಕೊಂಡಿದ್ದಾರೆ. ಸ್ವಾತಂತ್ರ್ಯದ ಮುಕ್ತ ಬದುಕು ಜಯಂತರ ಸಾಹಿತ್ಯ ಕೃಷಿಗೆ ಒಂದು ಹೊಸ ಆಯಾಮವನ್ನು ನೀಡುತ್ತದೆ ಎಂಬುದು ಎಲ್ಲರ ನಿರೀಕ್ಷೆಯಾಗಿದೆ.

ಜಯಂತ ಕಾಯ್ಕಿಣಿ ಮೂಲತಃ ಕಥೆಗಾರರೆಂದು ನನ್ನ ಭಾವನೆ. ಪ್ರಸ್ತುತ ಸಂಕಲನ **ತೂಫಾನ್ ಮೇಲ್**ನಲ್ಲಿ ೧೧ ಕಥೆಗಳಿವೆ. ಈ ಎಲ್ಲ ಕಥೆಗಳು ನಾಡಿನ ವಿವಿಧ ಪತ್ರಿಕೆಗಳಲ್ಲಿ ಹಾಗೂ ವಿಶೇಷಾಂಕಗಳಲ್ಲಿ ಈಗಾಗಲೇ ಪ್ರಕಟವಾಗಿರುವಂತಹವು. ಅವೆಲ್ಲವನ್ನು ಸಂಕಲಿಸಿ, ೧೧ ಕಥೆಗಳಲ್ಲಿ ಒಂದಾದ **ತೂಫಾನ್ ಮೇಲ್** ಎಂಬ ಕಥೆಯ ಶೀರ್ಷಿಕೆಯನ್ನೇ ಪುಸ್ತಕಕ್ಕೂ ನೀಡಲಾಗಿದೆ. ಅಂಕಿತ ಪುಸ್ತಕದ ಕಂಬತ್ತಳ್ಳಿ ದಂಪತಿಗಳು ಪ್ರಕಟಿಸಿರುವ ಈ ಪುಸ್ತಕದ ಬೆಲೆ ೬೦ ರೂಪಾಯಿಗಳು. ಅರ್ಥವತ್ತಾದ ಸುಂದರ ಮುಖಪುಟ ಹಾಗೂ ತಪ್ಪಿಲ್ಲದ ಆಕರ್ಷಕ ಮುದ್ರಣ ಮನಸೆಳೆಯುತ್ತದೆ.

ಜಯಂತ ಕಾಯ್ಕಿಣಿಯವರು ಅರಿಕೆಯಲ್ಲಿ ಶಾಹ್‌ರುಖ್ ಖಾನನು ನನ್ನ ಮಗ, ಹಿಂದೆಂದೋ ಜಾತ್ರೆಯಲ್ಲಿ ಕಳೆದು ಹೋಗಿದ್ದ ಅವನೇ ನನ್ನ ಮಗ. ನನ್ನನ್ನು ಅವನ ಬಳಿಗೆ ಕೊಂಡೊಯ್ಯಿರಿ ಎಂದು ಶಾಹ್‌ರುಖ್ ಖಾನನ ಮನೆಯ ಮುಂದೆ ರಂಪ ಎಬ್ಬಿಸಿ, ಮಗನನ್ನು ಪಡೆಯಲು ಕೋರ್ಟಿಗೂ ಹೋಗಲು ಸಿದ್ಧವಾದ ನೈಜ ಘಟನೆಯನ್ನು ಪ್ರಸ್ತಾಪಿಸುತ್ತಾ, ಏಕಾಏಕಿ ಆ ತಾಯಿಗೆ ಹಾಗೇಕೆ ಅನಿಸಿತು ? ಹಾಗೂ ವಿಚಿತ್ರವಾದ ಆದರೆ ತೀವ್ರವಾದ ಆ ಹಠ ಶಾಹ್‌ರುಖ್ ಖಾನನ ಮನಸ್ಸನ್ನು ಹೇಗೆ ಕಲಕುತ್ತಿರಬಹುದು ? ಎಂದು ಪ್ರಶ್ನಿಸುವ ಲೇಖಕರು, ಕತೆಗಿಂದ ಮಿಗಿಲಾದ ಸತ್ಯ ಯಾವುದು ಎಂದು ಪ್ರಶ್ನಿಸುತ್ತಾರೆ. ವಿಚಿತ್ರವಾದ, ತೀವ್ರವಾದ, ಮನಕಲಕುವ ಸಹಜತೆಯು ಇಲ್ಲಿರುವ ೧೧ ಕಥೆಗಳ ಒರತೆಯಾಗಿ ಪೋಷಿಸುತ್ತಾ ಹೋಗುತ್ತವೆ.




ಜಯಂತ ಮುಂಬೈ ವಾಸಿಯಾಗಿ, ೨೫ ವರ್ಷಗಳ ಕಾಲ ಅಲ್ಲಿ ವೃತ್ತಿ ಜೀವನವನ್ನು ನಡೆಸಿರುವರು. ಹಾಗಾಗಿ ಇಲ್ಲಿನ ಎಲ್ಲಾ ಕಥೆಗಳು ಮುಂಬೈ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನಡೆಯುತ್ತವೆ. ಜಯಂತರ ಕಥೆಗಳಲ್ಲಿ ಬರುವ ಎಲ್ಲ ವ್ಯಕ್ತಿಗಳು ಸಾಮಾನ್ಯರು; ಮಧ್ಯಮ ಹಾಗೂ ಶ್ರೀಮಂತ ವರ್ಗದ ಜನರಿಗೆ ಇವರ ಕಥೆಗಳಲ್ಲಿ ಸ್ಥಾನವಿಲ್ಲ. ಶ್ರೀಸಾಮಾನ್ಯ ಮಾತ್ರ ನಿಜವಾಗಿ ಬದುಕಲು ಸಾಧ್ಯ. ಸಹಜ ಬದುಕು ಅವನಿಂದ ಮಾತ್ರ ಸಾಧ್ಯ. ನೋವು-ನಲಿವುಗಳಿಗೆ ಮುಕ್ತವಾಗಿ ಸ್ಪಂದಿಸುವ ಛಾತಿ ಅವನಿಗೆ ಮಾತ್ರ ಇರುತ್ತದೆ. ಹಾಗಾಗಿ ಜಯಂತರು ಶ್ರೀಸಾಮಾನ್ಯರ ಪರಕಾಯಪ್ರವೇಶ ಮಾಡಿ, ಅವರ ತುಮುಲಗಳನ್ನು ಅರಿಯುವ ಅದಮ್ಯ ಬಯಕೆಯನ್ನು ಹೊಂದಿರುವುದು ನಮಗೆ ಸ್ಪಷ್ಟವಾಗುತ್ತದೆ. ಹಾಗಾಗಿ ಸಾಮಾನ್ಯರ ಸಣ್ಣ ಸಣ್ಣ ಆಸೆಗಳು, ಮಾನವ ಸಹಜ ದೌರ್ಬಲ್ಯಗಳು, ಬಣ್ಣ ಬಣ್ಣದ ಕನಸುಗಳು ಎಲ್ಲಾ ನಮ್ಮ ಮುಂದೆ ಬಟಾಬೆತ್ತಲಾಗುತ್ತವೆ. ಹಾಗಾಗಿ ನಮಗೆ ಮುಂಬೈ ನಗರದಲ್ಲಿ ಮಾತ್ರ ಕಾಣಬಹುದಾದಂತಹ ೧೦ x ೧೦ರ ಕೋಣೆಯ ಅಂಡದಲ್ಲಿರುವ ಬ್ರಹ್ಮಾಂಡ ದರ್ಶನ ಮಾಡಲು ಸಾಧ್ಯವಾಗುತ್ತದೆ. ಮುಂಬೈ ಜೀವನದ ಪರಿಚಯವಿಲ್ಲದವರಲ್ಲಿ ಇದು ಒಂದು ರೀತಿಯ ಭಯವನ್ನು ಹುಟ್ಟಿಹಾಕುತ್ತದೆ.

'ನೊ ಪ್ರೆಸೆಂಟ್ಸ್ ಪ್ಲೀಸ್' ಕಥೆಯಲ್ಲಿ ಹೆತ್ತವರು ಯಾರು ಎಂದು ತಿಳಿಯದ ಬಾಲ್‌ಪೆನ್ ತಯಾರಿಸುವ ಕಾರ್ಖಾನೆಯ ಗಂಡು-ಹೆಣ್ಣುಗಳ ಮದುವೆ ಸಿದ್ಧತೆಯ ಕಥೆಯಿದೆ. ಲಗ್ನಪತ್ರಿಕೆಯನ್ನು ಆಯ್ದು, ಅದರ ಒಕ್ಕಣೆಯನ್ನು ಬರೆಯುವಾಗ ಅಸಾವರಿ ಲೋಖಂಡೆ ಎಂಬ ಸಾಲಿಡ್ ಹೆಸರಿನ ಮುಂದೆ ಪೋಪಟ್ ಎಂಬ ಹೆಸರು ಜುಜುಬಿಯಾಗಿ, ಒಂದು ರೀತಿಯ ಕೀಳರಿಮೆ ತೀವ್ರವಾಗಿ ಕಾಡಿ, ಮದುವೆ ನಿಲ್ಲುವಂತಹ ಸ್ಥಿತಿ ರೂಪುಗೊಳ್ಳುವುದು ವಿಚಿತ್ರ ಎನಿಸಿದರೂ ಅದು ನಿಜವಾಗುತ್ತದೆ. ಹೆತ್ತವರು ಯಾರು ಎಂದು ತಿಳಿಯದ ಅಸಾವರಿ, ಅಪರೂಪವಾಗಿರುವ ರಾಗದ ಹೆಸರನ್ನು ಪಡೆಯುವ ಪರಿ ಕುತೂಹಲಕರವಾಗಿದೆ ಎನಿಸಿದರೂ, ನಾಮಕರಣವನ್ನೇ ಒಂದು ಉತ್ಸವವನ್ನಾಗಿ ಆಚರಿಸುವ ಮಧ್ಯಮವರ್ಗದವರ ಆಡಂಬರವನ್ನು ವಿಡಂಬಿಸುವಂತಿದೆ. 'ಕಣ್ಮರೆಯ ಕಾಡು'ವಿನಲ್ಲಿ ಮನೆಯಿಂದ ಮಗನನ್ನು ಓಡಿಸಿದ ನಂತರ, ಮನೆ ಮಂದಿ ಅವನಿಗಾಗಿ ಹಪಹಪಿಸುವ ಚಿತ್ರದೊಡನೆ ತಂದೆಯಾದವನು ರಾತ್ರಿಯಾದ ಕೂಡಲೇ ಪ್ಲಾಟ್‌ಫಾರ್ಮಿನಲ್ಲಿ ಮಲಗಿರುವವರ ಚಾದರುವನ್ನು ಸರಿಸಿ, ಮುಖಕ್ಕೆ ಟಾರ್ಚುಲೈಟು ಬಿಟ್ಟು ಹುಡುಕುವ ಸನ್ನಿವೇಶ ಹೃದಯಂಗಮವೆನಿಸುತ್ತದೆ. ೧೦ x ೧೦ ಕೋಣೆಯಲ್ಲಿ ವಾಸಿಸುತ್ತಿದ್ದರೂ ಒಬ್ಬರಿಗೊಬ್ಬರು ಅಪರಿಚಿತರಾಗಿ ಬದುಕುವ 'ದಾರುಣ' ಚಿತ್ರವನ್ನು ಕಣ್ಣಿಗೆ ಕಟ್ಟುವ 'ಪಾರ್ಟನರ್' ಕಥೆಯಲ್ಲಿ ಇದ್ದಕ್ಕಿದ್ದಹಾಗೆ ತೀವ್ರ ಅಪೆಂಡಿಸೈಟಿಸ್ಸಿಗೆ ಗುರಿಯಾಗಿ, ತುರ್ತು ಆಪರೇಶನ್ನಿಗೆ ಒಳಗಾಗುವ ಪಾರ್ಟನರ್‌ನನ್ನು ಆಸ್ಪತ್ರೆಗೆ ಸಾಗಿಸಿ, ಆಪರೇಶನ್ ಫಾರ್ಮಿಗೆ ಸಹಿಮಾಡಿ, ಅವನ ಕೊಳೆತ ಅಪೆಂಡಿಕ್ಸನ್ನು "ನಾಗರಿಕ ಅವಿಶ್ವಾಸದ ಪರಮ ರೂಪಕದಂತೆ, ಅಲ್ಯುಮಿನಿಯಂ ತಟ್ಟೆಯ ಬೆಳ್ಳನೆ ಹತ್ತಿಯಲ್ಲಿ ಕೂತಿದ್ದ ಆ ಪುಟ್ಟ ಅಮಾಯಕ ಕರುಳಿನ ಬೆರಳು, ನಿಗೂಢ ನಂಟೊಂದನ್ನು ಅವನಲ್ಲಿ ಅರಳಿಸುವ" ಮಾನವೀಯ ಪವಾಡವನ್ನು ನಾವು ನೋಡಬಹುದಾಗಿದೆ. ಮುಂಬೈ ಮಹಾನಗರದಲ್ಲಿ ನೌಕರಿಗಳನ್ನು ಮತ್ತು ವಾಸದ ಕೋಣೆಗಳನ್ನು ಬೆಕ್ಕಿನ ಬಿಡಾರಗಳಂತೆ ಬದಲಿಸುತ್ತಾ ಬರುವ ಸತ್ಯಜಿತ ದತ್ತನಿಗೆ ಮದುವೆಯ ವಯಸ್ಸು ಮೀರಿ ಹೋಗಿರುತ್ತದೆ. ಇಂತಹ ಅಪರ ವಯಸ್ಸಿನಲ್ಲಿ ಸಂಜೀವ ಸೇನನೆಂಬ ಕನ್ಯಾಪಿತೃ, ಕನ್ಯಾಸೆರೆಯನ್ನು ಬಿಡಿಸಿಕೊಳ್ಳಲು ಸತ್ಯಜಿತನ ಬಳಿಗೆ ಬರುವುದು ನಾಟಕೀಯವಾಗಿ ಕಂಡರೂ ಕಣ್ಣನ್ನು ಒದ್ದೆ ಮಾಡುತ್ತದೆ. ತನ್ನ ಮಗಳನ್ನು ಸತ್ಯಜಿತನಿಗೆ ತೋರಿಸಬೇಕೆನ್ನುವಾಗ ಅವಳು ಮನೆಯಿಂದ ಹೊರಟು ಹೋಗಿರುತ್ತಾಳೆ. "ಅವಳು ವಾಪಸ್ಸು ಬಂದರೆ, ಒಂದು ದಿನ ಅವಳನ್ನು ಖಂಡಿತ ಒಪ್ಪಿಸಿ ಕರೆತರುತ್ತೇನೆ" ಎನ್ನುವ ಸಂಜೀವಸೇನನ ಮಾತು ನಮ್ಮ ಸಮಾಜಕ್ಕೆ ಹಿಡಿದ ಕನ್ನಡಿಯಾಗುತ್ತದೆ. ಬಕುಲ ಅಥವಾ ಪಗಡೇ ಹೂವು ತೀಡಿದಷ್ಟು ಪರಿಮಳವನ್ನು ಸೂಸುವ ಹೂವು. ಹಸಿಯಾಗಿರುವಾಗ ಅದು ನೀಡುವ ಪರಿಮಳಕ್ಕಿಂತ, ಅದು ಒಣಗಿದ ಮೇಲೆ ನೀಡುವ ಪರಿಮಳ ತೀವ್ರವಾಗಿರುತ್ತದೆ. ಮದುವೆಯಾಗುವ ಧೈರ್ಯವಿಲ್ಲದ ಶಶಾಂಕ, ಮನೆಬಾಗಿಲಿಗೆ ಬಂದ ಸರೋಜಿನಿಯನ್ನು ತಿರಸ್ಕರಿಸುವುದು, ಇದಾದ ೩೦ ವರ್ಷಗಳ ನಂತರ ಆಸ್ಪತ್ರೆಯಲ್ಲಿ ಆಕಸ್ಮಿಕವಾಗಿ ಭೇಟಿಯಾಗುವುದು ನಾಟಕೀಯವಾಗಿಯೇ ಇದೆ. ಆದರೆ ಔಷಧಗಳ ಪಾರ್ಶ್ವ ಪರಿಣಾಮವಾಗಿ ನೆನಪನ್ನೇ ಶಾಶ್ವತವಾಗಿ ಕಳೆದುಕೊಳ್ಳಲಿರುವ ಸರೋಜಿನಿ, ಚಿಕಿತ್ಸೆಯೇ ಬೇಡ ಎಂದು ಹಠ ಹಿಡಿಯುವ ಸನ್ನಿವೇಶ ವಿಧಿಯ ಅಟ್ಟಹಾಸದಂತೆ ಕಂಡರೂ. ಅದು ಬಕುಲ ಗಂಧದ ತೀವ್ರ ಪರಿಣಾಮ ಎಂಬುದು ಓದುಗರಿಗೆ ಸ್ಪಷ್ಟವಾಗುತ್ತದೆ. 'ಬಾವಿಯಲ್ಲೊಂದು ಬಾಗಿಲು' ಇತ್ತೀಚಿನ ಜನಾಂಗಕ್ಕೆ ಅಷ್ಟಾಗಿ ಪರಿಚಯವಿಲ್ಲದ

ಸಾಹಸಕ್ರೀಡೆಯಲ್ಲಿ ತೊಡಗಿರುವ ರಾಕೆಟ್ ತೇಜಬಲಿ ಎಂಬುವವನ ಕಥೆ. ಮರದ ಹತ್ತಾಳೆತ್ತರದ ಬಾವಿ. ಬಾವಿಯ ಮೇಲ್ಭಾಗದಲ್ಲಿ ಅಟ್ಟಣೆ. ಜನರೆಲ್ಲ ಅಟ್ಟಣೆಯಲ್ಲಿ ನೆರೆದಿರುವಾಗ ಮರದ ಬಾವಿಯ ತಳದಿಂದ ಮೋಟರ್‌ಬೈಕನ್ನು ಹತ್ತಿಸಿಕೊಂಡು ವೃತ್ತಾಕಾರವಾಗಿ ಬಾವಿಯ ಗೋಡೆಯನ್ನು ಹತ್ತುತ್ತಾ ಬಾವಿಯ ಮೇಲ್ಭಾಗಕ್ಕೆ ಬರುವ ರೀತಿ ನೋಡುಗರ ಮೈಯನ್ನು ಜುಮ್ಮೆನ್ನಿಸುತ್ತದೆ. ಹೀಗೆ ಮೋಟರ್‌ಬೈಕನ್ನು ನಡೆಸುವಾಗ ಪ್ರೇಕ್ಷಕರು ಎಸೆಯುವ ಕರವಸ್ತ್ರ, ಪುಡಿಗಾಸನ್ನು ಹಿಡಿಯುವ ರೀತಿ ಅದ್ಭುತವಾಗಿರುತ್ತದೆ. ೫೦ ವರ್ಷ ದಾಟಿದ ತೇಜಬಲಿ ಹಾಗೂ ಕ್ಯಾಂಪಿನ ಯಜಮಾನ ರಾಮ್ ಪ್ಯಾರೆಯ ಅಗಲುವ ಅನಿವಾರ್ಯ ಸನ್ನಿವೇಶ, ಬದುಕೆಂಬ ಬಾವಿಯಿಂದ ಸಾವೆಂಬ ಬಾಗಿಲ ಮೂಲಕ ತೇಜಬಲಿ ಪಾರಾಗುವುದರ ಜೊತೆಗೆ ಕಥೆ ಮುಗಿಯುತ್ತದೆ. ಮುಂಬೈಯಲ್ಲಿರುವ 'ಗೇಟ್‌ವೇ ಆಫ್ ಇಂಡಿಯ' ನಗರಕ್ಕೆ ಮಹಾದ್ವಾರವೋ ಅಥವಾ ಸಾಗರಕ್ಕೆ ಮಹಾದ್ವಾರವೋ ಎಂಬ ಪ್ರಶ್ನೆಯಡಿ, ಮುಂಬೈ ಜೀವನ್ಮುಖಿಯೋ ಅಥವಾ ಮರಣಮುಖಿಯೋ ಎಂಬ ಪ್ರಶ್ನೆಯೂ ಅಡಗಿದೆ. ಕೆಲಸವನ್ನು ಹುಡುಕುತ್ತಿರುವ ಸುಧಾಂಶು, ಕೆಳ ಮಧ್ಯಮ ವರ್ಗಕ್ಕೆ ಜೋತು ಬಿದ್ದು ವಾಸ್ತವತೆಗೆ ಹೊಂದಿಕೊಳ್ಳಲಾಗದೆ ಒದ್ದಾಡುವ ಚಿತ್ರ ನಮಗೆ ಕಾಣುತ್ತಿರುವಂತೆಯೇ, ಪಾಲಿಯು ಗೇಟ್‌ವೇ ಮೂಲಕ ಲಾಂಚ್ ಹತ್ತುವಾಗ ''ಈ ಜಗವೇ ನಮ್ಮ ಮಕ್ಕಳಂತಲ್ಲವೆ? ಈ ಇಡೀ ವಿಶ್ವವೇ ನಮ್ಮ ಹತ್ತು ಚದುರಡಿಯ ಪುಟ್ಟ ಖೋಲಿಯಲ್ಲಿ ಹಿಡಿಸುತ್ತದಲ್ಲವೆ? ಹೇಳು ಪಾಲಿ. ಇದರಾಚೆಗಿದೆಯೆ? ನನಗೆ ನಿನ್ನ ಶಕ್ತಿ ಕೊಡು ಪಾಲಿ. ತೋರಿಸು ಪಾಲಿ. ಈ ಗೇಟ್‌ವೇಗೆ ಬಾಗಿಲಿದೆಯೆ?'' ಎನ್ನುವ ಸುಧಾಂಶುವಿನ ಸ್ವಗತದಲ್ಲಿ ಜನಸಾಮಾನ್ಯರು ಬದುಕನ್ನು ನಡೆಸುವ ಆಶಯ, ಭರವಸೆ ಹಾಗೂ ಚೇತನವಿದೆ. ಬದುಕನ್ನು ಗಂಡಿಗಿಂತ ತೀವ್ರವಾಗಿ ಹಾಗೂ ಗಾಢವಾಗಿ ಪ್ರೀತಿಸುವ ಶಕ್ತಿ ಹೆಣ್ಣಿಗಿರುವುದನ್ನು ಎತ್ತಿತೋರಿಸುತ್ತದೆ. ಭೂಪಾಲಿನ ಅನಿಲ ದುರಂತವೇ ಟಿಕ್‌ಟಿಕ್‌ಗುಡುವ 'ಟಿಕ್ ಟಿಕ್ ಗೆಳೆಯ'ದಲ್ಲಿ ಕ್ವಿಜ಼್ ಸ್ಪರ್ಧೆಯಲ್ಲಿ ಬರಬಹುದಾದ ಹಣದಿಂದ ವಿದ್ಯೆಯನ್ನು ಮುಂದುವರೆಸಬೇಕೆನ್ನುವ ಮಧುಬನಿ ಹಾಗೂ ೫೦ ವರ್ಷಗಳ ಹಿಂದೆ ಊರನ್ನು ಬಿಟ್ಟು ಓಡಿಬಂದ ಸೋಹನ್ ಲಾಲ, ಕ್ವಿಜ್‌ನಲ್ಲಿ ಪ್ರಶಸ್ತಿಗಳಿಸುವಂತಹ ಮಗಳನ್ನು ಪಡೆದಿದ್ದೇನೆ ಎಂದು ಜಗತ್ತಿಗೆ ತೋರಿಸುವ ಮೂಲಕ ತಂದೆಯ ತವಕವಿದೆ. ಸಾವು ಮಡುಗಟ್ಟಿರುವ ಈ ಕಥೆಯಲ್ಲಿ ವಿಶ್ವದ ಬೆಳದಿಂಗಳನ್ನೇ ತನ್ನೊಳಗೆ ಬಚ್ಚಿಟ್ಟುಕೊಂಡಿರುವ ಕರೀನಾಳನ್ನು ಪ್ರೀತಿಸುವ ಬುದ್ದೂರಾಮನ ಆಲ್ಜೀಮರ್ಸ್ ಕಾಯಿಲೆ, ಸಾವನ್ನು ಮರೆಯಿಸುವಂತಿದ್ದರೆ ಎಷ್ಟು ಚೆನ್ನು ಎಂದೆನಿಸುತ್ತದೆ. ಬುದ್ದೂರಾಮ ಮಾಡಿಕೊಡುವ ಟಿಶ್ಯೂ ಕಾಗದದ ದೋಣಿ ಇಡೀ ಜಗದ ಭಾರವನ್ನು ಹೂವಿನಂತೆ ಹೊತ್ತುಕೊಂಡು ಮೆಲ್ಲಗೆ ಬೆಳದಿಂಗಳಿನಲ್ಲಿ ಚಲಿಸುವಾಗ, ಸಾವಿನಲ್ಲಿ ಹುಟ್ಟುವ ಹುಟ್ಟಿನ, ಹುಟ್ಟಿನಲ್ಲಿ ಅಡಗಿರುವ ಸೊಬಗನ್ನು ಸೊಗಸಾಗಿ ಚಿತ್ರಿಸುತ್ತದೆ. ಹಳತು ಎನ್ನುವುದು ಹೊಸತಾಗಲೇಬೇಕು. ಹೊಸತಾಗುವಾಗ ಅದು ಸೂಕ್ತ ಬೆಲೆಯನ್ನು ತೆರಲೇಬೇಕು. ಚಲನಚಿತ್ರ ಮಂದಿರದ ಕಟ್ಟಡಗಳನ್ನು ಬೀಳಿಸಿ, ಅಲ್ಲಿ ಕಾಂಪ್ಲೆಕ್ಸ್ ಕಟ್ಟುವುದು ಹೊಸದೇನಲ್ಲ. ಕಟ್ಟಡದೊಡನೆ ಜನರ ಬದುಕು ಕುಸಿದು, ಅಲ್ಲಿ ಅವರು




ಕಂಡ ಸುಂದರ ಕನಸುಗಳೂ ಕರಗಿ ಹೋಗುತ್ತವೆ. 'ಒಪೆರಾ ಹೌಸ್'ನಲ್ಲಿ ಇಂದ್ರನೀಲನಿಗೆ ಸಿಗುವ ಖಾಲಿ ಫ್ಲಾಸ್ಕಿನ ಸುತ್ತ ಬೆಳೆಯುವ ಕಥೆಯಲ್ಲಿ ಎಂದೋ ಮಾಡಿದ ತಪ್ಪಿಗೆ ತುಡಿಯುವ ನಂದಾ ಬಾಯಿ, ನಾಚ್‌ವಾಲಿಗಳ ವಿಷಾದಭರಿತ ಆದರೆ ಅನ್ಯೋನ್ಯ ಚಿತ್ರ ದೊರೆಯುತ್ತದೆ.

ತೂಫಾನ್ ಮೇಲ್ ಕಥಾ ಸಂಕಲನದ ಎಲ್ಲಾ ಕಥೆಗಳನ್ನು ಓದಿ ಮುಗಿಸಿದ ಮೇಲೆ, ಮನಸ್ಸಿನಲ್ಲಿ ಉಳಿದು ನಿರಂತರವಾಗಿ ಎರಡು ಕಥೆಗಳು ನನ್ನನ್ನು ಕಾಡುತ್ತಿವೆ. ಅವುಗಳಲ್ಲಿ ಮೊದಲನೆಯದು 'ಭಾಮಿನಿ ಸಪ್ತಪದಿ', ಹಾಗೂ ಎರಡನೆಯದು 'ತೂಫಾನ್ ಮೇಲ್'. 'ಭಾಮಿನಿ ಸಪ್ತಪದಿ' ಎಂಬ ಶೀರ್ಷಿಕೆಯೇ ಆಕರ್ಷಕವಾಗಿದೆ, ಅರ್ಥಪೂರ್ಣವಾಗಿದೆ. ಗೋಕರ್ಣದಲ್ಲಿ ಹುಟ್ಟಿದ ಭಾಮಿನಿ ೮ನೆಯ ವರ್ಷದಲ್ಲಿ ಅಮ್ಮನನ್ನು ಕಳೆದುಕೊಂಡು, ಅಪ್ಪನೊಡನೆ ಊರುಬಿಟ್ಟು, ಅಹಮದಾಬಾದಿನ ಸ್ಟೇಷನರಿ ಅಂಗಡಿಯ ಪರೇಶನನ್ನು ಮದುವೆಯಾಗಿ, ಅಕಸ್ಮಾತ್ ನಗರಪಾಲಿಕೆಯ ಸದಸ್ಯಳಾಗಿ, ಅದ್ಭುತವಾಗಿ ಕೆಲಸ ಮಾಡುವುದರ ಮೂಲಕ ಹಾಗೂ ತನ್ನ ದೈಹಿಕ ಸೌಂದರ್ಯದ ಮೂಲಕ ಎಲ್ಲರ ಕಣ್ಣ ಕಿಸರಾಗಿ ಬೆಳೆದು, ಗಂಡನಿಂದಲೇ ಅಪಮಾನಕ್ಕೊಳಗಾಗಿ, ಮೋರ್ವಿ ದುರಂತದಲ್ಲಿ ಸಿಕ್ಕ ಅನಾಥ ಮಗುವನ್ನು ಕರೆದುಕೊಂಡು, ಕಟ್ಟಿಕೊಂಡ ಗಂಡ, ಹೆತ್ತ ಮಗಳನ್ನು ಬಿಟ್ಟು ಮತ್ತೆ ಗೋಕರ್ಣಕ್ಕೆ ಬರುವ ಚಿತ್ರ ಭಾಮಿನಿಯ ಗಟ್ಟಿ ಎದೆಯನ್ನು ತೋರಿಸುತ್ತದೆ. ವೈದಿಕ ವಿವಾಹದಲ್ಲಿ ಸಪ್ತಪದಿ ಬಹಳ ಮುಖ್ಯವಾದದ್ದು. ಬದುಕಿನ ಏಳು ಮುಖಗಳಲ್ಲಿ ಗಂಡನೊಡನೆ ಸಹಕರಿಸಿ ಬದುಕುವುದಾಗಿ ಪ್ರತಿಜ್ಞೆಗೈಯುವ ಸಪ್ತಪದಿಯ ಅರ್ಥವನ್ನು ತಿಳಿದುಕೊಂಡವರು ಬಹಳ ಕಡಮೆ. ಇಲ್ಲಿ ಭಾಮಿನಿ ತನ್ನ ನಂಬಿಕೆಯೊಡನೆ ಸಪ್ತಪದಿಯನ್ನು ತುಳಿದಿರುವುದರಿಂದ ಗಂಡ, ಹೆತ್ತ ಮಗಳು, ಅಧಿಕಾರ, ಸ್ಥಾನಮಾನ, ಹಣ ಎಲ್ಲವೂ ತುಚ್ಛವಾಗಿ ಹೋಗುತ್ತದೆ. ಈ ಕಥೆಯು ಎಲ್ಲಾ ಸೃಜನಶೀಲ ವ್ಯಕ್ತಿಗಳ ವೈಯಕ್ತಿಕ ಬದುಕಿನ ದುರಂತದ ಮಾದರಿಯಂತಿದೆ. ಬಾಗಾಪುರದ ಮಲ ಹೊರುವ ಹೆಂಗಸನ್ನು ನೋಡಿ ಬೆಚ್ಚಿ ಬೀಳುವ ಭಾಮಿನಿ ''ಭಾಭೀ... ನೀವ್ಯಾಕೆ ಮಲ ಹೊರುತ್ತೀರಿ, ಇದು ನಿಮಗೆ ಹೇಸಿಗೆಯೆನಿಸುವುದಿಲ್ಲವೇ? ಇದು ತಪ್ಪಲ್ಲವೇ? ಅದರಲ್ಲೂ ನೀವು ಹೆಂಗಸರೇ ಯಾಕೆ?'' ಎಂದು ಪ್ರಶ್ನೆ ಕೇಳಿದಾಗ ''ಅದರಲ್ಲೇನು... ನಾವು ನಮ್ಮ ಮಕ್ಕಳದನ್ನು ತೆಗೆಯುವುದಿಲ್ಲವೆ... ಹಾಗೇನೇ ಇದನ್ನೂ ತೆಗೀತೇವೆ...'' ಎಂದು ಆ ತಾಯಿ ಮುನ್ನಡೆಯುವಾಗ 'ಸಪ್ತಪದಿ' ಎನ್ನುವ ಶೀರ್ಷಿಕೆಯ ಅರ್ಥ ಮತ್ತಷ್ಟು ಗಾಢವಾಗಿ, ಭಾಮಿನಿಯ ಪಾತ್ರದ ಆಳ ಮತ್ತು ವೈಶಾಲ್ಯತೆ ಮತ್ತಷ್ಟು ಹೆಚ್ಚುತ್ತದೆ. ಈ ಒಂದು ವಾಕ್ಯದಿಂದ ಇಡೀ ಕಥೆಯೇ ಗೆದ್ದುಬಿಡುತ್ತದೆ. ಕಥೆ ಗೆಲ್ಲುವುದಕ್ಕಿಂತ, ಪ್ರತಿಯೊಬ್ಬ ಪ್ರಾಮಾಣಿಕ ಮನುಷ್ಯನೂ ಗೆಲ್ಲುತ್ತಾನೆ.

'ತೂಫಾನ್ ಮೇಲ್' ಎನ್ನುವ ಕಥೆಯು ಪುಸ್ತಕಕ್ಕೆ ತನ್ನ ಶೀರ್ಷಿಕೆಯನ್ನು ನೀಡಿದ ಕಥೆ. ಇದರ ಆರಂಭಿಕ ವಿವರಣೆ ಹೊಟ್ಟೆಯಲ್ಲಿ ಚೂರಿಯನ್ನು ಹಾಕಿ ಯಾರೋ ಕಲಕಿದಂತಹ ಸನ್ನಿವೇಶವನ್ನು ಸೃಷ್ಟಿಸಿಬಿಡುತ್ತದೆ. ಕಥಾನಾಯಕ ಮುನ್ನನಿಗೆ ತೂಫಾನ್ ಎಂಬ ಹೆಸರನ್ನು ತಂದುಕೊಡುವ ತೂಫಾನ್ ಮೈಲ್ ರೈಲು ಹೇಗೆ ಅವನ ಬದುಕಿನುದ್ದಕ್ಕೂ ನಿರಂತರವಾಗಿ ಕಾಡುತ್ತಾ ಹೋಗುತ್ತದೆಯೋ, ಹಾಗೆಯೇ ಓದುಗರನ್ನೂ ಕಾಡುತ್ತಾ ಹೋಗುವುದು ಹಾಗೂ ಪುಸ್ತಕವನ್ನು ಓದಿ ಮುಗಿಸಿದ ಮೇಲೂ ಕಾಡುತ್ತಾ ನಿಲ್ಲುವುದು ಖಂಡಿತ ಕಾಕತಾಳೀಯ ಅಲ್ಲ. ಚಲನಚಿತ್ರ ರಂಗದಲ್ಲಿ ಸ್ಟಂಟ್ ಕಲಾವಿದನಾಗಿ ಕೆಲಸಮಾಡುವ ತೂಫಾನ್, ಅಲ್ಲಿನ ಕಟುವಾಸ್ತವ ಚಿತ್ರವನ್ನು ಬಿಡಿಸುತ್ತಾ ಹೋಗುತ್ತಾನೆ. ನಮಗೆಲ್ಲಾ ಮನರಂಜನೆಯನ್ನು ನೀಡುವ ಹೀರೋವಿನ ಸ್ಟಂಟ್ ಹಿಂದೆ, ಸ್ಟಂಟ್ ಕಲಾವಿದರ ಎಂತಹ ಸಾಹಸಮಯ, ಆದರೆ ಅದರ ಹಿಂದೆ ಸಾವು-ಬದುಕುಗಳ ನೋವಿನ ಕಥೆ ಇದೆ ಎಂಬುದು ತಿಳಿಯುತ್ತದೆ. ಗ್ಲಾಸಿನ ಮೂಲಕ ಮೋಟರ್ ಬೈಕನ್ನು ಹಾರಿಸಿ, ಗಾಜನ್ನು ಒಡೆದುಕೊಂಡು, ಹಡಗಿನಿಂದ ಮರಳದಂಡೆಗೆ ಧುಮುಕುವುದರ ಮೂಲಕ ಸಾಯೋ ಆಟ ಆಡುವ, ಆದರೆ ವಾಸ್ತವದಲ್ಲಿ ಹೊಟ್ಟೆಪಾಡಿನ ಮಾರ್ಗವಾಗಿರುವ ಅವನ ವೃತ್ತಿಗೆ ಅವನ ತಂದೆ, ತೂಫಾನ್ ಮೇಲ್‌ನಿಂದ ಧುಮುಕುವ ದೃಶ್ಯವೇ ಸ್ಫೂರ್ತಿ! ಮಧುವಂತಿ ಹಾಗೂ ಬಲದೇವರ ಪ್ರಸಂಗ, ಸೀಟಿ ಹೊಡೆಗಾಗಲೆಲ್ಲ ದುಪಟ್ಟಾ ಇಲ್ಲದೆ ಎದೆಯನ್ನು ಒನ್ ಟು ತ್ರೀ ಫೋರಿಗೆ ಸರಿಯಾಗಿ ಕುಣಿಸುವ ಎಕ್ಸ್ಟ್ರಾ ನಟಿಯರ ಶೋಚನೀಯ ಬದುಕನ್ನು ಬಿಡಿಸುತ್ತದೆ. ಬಹಿರಂಗವಾಗಿ ಎದೆ ಕುಣಿಸುವ ಹೆಣ್ಣಿಗೆ ಗಂಡನ ಜೊತೆಯಲ್ಲಿ ಏಕಾಂತವಾಗಿರುವಾಗ ನಾಚಿಕೆ, ಮಾನ, ಮರ್ಯಾದೆ ಇರಬಾರದೇ, ಇದ್ದರೆ ಅಸಹಜವೇ ಎಂಬ ಪ್ರಶ್ನೆ ನಮ್ಮ ಮುಂದೆ ಧುತ್ತೆಂದು ನಿಲ್ಲುತ್ತದೆ. ಅಸಹಜ ಎಂದು ವಾದಿಸುವ ಬಲದೇವನು ನಮ್ಮನ್ನು ಬೆಚ್ಚಿ ಬೀಳಿಸುತ್ತಾನೆ. ಹೆಂಡತಿ ತನ್ನೊಡನೆ ನಾಚಿದಂತೆ ಮಾಡುತ್ತಾಳೆ ಎಂದು ದೂರುವ ಬಲದೇವನ ಪಾತ್ರ, ಮುಂಬೈ ಬದುಕಿನ ಕಠೋರ ಕೃತಕತೆಯನ್ನು ಎತ್ತಿತೋರುತ್ತದೆ. ಆದರೆ ವಾಸ್ತವದಲ್ಲಿ ನಿಜವಾಗಿಯೂ ನಾಚುವ ಮಧುವಂತಿ, ತನ್ನ ಹೆಸರಿನಂತೆಯೇ ಮಧುರ ಭಾವಗಳನ್ನು ಉಳ್ಳ ಹೆಣ್ಣು. ಮುಂಬೈ ನಗರದ ಗಟಾರದ ಅಡಿಯಲ್ಲಿ ಸದ್ದಿಲ್ಲದೆ ಹರಿಯುವ ಗಂಗೆಯ ಪ್ರತೀಕವಾಗಿದ್ದಾಳೆ. 'ತೂಫಾನ್ ಮೇಲ್' ಒಂದು ರೀತಿಯಾದ ವಿಚಿತ್ರ ಸಂಕಟಕ್ಕೆ ನಮ್ಮನ್ನು ಗುರಿಮಾಡುವ ಕಥೆ.

ಜಯಂತ ಕಾಯ್ಕಿಣಿ ತಮಗೆ ಮಾತ್ರ ಸಾಧ್ಯವಾಗುವಂತಹ ವಾಕ್ಯಗಳನ್ನು ಬರೆಯುವುದು ನಮಗೆ ಬೆರಗನ್ನು

ಉಂಟುಮಾಡುತ್ತದೆ. ''ಮನುಷ್ಯ ಬೇಕೆಂದಲ್ಲಿ ನಿಂತು ಬಿಡಬಲ್ಲ, ಆದರೆ ದಾರಿ ಹಾಗೆ ನಿಲ್ಲಬಲ್ಲುದೆ? ಪಬ್ಲಿಕ್ ಪಾರ್ಕಿನ ಗೋಡೆಯ ಮೇಲೆ ಉಳಿದಿರುವ ಹರಿದ ಪೋಸ್ಟರಿನಂತಹ ಕಾಮನೆಗಳು, ಹೊಸದೊಂದು ಉಪಗ್ರಹಕ್ಕೆ ಉಡ್ಡಾಣಗೈಯಲು ಆಯಲ್ಪಟ್ಟವನ ಕಂಗೆಡುವ ಮನಸ್ಸು, ಕೋಣೆಯಲ್ಲಿ ಕವಿದ ಮೂರ್ಖ ನಿಃಶಬ್ದ, ನಾಗರಿಕ ಅವಿಶ್ವಾಸದ ಪರಮರೂಪಕದಂತೆ ಕಾಣುವ ಅಮಾಯಕ ಕರುಳಿನ ಬೆರಳು, ವಿಸರ್ಜನೆಯ ಮರುದಿನ ಕೊಳದ ದಂಡೆಗೆ ಬಂದುಬೀಳುವ ದುರ್ಗೆ, ಮನವನ್ನು ಚೊಕ್ಕಾಗಿ ಗುಡಿಸುವ ಬೆಳಕಿನ ಕಸಬರಿಗೆ'' ಇಂತಹ ವಾಕ್ಯಗಳು ಪುಸ್ತಕದುದ್ದಕ್ಕೂ ದೊರೆಯುತ್ತವೆ, ಒಂದು ವಿಲಕ್ಷಣ ಅನುಭವವನ್ನು ನೀಡುತ್ತವೆ. ತೂಫಾನ್ ಮೇಲಿನಿಂದ ಕೆಳಕ್ಕೆ ಧುಮುಕುವ ಮನುಷ್ಯನ ವಿಚಿತ್ರ ಪ್ರಸಂಗದಂತೆ, ತಾನು ಹೆತ್ತ ಮಗಳ ಕನ್ಯತ್ವಕ್ಕೆ ಋಜುವಾತು ನೀಡುವ, ವೈದ್ಯರ ಸರ್ಟಿಫಿಕೇಟ್ ಹಿಡಿದು ಮದುವೆಗಂಡನ್ನು ನಂಬಿಸಲೆತ್ನಿಸುವ ಕನ್ಯಾಪಿತೃವಿನ ಚಿತ್ರ, ಮುಂಬೈ ಬದುಕನ್ನು ಕಾಣದವರಿಗೆ ಭಯ ತರಿಸುತ್ತದೆ. ಪಾತ್ರದ ಆಶಯವನ್ನು ಸಮರ್ಥವಾಗಿ ಎತ್ತಿ ತೋರುವ ಹೆಸರನ್ನು ಆಯ್ಕೆ ಮಾಡುವಲ್ಲಿ ಜಯಂತರು ತೋರುವ ಮುತುವರ್ಜಿ ನಮಗೆ ಮೆಚ್ಚುಗೆಯಾಗುತ್ತದೆ. ಅಸಾವರಿ, ಭಾಮಿನಿ, ತೂಫಾನ್, ಮಧುವಂತಿ, ಮಧುಬನಿ, ಬುದ್ಧೂರಾಮ್ ಮುಂತಾದ ಹೆಸರುಗಳನ್ನು ಗಮನಿಸಬಹುದು. ಹಾಗೆಯೇ 'ಬಕುಲ ಗಂಧ', 'ಕನ್ನಡಿ ಇಲ್ಲದ ಊರಲ್ಲಿ' ಹಾಗೂ 'ಟಿಕ್ ಟಿಕ್ ಗೆಳೆಯ' ಎಂಬ ಕಥಾ ಶೀರ್ಷಿಕೆಗಳು.

ಜಯಂತ ಕಾಯ್ಕಿಣಿಯವರ ಕಥೆ ಹೇಳುವ ರೀತಿ ಆತ್ಮೀಯವಾಗಿದೆ. ಕಥೆಯು ಮುಖ್ಯ ತಿರುವಿನಲ್ಲಿ ಥಟ್ಟನೆ ನಿಂತುಬಿಡುತ್ತದೆ. ಓದುಗರಿಗೆ ತೀವ್ರ ನಿರಾಸೆಯಾಗುತ್ತದೆ. ಆದರೆ ಓದುಗರ ಮನದಲ್ಲಿ ನಾನಾ ರೂಪವನ್ನು ಧರಿಸುವ ಅವಕಾಶವನ್ನು ಒದಗಿಸುತ್ತದೆ. ಜಯಂತರು ತೀರಾ ಸಾಮಾನ್ಯ ಓದುಗರಿಗೆ ಬೇಗನೆ ದಕ್ಕುವುದಿಲ್ಲ.

ಜಯಂತರ ಕಥೆಗಳನ್ನು ಹೇಗೆ ನಾವು ಸಮರ್ಥವಾಗಿ ಓದಬಹುದೋ, ಹಾಗೆಯೇ ಇಡೀ ಕಥೆಯನ್ನು ಕೇಳುವ ಸಾಧ್ಯತೆಯಿದೆ. ಕಥೆಯನ್ನು ಒಂದು ಆಡಿಯೋ ಸಿ.ಡಿ/ ಕ್ಯಾಸೆಟ್ ಮಾಡಿಬಿಟ್ಟರೆ, ಕಥೆಯು ಕೇಳುಗರ ಮೇಲೆ ಮಾಡುವ ಪರಿಣಾಮ ಅಗಾಧವಾಗಿರುತ್ತದೆ, ಕಥೆಯ ಅರ್ಥ ಮತ್ತಷ್ಟು ಹಿಗ್ಗುತ್ತದೆ ಎಂದು ನನ್ನ ಭಾವನೆ. ನಿರೂಪಕನ ಜೊತೆಗೆ, ಕಥಾ ಪಾತ್ರಗಳಿಂದ ಸಂಭಾಷಣೆಯನ್ನು ಹೇಳಿಸಿ, ಅಗತ್ಯ ಹಿನ್ನೆಲೆ ಶಬ್ದಗಳನ್ನು ನೀಡಿದರೆ, ಕನ್ನಡದಲ್ಲಿ ಒಂದು ಅದ್ಭುತ ಶ್ರವ್ಯ ಪ್ರಕಾರ ರೂಪುಗೊಳ್ಳಲು ಸಾಧ್ಯವಿದೆ. ಯಾವುದೇ ರೀತಿಯ ಕತ್ತರಿ ಪ್ರಯೋಗವಿಲ್ಲದೆ, ಈ ಕಥೆಗಳನ್ನು ನೇರವಾಗಿ ಶ್ರವ್ಯ ಮಾಧ್ಯಮಕ್ಕೆ ರೂಪಾಂತರಿಸಬಹುದು. ಅಂತಹ ಯೋಗ್ಯತೆ ಇಲ್ಲಿನ ಎಲ್ಲಾ ಕಥೆಗಳಿವೆ.

ಪುಸ್ತಕದ ಬೆನ್ನುಡಿಯಲ್ಲಿ ಗಿರೀಶ್ ಕಾರ್ನಾಡರು ಹೇಳುವ ಹಾಗೆ ''ಮಾನವೀಯ ಅಸಂಗತವನ್ನು ಗ್ರಹಿಸುವ ಜಯಂತ ಕಾಯ್ಕಿಣಿಯವರ ನೋಟ ವಿಶಿಷ್ಟವಾದದ್ದು. ಅವರ ಕಥೆಗಳ ಕಳಕಳಿ, ಚಲನೆಯ ಲಯ, ಹೊಮ್ಮುವ ಚೈತನ್ಯ ಎಲ್ಲ ಅವರದೇ ಆಗಿದೆ. ಓದಬೇಕು ಅನ್ನಿಸುವ ಅಪರೂಪದ ಸೆಳೆತದ ಲೇಖಕ ಜಯಂತ.''


ಡಾ|| ನಾ. ಸೋಮೇಶ್ವರ

'ಜನನಿ', ಎಡಿ-೫-೧೮೬, ಕೆ.ಹೆಚ್.ಬಿ.-ಎಸ್.ಎಫ್.ಎಸ್-೪೦೭
೨ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಯಲಹಂಕ ಉಪನಗರ
ಬೆಂಗಳೂರು - ೫೬೦ ೦೬೪


# ಮಾಯು ಪಡುವತ ದೇವಿ



ಮದರಂಗಿ ಮಾತಿನಲಿ ಮೌನದ ತೇರೊಂದು
ಉರುಳುರುಳಿ ಸಾಗುತ್ತಿದೆ ಹಾದಿಯಲ್ಲಿ;
ಬೆವರು ಸಾಲಿನ ದೀಪ ಉರಿದುರಿದು ಕಟ್ಟುತ್ತಿದೆ
ಮೌನ ಮಾತಿನ ತುಂಬ ರಂಗವಲ್ಲಿ

ನೆರಳ ಬಟ್ಟೆಯ ಹಾಸಿ
ವಗರು ಕನಸನು ಚೆಲ್ಲಿ
ಉರಿಗಣ್ಣ ಒಡಲಿಗೆ ಉಪ್ಪುನೀರನ್ನು ತುಂಬಿ
ಬರಿದೊಗಲು ಮೈಮೇಲೆ ಕರಿದೋಣಿಯ ಸಾಲು

ಜವಾಬಿಲ್ಲದ ಮಾತಿಗೆ ಕುಶಾಲಿನ ಪದ ಪಲ್ಲಕಿ
ಹೆಜ್ಜೆ-ಹೆಜ್ಜೆಗೂ ಗೆಜ್ಜೆಗಳ ಅರೆಪಾವಿನ ದಣಿವು

ಮದರಂಗಿ ನುಡಿಯಲ್ಲಿ
ಸುಳಿದು ಕಟ್ಟುವ ನೆಪವು
ಆಳ ಕೂಪದ ಒಳಗೆ ಯಾರದೋ ನೆರಳು

ಆ ಆಳ ಕೂಪದ ಒಳಗೆ
ಅರೆಬೆಂದ ದೀಪದ ಕುಡಿಗೆ ಮುತ್ತಿದೆ
ಏಳು ತಲೆಗಳ ಸರುಪ ತೆವಳುತ್ತಿರುವಂತೆ
ಬಿಕ್ಕುವ ಜೋತಿ

ಉರಿ ಒಡಲ ಕಣದಲ್ಲಿ ಅರ್ಥಗೋಡೆಯ ಕಣ್ಣು
ನೊಗ ಹೊತ್ತ ಬಂಡಿಗೆ ಒಂಟಿ ಕಾಲು
ಆರಿಹೋಗುವ ದೀಪಕ್ಕೆ ಜೋರು ಕಾವಿನ ಬೆಳಕು
ಉರಿದು ಆರುವ ಮೊದಲು ಉಗುಳಿದೆ ಮಬ್ಬು

ಕಾಲು ಮೂಡದ ಹಗಲಿಗೆ
ಸೆಳಕು ಮಿಂಚಿನ ಕಣ್ಣು
ಆ ಕಣ್ಣ ಕಾವಲಿನೊಳಗೆ ಮೆತ್ತಿದ ನೀಲಿ ನೆರಳು
ಊರಿ ನಡೆದಂತೆ ಸುತ್ತೆಲ್ಲಾ ಬಟಾಬಯಲು

ಬಯಲು ಬಯಲಿನ ತುಂಬ
ಮೌನಗಂಧಿಯ ತೇರು
ತೇರಿನ ಕೊನೆಗೊಂದು
ನಗುವ ನವಿಲು

ಬಂಗಾರದ ಮಣ್ಣಲ್ಲಿ
ನಿತ್ಯವೃತ್ತಗಳಲ್ಲಿ ನೆನೆಸಿಟ್ಟ ಚಿತ್ರಗಳು
ಒಂದೊಂದು ರೂಪಕ್ಕೆ
ಒಂದೊಂದು ಉರುಲು

ಸಾಗಿ ನಡೆದಂತೆ ಸೋರಿಹೋಗುವ ಕಾಲ
ಯಾರ ಹಂಗಿಗೂ ಅದು ಕಾಯಲಾರದು

ಒಳಗಿನೊಳಗೆ ಕಾಡಿ
ಹಗಲೆಲ್ಲಾ ಕುಡಿಗಳಾದರೂ
ಸುಮ್ಮನೆ ಒರಗಲಾರದು

ಹೂತಿಟ್ಟ ಕನಸಿಗೆ ಒಂದು ಜೊತೆ ಹೆಜ್ಜೆ ಕಟ್ಟಿ
ಮದರಂಗಿ ನಡೆಯುವವಳು ಬೆನ್ನು ಮಾಡಿ;
ಹಗಲ ನಿದ್ದೆಯ ತೆಗೆದು ಹೆಜ್ಜೆಗಳ ಸಾಲಲ್ಲಿ
ನಡೆದಂತೆ ಕೇಳುವುದು ಗೆಜ್ಜೆಸದ್ದು.


ಲಕ್ಕೂರು ಸಿ. ಆನಂದ
'ಪದ್ಮಗೌರಿ', ಪೊಲೀಸ್ ಠಾಣೆ ಎದುರು, ಲಕ್ಕೂರು ಅಂಚೆ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ - ೫೬೩ ೧೩೦



## ಕಾಡಿನ ಬೇರು *ಲೇ: ಅಮೃತಾ ಪ್ರೀತಮ್*

*ಅನು : ಡಾ|| ಶಾಂತರಸ ಹೆಂಬೇರಾಳು*

**ಪುಟ : ೧೦೪ ಬೆಲೆ : ರೂ. ೩೫**

**ಲೋಹಿಯಾ ಪ್ರಕಾಶನ, ಬಳ್ಳಾರಿ - ೫೮೩ ೧೦೩**

ಸುಪ್ರಸಿದ್ಧ ಪಂಜಾಬಿ ಲೇಖಕಿ, ಜ್ಞಾನಪೀಠ ಪ್ರಶಸ್ತಿ ವಿಜೇತೆ ಅಮೃತಾ ಪ್ರೀತಮ್‌ರ ಏಳು ಕತೆಗಳು ಇಲ್ಲಿ ಸಂಕಲಿತವಾಗಿವೆ. ಡಾ|| ಶಾಂತರಸರವರು ಈ ಕತೆಗಳನ್ನು ಕನ್ನಡಕ್ಕೆ ಅಚ್ಚುಕಟ್ಟಾಗಿ ಅನುವಾದಿಸಿದ್ದಾರೆ. ಪಂಜಾಬಿ ಸಾಹಿತ್ಯ ಚರಿತ್ರೆಯಲ್ಲಿ ಭಾರತ ವಿಭಜನೆಯ ನಂತರದ ಅವಧಿಯನ್ನು ಅಮೃತಾ ಪ್ರೀತಮ್ - ಮೋಹನಸಿಂಗ್ ಯುಗ ಎಂದೇ ಕರೆಯಲಾಗುತ್ತಿತ್ತು. ಅಮೃತಾ ಪ್ರೀತಮ್ ಕಾವ್ಯಕ್ಕಿಂತ ಹೆಚ್ಚಾಗಿ ಕತೆಗಳನ್ನೇ ರಚಿಸಿದವರು. ಅಮೃತಾ ತಾವು ಕೇವಲ ಕಲ್ಪನೆಯ ನೆರವಿನಿಂದ ಬರೆದವರಲ್ಲ ಎಂಬುದು ಇಲ್ಲಿನ ಎಲ್ಲ ಕತೆಗಳು ಸಾರುತ್ತವೆ. ಇಲ್ಲಿನ ಪ್ರತಿಪಾತ್ರವೂ ಅಮೃತಾ ತಾವು ಒಂದಿಲ್ಲೊಂದು ಕಾಲದಲ್ಲಿ ಸಂಧಿಸಿದ ಅಥವಾ ಪರಿಚಯಿಸಿಕೊಂಡ ವ್ಯಕ್ತಿಗಳೇ ಆಗಿರುವುದರಿಂದ ಓದುಗರಿಗೆ ಎಲ್ಲ ಕತೆಗಳೂ ಆಪ್ತವಾಗುವುದರಲ್ಲಿ ಸಂದೇಹವಿಲ್ಲ.



## ಜಾನಪದ - ತತ್ತ್ವ ಮತ್ತು ಸತ್ತ್ವ

*ಸಿ. ಪಿ. ಕೆ.*



**ಪುಟ : ೩೦೦+೮ ಬೆಲೆ : ರೂ. ೨೦೦**

**ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಮೈಸೂರು-೨**

ಸಿ.ಪಿ.ಕೆ.ಯವರು ತಮ್ಮ ನಾಲ್ಕು ದಶಕದ ಜಾನಪದ ಬೇಸಾಯದ ಬೆಳೆಯನ್ನೆಲ್ಲ ಈ ಕೃತಿಯಲ್ಲಿ ಒಟ್ಟುಗೂಡಿಸಿ ಕೊಟ್ಟಿದ್ದಾರೆ. ಸಿ.ಪಿ.ಕೆ.ಯವರೇ ಹೇಳಿಕೊಳ್ಳುವಂತೆ ಜಾನಪದ ಕ್ಷೇತ್ರದಲ್ಲಿ ಅವರು ಬೆಳೆದ ಬೆಳೆ 'ಹುಲುಸಲ್ಲ – ಆದರೆ ಗಮನಾರ್ಹವಾದದ್ದು.' ಸರಿಸುಮಾರು ಮೂವತ್ತೈದು ವರ್ಷಗಳಿಂದ ಜಾನಪದಕ್ಕೆ ಸಂಬಂಧಿಸಿದ ಪುಸ್ತಕಗಳು – 'ನನ್ನ ಜಾನಪದ ಪ್ರತಿಭೆ', 'ಕಾವ್ಯಾರಾಧನ', 'ಜಾನಪದ ಜಾಗರ', 'ಜಾನಪದ ಸರಸ್ವತಿ', 'ಜನಪದ ಗೀತೆ', 'ಜನಪದ ಸಾಹಿತ್ಯ ಪ್ರವೇಶಿಕೆ' – ಹೀಗೆ ಎಲ್ಲ ಪುಸ್ತಕಗಳ ಸಮಗ್ರ ಸಂಪುಟವೇ ಈ ಕೃತಿ. ಇದರಲ್ಲಿ ತಾತ್ವಿಕ ಭಾಗ ಕಡಿಮೆಯಾಗಿ ಅನ್ವಯಿಕ ಭಾಗವೇ ಅಧಿಕವಾಗಿದೆ. ಜನಪದ ಕವಿತೆಯ ಸಾಹಿತ್ಯಕ ವಿವೇಚನೆಯೇ ಇಲ್ಲಿ ಮೇಲುಗೈ ಸಾಧಿಸಿದೆ. ಬೆನ್ನಿನಲ್ಲಿ ಸಿಪಿಕೆ ಬಗ್ಗೆ ಅಗ್ರಗಣ್ಯ ಕನ್ನಡ ಲೇಖಕರು ಸೂಚಿಸಿರುವ ಅಭಿಪ್ರಾಯಗಳಿವೆ.

## ಪೂರ್ವನಿಶ್ಚಿತ ದೃಷ್ಟಿಕೋನ

*ಬಿ. ವಿ. ವೀರಭದ್ರಪ್ಪ*



**ಪುಟ : ೨೦೮+೮ ಬೆಲೆ : ರೂ. ೧೪೦**

**ರೂಪ ಪ್ರಕಾಶನ, ೨೦, ಮೊದಲನೇ ಮಹಡಿ,**

ಲ್ಯಾನ್ಸ್‌ಡೌನ್ ಬಿಲ್ಡಿಂಗ್, ಮೈಸೂರು - ೫೭೦ ೦೨೪

'ವೇದಾಂತ ರೆಜಿಮೆಂಟ್', 'ಭಗವದ್ಗೀತೆ : ಒಂದು ವೈಚಾರಿಕ ಒಳನೋಟ' ಎಂಬ ತಮ್ಮ ಕೃತಿಗಳಿಂದ ಗಮನ ಸೆಳೆದ ಬಿ. ವಿ. ವೀರಭದ್ರಪ್ಪನವರು ಕಳೆದ ಹತ್ತು ವರ್ಷಗಳಲ್ಲಿ ಲಂಕೇಶ್ ಪತ್ರಿಕೆ, ಹೊಸತು ಮುಂತಾದ ನಿಯತಕಾಲಿಕೆಗಳಲ್ಲಿ ಪ್ರಕಟಿಸಿದ ಲೇಖನಗಳನ್ನು ಈ ಕೃತಿಯಲ್ಲಿ ಒಟ್ಟಾಗಿಸಿದ್ದಾರೆ. ಆಧುನಿಕ ಭಾರತೀಯ ವೈಚಾರಿಕ ಚಿಂತಕರಾದ ಡಿ. ಡಿ. ಕೋಸಾಂಬಿ, ರೋಮಿಲಾ ಥಾಪರ್, ಲೋಹಿಯಾ, ಇರ್ಫಾನ್ ಹಬೀಬ್ – ಇವರೆಲ್ಲರಿಂದಲೂ ಪ್ರೇರಣೆ ಪಡೆದಿರುವುದು ಅವರ ಲೇಖನಗಳಲ್ಲಿ ಕಂಡುಬರುತ್ತದೆ. 'ಭಾರತೀಯ ಮತ್ತು ಐರೋಪ್ಯ ಅಶ್ವಮೇಧ – ಒಂದು ತೌಲನಿಕ ಅಧ್ಯಯನ', 'ಪುರಾಣಗಳನ್ನು ಇತಿಹಾಸಗೊಳಿಸುವ ಪ್ರಕ್ರಿಯೆ', 'ಮುಂಬರುವ ಸಂವಿಧಾನ ಮುನ್ಸೂಚನೆಗಳು' ಕರ್ನಾಟಕದ ವೈಚಾರಿಕ ಚಿಂತನೆಯ ಪರಂಪರೆಗೆ ಉತ್ತಮ ಕೊಡುಗೆಗಳಾಗಿವೆ. ಹಾಗೆಯೇ ಇವರು ಸಮಕಾಲೀನ ಸ್ತ್ರೀವಾದಿ ಚಿಂತಕರಲ್ಲಿ ಪ್ರಮುಖರು ಎನ್ನುವುದಕ್ಕೆ 'ಹೆಣ್ಣಿನ ದೃಷ್ಟಿ ವಿಶಾಲ : ಕಣ್ಣು ಹಾಕೇರಿ ಜೋಕೆ', 'ಹೆಣ್ಣು ತನ್ನನ್ನು ತಾನು ಕುರಿತಂತೆ' ಮುಂತಾದ ಲೇಖನಗಳು ಸಾಕ್ಷಿಯಾಗಿವೆ.

## ಹೇಮಂತಗಾನ

*ವ್ಯಾಸರಾಯ ಬಲ್ಲಾಳ*

**ಪುಟ : ೩೫೨ ಬೆಲೆ : ರೂ. ೧೪೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

ಪ್ರಸಿದ್ಧ ಕಾದಂಬರಿಕಾರರಾದ ವ್ಯಾಸರಾಯ ಬಲ್ಲಾಳರು ಐವತ್ತರ ದಶಕದಲ್ಲಿ ಬರೆದ ಕಾದಂಬರಿ 'ಹೇಮಂತಗಾನ'. ಈ ಕೃತಿ ಈವರೆಗೆ ಐದು ಮುದ್ರಣಗಳನ್ನು ಕಂಡಿರುವುದು ಅದರ ಯಶಸ್ಸಿಗೆ ಸಾಕ್ಷಿಯಾಗಿದೆ. ಸಾಮಾಜಿಕ ವರ್ಗಗಳ ಸ್ವಭಾವ ಮತ್ತು ಅದರ ಹೇತುಗಳನ್ನು ಕೃತಿ ಚೆನ್ನಾಗಿ ಚಿತ್ರಿಸಿರುವುದರಿಂದ ಇದು 'ಸ್ವಾತಂತ್ರ್ಯೋತ್ತರ ಕನ್ನಡ ಕಾದಂಬರಿಗಳ ಪ್ರಥಮ ಪಂಕ್ತಿಯಲ್ಲಿ ನಿಲ್ಲುತ್ತದೆ' ಎಂಬ ಹೆಗ್ಗಳಿಕೆಯನ್ನು ಪಡೆದುಕೊಂಡಿದೆ. 'ಅನುರಕ್ತೆ' ಎಂಬ ತಮ್ಮ ಕಾದಂಬರಿಯಲ್ಲಿ ಬಲ್ಲಾಳರು ತಾವು ಮರೆದ ಮನಸ್ಸಿನೊಳಗಿನ ಹೋರಾಟದ ಎಳೆಯನ್ನು 'ಹೇಮಂತಗಾನ'ದಲ್ಲಿ ಮುಂದುವರೆಸಿದ್ದಾರೆ. 'ಹೇಮಂತಗಾನ'ಕ್ಕಿಂತ ಆದರ್ಶ ಪೂರ್ಣವಾದ ಕಾದಂಬರಿಯನ್ನು ಇತ್ತೀಚಿನ ಕನ್ನಡ ಸಾಹಿತ್ಯದಲ್ಲಿ ನಾನು ಕಾಣೆ; ಅದಕ್ಕಿಂತ ಮಾನವೀಯವಾದ, ವಾಸ್ತವಿಕವಾದ ಕಾದಂಬರಿಯನ್ನೂ ಕಾಣೆ' ಎಂದು ಎಲ್. ಎಸ್. ಶೇಷಗಿರಿರಾಯರು ಗುರುತಿಸಿದ್ದಾರೆ. ಹೇಮಂತಗಾನ ಮತ್ತೆ ಮತ್ತೆ ಓದಿಸಿಕೊಳ್ಳುವ ಕೃತಿ. ಇಂತಹ ಕಾದಂಬರಿ ಮನಸ್ಸಿಗೆ ಶಿಕ್ಷಣವನ್ನು ಕೊಡಬಲ್ಲದು, ಹೃದಯ ಸೂಕ್ಷ್ಮತೆಯನ್ನು ಎಚ್ಚರಿಸಬಲ್ಲದು.



## ಬಹಿಷ್ಕೃತ - ಒಂದು ನೆನಪು

*ನರೇಂದ್ರ ಜಾಧವ್, ಅನು : ಸುಮಾ ದ್ವಾರಕಾನಾಥ್*

**ಪುಟ : ೨೮೦ ಬೆಲೆ : ರೂ. ೧೫೦**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು -೧

ಇದು ದಲಿತ ಕುಟುಂಬದ ಆತ್ಮಕಥೆ. ಖ್ಯಾತ ಅರ್ಥಶಾಸ್ತ್ರಜ್ಞರಾಗಿರುವ ಹಾಗೂ ಭಾರತೀಯ ರಿಸರ್ವ್ ಬ್ಯಾಂಕಿನಲ್ಲಿ ಉನ್ನತಾಧಿಕಾರಿಯಾಗಿರುವ ಡಾ|| ನರೇಂದ್ರ ಜಾಧವ್‌ರವರು 'ಆಮ್ಚ ಬಾಪ್ ಆಣಿ ಆಮ್ಹಿ' ಎಂಬ ಶೀರ್ಷಿಕೆಯಲ್ಲಿ ಮರಾಠಿಯಲ್ಲಿ ಬರೆದಿರುವ ಕೃತಿಯನ್ನು ಸುಮಾ ದ್ವಾರಕಾನಾಥ್ ಕನ್ನಡಕ್ಕೆ ಸರಳವಾಗಿ ಓದಿಸಿಕೊಳ್ಳುವ ರೀತಿಯಲ್ಲಿ ಅನುವಾದಿಸಿದ್ದಾರೆ. ಆಗ ಮಹಾರಾಷ್ಟ್ರದಲ್ಲಿ ಪ್ರಬಲವಾಗುತ್ತಿದ್ದ ಅಂಬೇಡ್ಕರ್ ಚಳುವಳಿಯ ರೂಪದಲ್ಲಿ ದೊರಕಿದ 'ವಿದ್ಯೆ, ಒಗ್ಗಟ್ಟು ಮತ್ತು ಹೋರಾಟ'ದ ಬೆಳಕಿನಲ್ಲಿ ಜಾಗೃತಗೊಂಡು ನಿಜವಾದ 'ಮನುಷ್ಯರು' ಹುಟ್ಟಿ ಬಂದ ಒಂದು ಅದ್ಭುತ ಕಥಾನಕ. ಈ ಹೊಸ ಮನುಷ್ಯರ ಪ್ರಗತಿಯನ್ನು ಹತ್ತಿಕ್ಕಲು ಯಾವ ಶಕ್ತಿಗೂ ಸಾಧ್ಯವಿಲ್ಲ ಎಂಬುದನ್ನು ತಿಳಿಸಿಕೊಡುವ ಕೃತಿ ಇದಾಗಿದೆ. ಇದು ಮರಾಠಿಯ ಕೃತಿಯನ್ನು ವಿಸ್ತರಿಸಿ ಇಂಗ್ಲಿಷಿನಲ್ಲಿ ಪ್ರಕಟವಾದ ಕೃತಿಯ ಅನುವಾದ. ಹಾಗೆಯೇ ಫ್ರೆಂಚ್ ಮತ್ತು ಸ್ಪ್ಯಾನಿಶ್ ಭಾಷೆಗಳಲ್ಲಿಯೂ ಪ್ರಕಟವಾಗಿದೆ. ಯೂರೋಪಿನ ಆರು ಭಾಷೆಗಳಲ್ಲಿ ಹಾಗೆಯೇ ಭಾರತದ ಎಂಟು ಭಾಷೆಗಳಲ್ಲಿ ಪ್ರಕಟಣೆಯಾಗಲಿದೆ.

## ಹಲಗೆ ಬಳಪ

*ಡಾ|| ವೀರೇಶ ಬಡಿಗೇರ*



**ಪುಟ : ೧೪೬ + ೧೦ ಬೆಲೆ : ರೂ. ೧೦೦**

**ಮಯ ಪ್ರಕಾಶನ, ಕಮಲಾಪುರ - ೫೮೩ ೨೨೧**

ಹಸ್ತಪ್ರತಿ ವಿಭಾಗದಲ್ಲಿ ಅಧ್ಯಾಪಕರಾಗಿರುವ ಡಾ|| ವೀರೇಶ ಬಡಿಗೇರರು ಕಳೆದ ಆರೇಳು ವರ್ಷಗಳಲ್ಲಿ ಹಸ್ತಪ್ರತಿಗಳಿಗೆ ಸಂಬಂಧಿಸಿದ ಕ್ಷೇತ್ರಕಾರ್ಯದಲ್ಲಿ ತಮಗಾದ ಸಿಹಿ-ಕಹಿ ಅನುಭವಗಳನ್ನು ಹಾಗೂ ರಾಷ್ಟ್ರೀಯ ಮಟ್ಟದ ವಿಚಾರ ಸಂಕಿರಣ ಗಳನ್ನು, ಯೋಜನೆಗಳನ್ನು ನಿರ್ವಹಿಸಲು ಬಂದ ಅನಿರೀಕ್ಷಿತ ಅವಕಾಶಗಳು ಹೇಗೆ ತಮ್ಮನ್ನು ಹೊಸ ಸಾಂಸ್ಕೃತಿಕ ಸಾಕಾರದತ್ತ ಹೊರಳಿಸಿದವು ಎಂಬುದನ್ನು ದಾಖಲಿಸಿದ್ದಾರೆ. ಗ್ರಂಥ ಸಂಪಾದನೆ ಮತ್ತು ಹಸ್ತಪ್ರತಿ ಕ್ಷೇತ್ರದಲ್ಲಿ ಇತ್ತೀಚೆಗೆ ನಡೆಯುತ್ತಿರುವ ಹೊಸ ವಿನ್ಯಾಸಗಳನ್ನು ಮತ್ತು ಅಧ್ಯಯನದ ಆಸಕ್ತಿಯನ್ನು ಈ ಕೃತಿ ಅನಾವರಣಗೊಳಿಸುತ್ತದೆ. ಪಶ್ಚಿಮದಿಂದ ಬಂದ ಸಂಪಾದನೆಯ ಕ್ರಮವನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿ ನಮ್ಮ ಸಾಹಿತ್ಯ ಸಂಪಾದನೆಯ ಅನನ್ಯತೆ ಏನು ಎಂಬ ಶ್ರದ್ಧೆಯಿಂದ ಶೋಧ ಮಾಡುವುದು ಮತ್ತು ಕನ್ನಡದ್ದೇ ಆದ ಸಂಪಾದನಾ ಮಾದರಿಯನ್ನು ಹುಡುಕಿಕೊಳ್ಳುವ ಪರಿ ಈ ಕೃತಿಯಲ್ಲಿದೆ. ಹಾಗಾಗಿ ವೀರೇಶ ಬಡಿಗೇರರು ತಮ್ಮ ಪುಸ್ತಕದ ಬಗ್ಗೆ 'ಈ ಕ್ಷೇತ್ರದಲ್ಲಿ ಇದೊಂದು ಮೊಟ್ಟ ಮೊದಲ ಪ್ರಯತ್ನ ಎನ್ನುವುದು ನನ್ನ ಸಾತ್ವಿಕ ಅಹಂಕಾರದ ಮಾತಾಗಿದೆ' ಎಂದಿದ್ದಾರೆ.

**ಎನ್. ಸಿ. ಮಹೇಶ್**, ಸೇಂಟ್ ಆನ್ಸ್ ವುಮೆನ್ಸ್ ಪ್ರಥಮ ದರ್ಜೆ ಕಾಲೇಜು,
ನಂ. ೨, ಕೇಂಬ್ರಿಡ್ಜ್ ರಸ್ತೆ, ಹಲಸೂರು, ಬೆಂಗಳೂರು - ೫೬೦ ೦೦೮




# ಅಮೆರಿಕಾದೊಂದಿಗೆ ಮೈತ್ರಿ ಅಪಾಯಕಾರಿ

ಸೀಯಾರ್ಕ್

ಅಮೆರಿಕಾದೊಂದಿಗೆ ಮಾಡಿಕೊಂಡ ಒಪ್ಪಂದಗಳನ್ನು ಸಮರ್ಥಿಸಿಕೊಂಡು ಪ್ರಧಾನಿ ಮನಮೋಹನ್ ಸಿಂಗ್ ಏನೋ ವಿವರಣೆ, ಸಮಜಾಯಿಷಿಗಳನ್ನು ನೀಡಿದ್ದರೂ ಅದು ಭಾರತದ ಜನತೆಯಲ್ಲಿ ವಿಶ್ವಾಸ ಮೂಡಿಸಿಲ್ಲ. ಮಾಮೂಲಿ ನುಡಿಗಟ್ಟುಗಳಿಂದ ಒಪ್ಪಂದಗಳನ್ನು ಐತಿಹಾಸಿಕ ಎಂದು ಬಣ್ಣಿಸಿ, ಇನ್ನೇನು ಭಾರತಕ್ಕೆ ಅಮೆರಿಕಾ ಹೊನ್ನಿನ ಹೊಳೆಯನ್ನೇ ಹರಿಸುತ್ತದೆ ಎಂದು ನಮ್ಮ ಉದ್ಯಮಿಗಳು, ಅವರ ಬೆಂಬಲಿಗರು ಹೇಳಿಕೊಳ್ಳುತ್ತಿರುವುದರಲ್ಲಿ ಹೊಸದೇನಿಲ್ಲ. ಅಮೆರಿಕಾದೊಂದಿಗೆ ಆಪ್ತತೆ ಬೆಳೆಸಿಕೊಂಡರೆ ಭಾರಿ ಅನುಕೂಲವಾಗುತ್ತದೆ ಎಂಬ ಭ್ರಮೆ ಭಾರತದ ಬಂಡವಾಳಶಾಹಿ ವಲಯದಲ್ಲಿ ಮೊದಲಿನಿಂದಲೂ ಇದ್ದದ್ದೇ. ಸುದೀರ್ಘಕಾಲ ಕೇಂದ್ರದಲ್ಲಿ ಆಡಳಿತ ನಡೆಸಿರುವ ಈ ಕಾಂಗ್ರೆಸ್ ಪಕ್ಷದಲ್ಲೂ ಕೂಡ ಇದೇ ಬಗೆಯ ಭಾವನೆ ಅಮೆರಿಕದೊಂದಿಗೆ ಸಖ್ಯದ ವಿಚಾರದಲ್ಲಿ ಇತ್ತು, ಈಗಲೂ ಇದೆ ಎಂಬುದರಲ್ಲಿ ಸಂದೇಹ ಬೇಕಿಲ್ಲ. ಮನಮೋಹನ್ ಸಿಂಗ್ – ಅಹ್ಲುವಾಲಿಯ – ಚಿದಂಬರಂ ಕಂಪನಿಯ ಒಲವು ಎತ್ತಕಡೆ ಇದೆ ಎಂಬುದು ತಿಳಿಯದ ವಿಚಾರವೇನಲ್ಲ. ಅನಿವಾರ್ಯತೆಯಿಂದ ಅಲಿಪ್ತನೀತಿ ಮುಂದುವರಿಸಿದ ಆಡಳಿತ ಪಕ್ಷಗಳು ಅಮೆರಿಕಾದ ಸ್ನೇಹಹಸ್ತಕ್ಕೆ ಹಂಬಲಿಸುತ್ತಿದ್ದುದು ಸರಿಯಷ್ಟೆ. ಈಗ ಬದಲಾದ ಪರಿಸ್ಥಿತಿಯಲ್ಲಿ ಅಮೆರಿಕಾ ಬೀಸಿದ ಬಲೆಯಲ್ಲಿ ಭಾರತ ಸರಕಾರ ಸಿಕ್ಕಿಬಿದ್ದಿದೆ. ಅಧ್ಯಕ್ಷ ಜಾರ್ಜ್ ಬುಷ್ ಕಳೆದ ಜುಲೈ ೧೮ರಂದು ವಾಷಿಂಗ್ಟನ್‌ನಲ್ಲಿ, ಈ ಮಾರ್ಚ್ ತಿಂಗಳ ಮೊದಲಿನಲ್ಲಿ ಭಾರತಕ್ಕೆ ಕೆಲವು ರಿಯಾಯಿತಿಗಳನ್ನು ನೀಡಿ ಮಾಡಿಕೊಂಡ ಒಪ್ಪಂದಗಳಿಂದ ಕೃತಾರ್ಥಭಾವ ಹೊಂದಿರುವವರಿಗೆ ಮುಂದೇನು ಕಾದಿದೆ ಎಂಬುದರ ಅರಿವು ಇದ್ದಂತಿಲ್ಲ. ತತ್‌ಕ್ಷಣದ ಅನುಕೂಲಗಳನ್ನು ಮಾತ್ರ ನೋಡುವ ಅನುಕೂಲಸಿಂಧು ರಾಜಕಾರಣಿಗಳು ಮಹತ್ಸಾಧನೆ ಮಾಡಿರುವಂತೆ ಬೀಗುತ್ತಿದ್ದಾರೆ. ಆದರೆ ಇದು ಎಷ್ಟು ಅಪಾಯಕಾರಿ ಎನ್ನುವುದು ಗೊತ್ತಾಗಲು ಹೆಚ್ಚು ಕಾಲ ಬೇಕಿಲ್ಲ.

ಕಳೆದ ಮೂರು ದಶಕಗಳಿಗೂ ಹೆಚ್ಚು ಕಾಲದಿಂದ ನ್ಯೂಕ್ಲಿಯರ್ ಸಹಕಾರ ವಿಚಾರದಲ್ಲಿ ಭಾರತವನ್ನು ಅಸ್ಪೃಶ್ಯವೆಂದು ಪರಿಗಣಿಸಿದ್ದ, ಇಂಧನ ಸರಬರಾಜಿಗೆ ದಿಗ್ಬಂಧನ ಹೇರಿದ್ದ, ಅಣ್ವಸ್ತ್ರ ಪ್ರಸರಣ ವಿರೋಧ ಒಪ್ಪಂದಕ್ಕ ಭಾರತ ಸಹಿ ಹಾಕಬೇಕೆಂದು ಒತ್ತಾಯ ತರುತ್ತಿದ್ದ ಅಮೆರಿಕಾ ಏಕಾಏಕಿಯಾಗಿ ಬಣ್ಣ ಬದಲಿಸಿರುವುದೇಕೆ ಎಂದು ವಿಚಾರ ಮಾಡಬೇಕಾಗಿದೆ. ತನ್ನ ಹಿತಾಸಕ್ತಿ ಕಾಪಾಡಿಕೊಳ್ಳುವುದರಲ್ಲಿ ಎಂಥ ಹೀನಕೃತ್ಯ ನಡೆಸಲೂ ಹೇಸದಿರುವ ಅಮೆರಿಕಾದ ಆಡಳಿತವರ್ಗ ದಿಢೀರ್ ಎಂದು ರಿಯಾಯಿತಿಗಳನ್ನು ತೋರುತ್ತಿರುವುದರ ಹಿಂದೆ ಏನೋ ಕುತಂತ್ರ ಇರುವುದು ದಿನ ಕಳೆದಂತೆ ಗೋಚರವಾಗುತ್ತದೆ. ದುಷ್ಟರ ಸಹವಾಸದಿಂದ ದೂರವಿದ್ದರೆ ಒಳ್ಳೆಯದು ಎನ್ನುವುದು ಗೊತ್ತಾಗಲು ಹೆಚ್ಚುಕಾಲ ಬೇಕಾಗುವುದಿಲ್ಲ. ಅಮೆರಿಕಾದೊಂದಿಗೆ ಆಪ್ತತೆ ಹೊಂದಿರುವ ದೇಶಗಳ ಸ್ಥಿತಿ ನೋಡಿದರೆ ಅದು ತಿಳಿಯುತ್ತದೆ. ತನ್ನ ಅಧಿನಾಯಕತ್ವ ಸ್ಥಾಪಿಸುವ ದುರಹಂಕಾರದಿಂದ ಮೆರೆಯುತ್ತಿರುವ ಅಮೆರಿಕಾ ಇರಾಕಿನ ಮೇಲೆ ನಡೆಸಿದ ದುರಾಕ್ರಮಣದ ಪರಿಣಾಮವಾಗಿ, ಆನಂತರದ ಘಟನೆಗಳಿಂದಾಗಿ ಒಂದು ಬಗೆಯ ಒಂಟಿತನ ಅನುಭವಿಸತೊಡಗಿತು. ಅದನ್ನು ನೀಗಿಸಿಕೊಳ್ಳಲು, ಮುಂದಿನ ಹಂಚಿಕೆಗಳಿಗೆ ಬರುವ ಪ್ರತಿರೋಧದ ತೀವ್ರತೆಯನ್ನು ಕಮ್ಮಿ ಮಾಡಲು ಭಾರತದಂಥ ದೇಶದ ಸಖ್ಯ ಅಮೆರಿಕಾಗೆ ಜರೂರಾಯಿತು. ಅದಕ್ಕಾಗಿಯೇ ವಿಶೇಷ ಕಾಳಜಿ. ಇರಾಕಿನ ವ್ಯವಹಾರದಲ್ಲಿ ಭಾರತದ ಬೆಂಬಲ ಪಡೆಯಲಾಗದೇ ಹೋದ ಅಮೆರಿಕಾ ಈಗ ಇರಾನಿನ ನ್ಯೂಕ್ಲಿಯರ್ ವಿಚಾರದಲ್ಲಿ ಭಾರತದ ಬೆಂಬಲ ಪಡೆಯುವುದರಲ್ಲಿ ಸಫಲಗೊಂಡಿದೆ. ಬುಷ್ ತೋರಿರುವ ರಿಯಾಯಿತಿಗಳಿಗೆ ಮನಮೋಹನ ಸಿಂಗ್ ಸರಕಾರ ನೀಡಿರುವ ಕಪ್ಪ ಕಾಣಿಕೆ ಇದು. ಮೊದಲ ಚುಂಬನದಲ್ಲೇ ಬುಷ್ ಆಡಳಿತೆ ಭಾರತದ ಅಲಿಪ್ತ ನೀತಿಯ ಬುಡವನ್ನೇ ಅಲುಗಾಡಿಸಿದೆ. ಇನ್ನೂ ಮುಂದೆ ಏನು ಕಾದಿದೆಯೋ. ಏಶಿಯಾ ಖಂಡದಲ್ಲಿ ಪ್ರಬಲಗೊಳ್ಳುತ್ತಿರುವ ಚೀಣಾವನ್ನು ಹದ್ದುಬಸ್ತಿನಲ್ಲಿರಿಸುವ ದುರಾಲೋಚನೆಯಲ್ಲಿ ಭಾರತವನ್ನು ದಾಳವಾಗಿ ಉಪಯೋಗಿಸಿಕೊಳ್ಳುವುದು ಅಮೆರಿಕಾದ ಉದ್ದೇಶ. ಇದನ್ನು ಅನೇಕ ವಿದೇಶಾಂಗ ಪರಿಣತರು ಗುರ್ತಿಸಿದ್ದು, ಸರಕಾರವನ್ನು ಎಚ್ಚರಿಸಿದ್ದಾರೆ.

ಇದೊಂದು ಕಡೆಯಾದರೆ, ಭಾರತವನ್ನು ಅಮೆರಿಕಾ ಇತರ ದೇಶಗಳಲ್ಲಿ ಪ್ರಜಾಪ್ರಭುತ್ವದ ಸ್ಥಾಪನೆಯಲ್ಲಿ ಭಾಗೀದಾರಿ ಎಂದು ಬಣ್ಣಿಸತೊಡಗಿದೆ. ಪ್ರಪಂಚದ ಬಲಿಷ್ಠ ಪ್ರಜಾಪ್ರಭುತ್ವ ಅಮೆರಿಕಾ, ಅತಿದೊಡ್ಡ ಪ್ರಜಾಪ್ರಭುತ್ವ ಭಾರತ ಪ್ರಪಂಚದ ವಿವಿಧ ರಾಷ್ಟ್ರಗಳಲ್ಲಿ ಪ್ರಜಾಪ್ರಭುತ್ವ ಆಡಳಿತಗಳನ್ನು ಸ್ಥಾಪಿಸಲು ಹೊಣೆಗಾರನಾಗಿವೆ ಎಂದು ಬುಷ್ ದೆಹಲಿಯ ಪುರಾನಾ ಕಿಲ್ಲಾದಲ್ಲಿ ಭಾರತದ ಬಂಡವಾಳಶಾಹಿಗಳನ್ನು ಉದ್ದೇಶಿಸಿ ಮಾತನಾಡುತ್ತ ಅಪ್ಪಣೆ ಕೊಡಿಸಿದ್ದಾರೆ. ಇದರರ್ಥ, ಆತನೇ ಹೇಳಿರುವ ಹಾಗೆ ಉತ್ತರ ಕೊರಿಯಾ, ಇರಾನ್, ಸಿರಿಯ ಮೊದಲಾದ ದೇಶಗಳಲ್ಲಿನ ಸರಕಾರಗಳನ್ನು ಪದಚ್ಯುತಗೊಳಿಸಿ ಕೈಗೊಂಬೆ ಸರಕಾರಗಳನ್ನು ಸ್ಥಾಪಿಸುವ ಸಂಚಿನಲ್ಲಿ ಭಾರತವನ್ನು ಎಳೆಯುವುದು. ಪ್ರಜಾಪ್ರಭುತ್ವ, ಸ್ವಾತಂತ್ರ್ಯಗಳ ವಿಷಯದಲ್ಲಿ ಅಮೆರಿಕಾಗೆ ಎಷ್ಟು ಆಸ್ಥೆ ಇದೆ ಎನ್ನುವುದನ್ನು ಇಲ್ಲಿ ವಿವರಿಸಬೇಕಾಗಿಲ್ಲ ಈಗ. ರಾಷ್ಟ್ರೀಯ ವಿಮೋಚನಾ ಹೋರಾಟಗಳನ್ನು ಹತ್ತಿಕ್ಕುವುದರಲ್ಲಿ, ಸರ್ವಾಧಿಕಾರಿ ಆಡಳಿತಗಳಿಗೆ ಬೆಂಬಲ ನೀಡುವುದರಲ್ಲಿ, ಪ್ರಜಾಪ್ರಭುತ್ವರೀತ್ಯ ಚುನಾಯಿತಗೊಂಡ ಸರಕಾರಗಳನ್ನು ಬದಲಿಸಿ ಜನವಿರೋಧಿ ಸರಕಾರ ಸ್ಥಾಪಿಸುವುದರಲ್ಲಿ ಅಮೆರಿಕಾದ ದಾಖಲೆ ಏನು ಎನ್ನುವುದು ಎಲ್ಲರಿಗೂ ತಿಳಿದಿದೆ. ಎರಡನೇ ಮಹಾಯುದ್ಧದ ನಂತರದ ಇತಿಹಾಸದ ಪುಟಗಳನ್ನು ತಿರುವಿಹಾಕಿದರೆ ಅದೂ ವೇದ್ಯವಾಗುತ್ತದೆ. ಈ ಇಪ್ಪತ್ತೊಂದನೇ ಶತಮಾನದಲ್ಲಿ ದುರಾಕ್ರಮಣ ನಡೆಸಿದ ಅಮೆರಿಕಾ ಆಫ್ಘಾನಿಸ್ತಾನ ಮತ್ತು ಇರಾಕಿನಲ್ಲಿ ಸ್ಥಾಪಿಸಿರುವ 'ಪ್ರಜಾಪ್ರಭುತ್ವ' ಸರಕಾರಗಳು ನಮ್ಮ ಮುಂದೆ ಜೀವಂತವಾಗಿವೆ. ಅಮೆರಿಕಾದ ಸೇನೆಯ ನೆರಳಿನಲ್ಲಿ ಚುನಾವಣೆಯ ನಾಟಕ ನಡೆಸಿ ಸ್ಥಾಪನೆಗೊಂಡಿರುವ ಈ ಎರಡೂ ದೇಶಗಳ ಸರಕಾರಗಳೂ ಈಗ ಅಂತರ್ಯುದ್ಧ ಎದುರಿಸಬೇಕಾದ ಸ್ಥಿತಿಯಲ್ಲಿವೆ. ಅಂಥದ್ದರಲ್ಲಿ ಮುಂದೆ ಇರಾನಿನಲ್ಲೋ, ಸಿರಿಯಾದಲ್ಲೋ, ಮತ್ತಿನ್ನೆಲ್ಲೋ 'ಪ್ರಜಾಪ್ರಭುತ್ವ' ಸ್ಥಾಪಿಸುವ ಅಮೆರಿಕಾದ ದುಶ್ಚರ್ಯೆಯಲ್ಲಿ ಭಾರತದ ನಾವು ಭಾಗಿಯಾಗಬೇಕೆ ? ಖಂಡಿತ ಇಲ್ಲ. ಈ ಬಗೆಯ ನಿಗೂಢ ಅಂಶಗಳು ಅಮೆರಿಕಾದೊಂದಿಗಿನ ಮೈತ್ರಿಯಲ್ಲಿ ಅಡಗಿವೆ. ಆದರಿಂದಾಗಿಯೇ ಅದನ್ನು ವಿರೋಧಿಸಬೇಕು. ಅಮೆರಿಕಾದೊಂದಿಗೆ ಸ್ನೇಹ ಎಂದಿಗೂ ಸಮಾನ ಮನಸ್ಕರ ನಡುವಣ ಸಂಬಂಧವಾಗಿರದು, ಅದು ಅಷ್ಟಪಾದಿಯಂತೆ ಅಪಾಯಕಾರಿಯಾದ ಕೊಂಡಿಗಳನ್ನೊಳಗೊಂಡಿರುವುದು. ಭಾರತೀಯ ಜನತೆ ಈ ಅಪಾಯವನ್ನು ಮನಗಂಡು ಎಚ್ಚರ ವಹಿಸದಿದ್ದರೆ ಅನಾಹುತವಾದೀತು.

## ಉರಿಯುತ್ತಿರುವ ಆಫ್ಘಾನಿಸ್ತಾನ ಮತ್ತು ಪ್ಯಾಲಸ್ತೈನ್

ಅಮೆರಿಕಾದ ಆಕ್ರಮಣದಲ್ಲಿರುವ ಇರಾಕಿನ 'ಪ್ರಜಾಪ್ರಭುತ್ವ' ಸರಕಾರ ಅಂತರ್ಯುದ್ಧದ ಸ್ಥಿತಿಯಲ್ಲಿರುವುದು ಹೊಸ ವಿಷಯವೇನಲ್ಲ. ಅಮೆರಿಕಾ ಕೃಪಾಪೋಷಿತ ಇರಾಕಿ ಸರಕಾರದ ಆಜ್ಞೆಗಳು ಕಡತ ಬಿಟ್ಟು ಹೋಗುವುದೇ ಇಲ್ಲ, ನೆಪಮಾತ್ರಕ್ಕೆ ಸರಕಾರ ಉಳಿದಿದೆ. ಅಮೆರಿಕಾ ಈಗ ಮತ್ತೆ ದೊಡ್ಡ ಪ್ರಮಾಣದಲ್ಲಿ 'ಅಲ್‌ಖೈದಾ' ಉಗ್ರಗಾಮಿಗಳ ಮೇಲೆ ದಾಳಿ ಪ್ರಾರಂಭಿಸಿದೆ. ಇದು ಎಲ್ಲಿಗೆ ಮುಟ್ಟೀತು. ಹೀಗೆ ಮುಂದುವರಿದರೆ ಇರಾಕ್ ನಿರ್ನಾಮಗೊಂಡೀತು. ಆದರೆ ಇಂಥದೇ ಪರಿಸ್ಥಿತಿ ಆಫ್ಘಾನಿಸ್ತಾನದಲ್ಲಿ ಉಂಟಾಗಿದೆ. ಐದು ವರ್ಷಗಳಿಗೂ ಹೆಚ್ಚು ಕಾಲದಿಂದ ಅಮೆರಿಕಾದ ಆಕ್ರಮಣದಲ್ಲಿರುವ ಆಫ್ಘಾನಿಸ್ತಾನದಲ್ಲಿ ಅಸ್ಥಿರತೆ ಉಲ್ಬಣಿಸಿದೆ. ಅಮೆರಿಕಾ ಸ್ಥಾಪಿಸಿರುವ ಆಫ್ಘನ್ ಸರಕಾರದ ಆಡಳಿತ ಕಾಬೂಲಿನಿಂದಾಚೆಗೆ ದಾಟಿಯೇ ಇಲ್ಲ. ಇರಾಕ್‌ನಲ್ಲಿ ಅಲ್‌ಖೈದಾ, ಆಫ್ಘಾನಿಸ್ತಾನದಲ್ಲಿ ತಾಲಿಬಾನ್‌ಗಳು ಜಾರ್ಜ್ ಬುಷ್‌ಗೆ ಚಳ್ಳೆಹಣ್ಣು ತಿನ್ನಿಸುತ್ತಿವೆ. ಕೈಲಾಗದವನು ಮೈ ಪರಚಿಕೊಂಡ ಅನ್ನುವ ಹಾಗೆ ಬುಷ್ ಈಚೆಗೆ ಪಾಕಿಸ್ತಾನಕ್ಕೆ ಭೇಟಿ ನೀಡಿದ್ದಾಗ ಪಾಕಿಸ್ತಾನದ ಅಧ್ಯಕ್ಷ ಮುಷರಫ್ ಮೇಲೆ ಎಗರಾಡಿದ. ತಾಲಿಬಾನ್‌ಗಳ ನಿಗ್ರಹಕ್ಕೆ ಮುಷರಫ್ ಕ್ರಮ ಕೈಗೊಂಡಿಲ್ಲ ಎಂದು ಗೊಣಗಾಡಿದ. ಶ್ರೀಮಂತ ಮಿತ್ರನ ಬೊಗಳಾಟಕ್ಕೆ ಉತ್ತರ ನೀಡದೆ ಮುಷರಫ್ ನುಂಗಿಕೊಂಡ. ಅಮೆರಿಕಾದ ಸಖ್ಯ ಬೆಳೆಸಿದ ಮೇಲೆ ಇವೆಲ್ಲ ನುಂಗಿಕೊಳ್ಳಬೇಕು ತಾನೆ? ವಿದೇಶೀ ಸೇನೆಗಳನ್ನು ಆಕ್ರಮಣವನ್ನು ಯಾವತ್ತೂ ವಿರೋಧಿಸುತ್ತ ಬಂದಿರುವ ಆಫ್ಘನರು ಅಮೆರಿಕಾಗೆ ಎಂದೂ ಮಣಿಯುವುದಿಲ್ಲ. ಬೆಟ್ಟಗಳ ನಾಡಿನಲ್ಲಿ ಸಮರ ನಡೆಸುವುದು

೫೯ನೇ ಪುಟಕ್ಕೆ



# ಕೃತ್ತಿಕಾ ಮಾತ್ರವಲ್ಲ ಚಿತ್ರಾಗೂ "ಗ್ರಹಣ"

ಏಪ್ರಿಲ್ ಎಂದೊಡನೆ ನೆನಪಾಗುವುದು ಪರೀಕ್ಷೆಗಳು. ಈ ಪರೀಕ್ಷೆಗಳ ಹಾವಳಿ ಮುಗಿಯುತ್ತಿದ್ದಂತೆ ಶಾಲೆಗಳಿಗೆ ಭರ್ತಿಯಾಗುವ ತವಕ. ಈ ಮಧ್ಯೆ ಶಾಪಕ್ಕೀಡಾಗುವುದು ರಣಬಿಸಿಲು. ಮಟಮಟ ಮಧ್ಯಾಹ್ನದಲ್ಲಿ ಶಾಲೆಯಿಂದ ಶಾಲೆಗೆ (ಅಥವಾ ಮನೆಗೆ) ಮರಳುವಾಗ ಸಣ್ಣದೊಂದು ಪ್ರಯೋಗ ನಡೆಸಬಹುದು. ಹನ್ನೆರಡು ಗಂಟೆಗೆ ಸೂರ್ಯ ನೆತ್ತಿಯ ಮೇಲೆ ಎಂದು ಹೇಳುತ್ತಾರಲ್ಲವೇ? ಅದನ್ನು ಪರೀಕ್ಷಿಸುವ ಸಲುವಾಗಿ ಈ ಪ್ರಯೋಗ. ೧೨ ಗಂಟೆಗೆ ನಿಮ್ಮ ನೆರಳನ್ನು ನೋಡಿಕೊಳ್ಳಿ. ಸೂರ್ಯ ನೆತ್ತಿಯ ಮೇಲೇ ಕರಾರುವಾಕ್ಕಾಗಿ ಇರುವುದಾದರೆ ನಿಮ್ಮ ನೆರಳು ಮಾಯವಾಗಿರಬೇಕಲ್ಲವೇ? (ಅಂದರೆ ನಿಮ್ಮ ಪಾದಗಳ ಮೇಲೆ ಬೀಳುತ್ತಿರಬೇಕಲ್ಲವೇ?) ಪರೀಕ್ಷಿಸಿ. ದಿನವೂ ಪರೀಕ್ಷೆ ಮಾಡಿ (ಸಾಧ್ಯವಾದರೆ). ನಿಮ್ಮ ಪ್ರಯೋಗದ ವಿವರವನ್ನು ಬರೆದುಕಳುಹಿಸಿ. ಹನ್ನೆರಡುಗಂಟೆಗೆ ಬದಲಾಗಿ (ಅದರ ಆಚೀಚೆ) ಬೇರೊಂದು ಸಮಯ ನೆರಳು ಮಾಯವಾಗಿದ್ದರೆ ಆ ದಿನಾಂಕ, ಸಮಯ, ನಿಮ್ಮೂರ ಹೆಸರು ಬರೆದು ತಿಳಿಸಿ.

ಇದು ಹಗಲಿನ ಪರೀಕ್ಷೆ, ರಾತ್ರಿ ಬೀಸಣಿಗೆಯಿಂದ ಗಾಳಿ ಹಾಕಿಕೊಳ್ಳುತ್ತಾ, ಸೊಳ್ಳೆಗಳನ್ನೂ, ಸೆಖೆಯನ್ನೂ ಶಪಿಸುತ್ತಾ ಹೊರಗೆ ನಿಂತಾಗ ಸುಂದರ ಆಕಾಶ ಹೊಸ ಲೋಕವನ್ನು ತೆರೆದಿಡುವುದು. ನೆತ್ತಿಯ ಮೇಲೆಯೇ ಕಾಣುವ ಮಹಾವ್ಯಾಧ (ಒರ್ರೈಯನ್) ಮತ್ತು ಆಸುಪಾಸಿನ ಪುಂಜಗಳು ಕಣ್ಸೆಳೆಯುವುವು. ವೃಷಭದ ಕೆಂಗಣ್ಣುಗಳಲ್ಲೊಂದಾಗಿದ್ದ ಮಂಗಳ ಈಗ ಮುನ್ನಡೆದಿರುವುದು ಸ್ಫುಟವಾಗಲು ಮಾರ್ಚ್ ತಿಂಗಳ ನಕ್ಷೆಯೊಡನೆ ಹೋಲಿಸಿದರೆ ಸಾಕು. ಅದರ ಪ್ರಕಾಶವೂ ಮಂಕಾಗಿದೆ. ಮಿಥುನ, ವಿಜಯಸಾರಥಿ, ವೃಷಭ – ಈ ನಕ್ಷತ್ರ ದಟ್ಟಣೆಯಿಂದ ದಕ್ಷಿಣದತ್ತ ಕಣ್ಣು ಹೊರಳಿಸಿದರೆ ಕೋರೈಸುವ ಲುಬ್ಧಕ (ಸಿರಿಯಸ್) ದಕ್ಷಿಣದ ಅಂಚಿನಲ್ಲಿ ಅಗಸ್ತ್ಯ (ಕನೋಪಸ್). ಈ ಹಾಲು ಹಾದಿಯ ಹಂಚಿಕೆಗೆ ಅಪವಾದ ಎನ್ನಿಸುವಂತೆ ಪೂರ್ವದಲ್ಲಿ ನಕ್ಷತ್ರಗಳೇ ಇಲ್ಲವೇನೋ ಎನ್ನಿಸುತ್ತದೆ. ಆದರೆ ಮಿಥುನ ಮತ್ತು ಸಿಂಹಗಳ ನಡುವೆ ಶನಿಗ್ರಹ ಎದ್ದುಕಾಣುತ್ತದೆ. ಸಿಂಹರಾಶಿಯ ಮಘದ ಸಹಾಯದಿಂದ ಆ ಪುಂಜದ ಇತರ ನಕ್ಷತ್ರಗಳನ್ನು ಗುರುತಿಸಬಹುದು. ಉತ್ತರದಲ್ಲಾಗಲೇ ಸಪ್ತರ್ಷಿಗಳು ಹಾಜರಾಗಿದ್ದಾರೆ.




ನಮ್ಮ ಮಾರ್ಗದರ್ಶಿ ಚಂದ್ರ ಕರಾರುವಾಕ್ಕಾಗಿ ಒಂದನೆಯ ತಾರೀಖಿನಿಂದಲೇ ಸೇವೆಗೆ ಹಾಜರಾಗುತ್ತಿದ್ದಾನೆ. ಸೂರ್ಯನಿಗೆ ಅಡ್ಡಬಂದು, ಮರುದಿನ ಯುಗಾದಿಯ ಬೇವುಬೆಲ್ಲ ತಿನ್ನಿಸಿ ಸಂಜೆ ಹಾಜರಾಗಿದ್ದಾನೆ. ಕಳೆದ ತಿಂಗಳು ಕೃತ್ತಿಕಾ ಪುಂಜವನ್ನು "ಗ್ರಹಣ" ಮಾಡಿದಂತೆ ಅಂದರೆ ಮುಚ್ಚಿದಂತೆ ಈ ತಿಂಗಳೂ ಮುಚ್ಚುವುದುಂಟು. ಒಂದನೇ ತಾರೀಖಿನ ಈ ಘಟನೆಯ ಪೂರ್ಣ ನೋಟ ಅಮೆರಿಕಾದವರಿಗೆ ಈ ಬಾರಿ ಲಭ್ಯ. ಕಳೆದ ತಿಂಗಳು ಇದ್ದಕ್ಕಿದ್ದಂತೆ ಮೋಡಕವಿದು ಮಳೆಸುರಿದು ಕೃತ್ತಿಕಾಗ್ರಹಣದ ನೋಟ ತಪ್ಪಿಹೋದದ್ದು ಅನೇಕ ನಭಾಸಕ್ತರಿಗೆ (ನನಗೂ) ನಿರಾಶೆಯುಂಟಾಯಿತು. ಇನ್ನೂ ಒಂದು ಅವಕಾಶ ೨೯ರಂದು ದೊರಕಲಿದೆ. ಪಶ್ಚಿಮ ದಿಗಂತದ ಅಂಚಿನಲ್ಲಿ ಬಾಲಚಂದ್ರನನ್ನು ಗಮನಿಸಿ ನೋಡಿ. ಅದಕ್ಕೆ ಅಂಟಿಕೊಂಡಂತೆ ಕೃತ್ತಿಕಾಗುಚ್ಛದ ಕೆಲವು ನಕ್ಷತ್ರಗಳು ಕಾಣುವುವು.

ಮುನ್ನಡೆವ ಚಂದ್ರ ಮೂರರಂದು ಮಂಗಳದ ಬಳಿ ಮತ್ತು ಆರರಂದು ಶನಿಗ್ರಹದ ಬಳಿ ಕಾಣಿಸುತ್ತಾನೆ. ಹಾಗೇ ಮುನ್ನಡೆದು ಹುಣ್ಣಿಮೆಯಂದು ಚಿತ್ರಾ ನಕ್ಷತ್ರದ ಬಳಿ ಕಾಣುತ್ತಾನೆ. ಆದ್ದರಿಂದಲೇ ಇದು ಚೈತ್ರಮಾಸವಾಗುತ್ತದೆ. ಚಿತ್ರಾ ನಕ್ಷತ್ರವನ್ನು ಮುಚ್ಚುವ ಆಚ್ಛಾದನೆಯನ್ನು ಬರಿಗಣ್ಣಿನಿಂದಲೇ ನೋಡಬಹುದು.

ಗುರುಗ್ರಹ ಸುಮಾರು ೯ ಗಂಟೆಗೆ ಉದಯಿಸುತ್ತದೆ. ತಿಂಗಳ ಕೊನೆಗೆ ಇನ್ನೂ ಬೇಗ ಸುಮಾರು ೭ ಗಂಟೆಗೇ ಉದಯಿಸುತ್ತದೆ. ಬರಲಿರುವ ತಿಂಗಳುಗಳಲ್ಲಿ ಅದು ಸಂಜೆಯ ಆಕಾಶದಲ್ಲಿ ಕಾಣಲಿರುವುದರ ಚಿಹ್ನೆ ಇದು. ಈಗಾಗಲೇ ಸಾಕಷ್ಟು ಪ್ರಕಾಶವಾದ ಈ ಗ್ರಹ ಇನ್ನೂ ಹೆಚ್ಚು ಪ್ರಕಾಶಮಾನವಾಗುತ್ತದೆ.

ಶುಕ್ರ ಮತ್ತು ಬುಧ ಬೆಳಗಿನ ಜಾವ ಪೂರ್ವದಂಚಿನಲ್ಲಿ ಕಾಣಲಿವೆ. ಶುಕ್ರನನ್ನು ಗುರುತಿಸಲು ಯಾವುದೇ ನಕ್ಷೆ ಬೇಕಿಲ್ಲ. ಆದರೆ ಬುಧ ಗ್ರಹವನ್ನು ಪತ್ತೆ ಮಾಡುವುದು ಕಷ್ಟ. ಎಂಟರಂದು ಬುಧ ಅತಿ ಎತ್ತರದಲ್ಲಿ ಅಂದರೆ ಶುಕ್ರ ಮತ್ತು ಕ್ಷಿತಿಜದ ನಡುವೆ ಕಾಣಲಿದೆ. ಆ ದಿನಗಳಲ್ಲಿ ಅದನ್ನು ಗುರುತಿಸಬಹುದು. ಚಂದ್ರ ಶುಕ್ರನನ್ನು ಮುಚ್ಚುವ ಆಚ್ಛಾದನೆಯ ನೋಟ ನಮಗಿಲ್ಲ.

೨೨ರಂದು ಲಿರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ. ಆ ಬೆಳಗಿನ ಜಾವ ಲೈರಾ ಅಂದರೆ ವೀಣಾ ಎಂಬ ಪುಂಜದ ದಿಕ್ಕಿನಿಂದ ಗಂಟೆಗೆ ಸುಮಾರು ನಲವತ್ತು ಉಲ್ಕೆಗಳು ಹೊರಟಂತೆ ಕಾಣಬಹುದು. ಈ ನಕ್ಷತ್ರ ಪುಂಜ ನಕ್ಷೆಯಲ್ಲಿಲ್ಲ. ಏಕೆಂದರೆ ಈ ನಕ್ಷೆ ಸಂಜೆಗೆ ಅನ್ವಯ.

೧೯೩೦ರಲ್ಲಿ ಕಂಡುಹಿಡಿಯಲಾದ ಧೂಮಕೇತುವೊಂದು ಐದಾರು ವರ್ಷಗಳಿಗೊಮ್ಮೆ ಬಂದುಹೋಗುತ್ತಿತ್ತು. ಷ್ವಾಸ್‌ಮನ್ ಮತ್ತು ವಾಚ್‌ಮನ್ ಎಂಬ ಇಬ್ಬರ ಹೆಸರು ಅದಕ್ಕೆ ಸೇರಿತ್ತು. ನಿಯತಕಾಲಿಕ ಧೂಮಕೇತುಗಳ ಪಟ್ಟಿಯಲ್ಲಿ ೭೩ನೆಯ ನಮೂದಾಯಿತು. ಜೂನ್ ೯ರಂದು ಉಲ್ಕಾವೃಷ್ಟಿಯನ್ನು ಉಂಟುಮಾಡುವ ಕಣಗಳನ್ನು ಈ ಧೂಮಕೇತುವೇ ಸರಬರಾಜು ಮಾಡುತ್ತಿದೆ ಎಂದು ತಿಳಿಯಿತು. ೧೯೯೫ರಲ್ಲಿ ಅದು ಪುನಃ ಬಂದಾಗ ವಿಚಿತ್ರವೊಂದು ಕಂಡಿತು – ಅದು ಮುರಿದುಹೋಗಿತ್ತು. ಈ ತುಂಡುಗಳಿಗೆ A, B, C, D, E – ಹೀಗೆ ಹೆಸರಿಸಿದರು. ೨೦೦೧ರಲ್ಲಿ ಪುನಃ ಬಂದಾಗ B, C ಮತ್ತು E ಮಾತ್ರ ಕಂಡವು. ಈಗದು ಮತ್ತೆ ಬಂದಿದೆ. ಬೆಳಗಿನಜಾವ ಸ್ವಾತಿನಕ್ಷತ್ರದ ಆಸುಪಾಸಿನಲ್ಲಿ ಕಾಣುತ್ತಿದೆ. ಬೂಟಿಸ್ (ಸಹದೇವ) ಪುಂಜದಿಂದ ಹರ್‌ಕ್ಯುಲಿಸ್ (ಭೀಮಸೇನ) ಪುಂಜದತ್ತ ಓಡುತ್ತಿದೆ. ಇದು ಪುನಃ ತುಂಡುತುಂಡಾಗಬಹುದು ಎಂದು ವಿಜ್ಞಾನಿಗಳ ನಿರೀಕ್ಷೆ. ಹಾಗಾದರೆ ಮುಚ್ಚಿದ್ದ ಒಳಭಾಗ ಸೂರ್ಯನ ಶಾಖಕ್ಕೆ ಎದುರಾಗಿ ಹೆಚ್ಚಿನ ಪ್ರಮಾಣದಲ್ಲಿ ಆವಿಯಾಗಿ, ಅದರ ಒಟ್ಟು ಪ್ರಕಾಶ ಹೆಚ್ಚಬಹುದು. ಆದ್ದರಿಂದ ಈ ಧೂಮಕೇತು ಹೆಚ್ಚು ಪ್ರಕಾಶ ಅಂದರೆ ಬರಿಗಣ್ಣಿಗೆ ಕಾಣುವಷ್ಟು ಪ್ರಕಾಶ ಪಡೆಯಬಹುದು ಎಂಬುದೊಂದು ನಿರೀಕ್ಷೆ.

ಯುರೇನಸ್ ಗ್ರಹವನ್ನು ನೋಡಲು ದೂರದರ್ಶಕ ಬೇಕೇಬೇಕು. ಹಾಗಿದ್ದರೆ ಈ ತಿಂಗಳು ಅದನ್ನು ಗುರುತಿಸಲು ಒಂದು ಅವಕಾಶವಿದೆ. ೧೮ರಂದು ಶುಕ್ರಗ್ರಹ ಯುರೇನಸ್‌ಗೆ ಸಮೀಪವಾಗಿ ಅಂದರೆ ಕೇವಲ ಮೂರನೇ ಒಂದು ಡಿಗ್ರಿ ಅಂತರದಲ್ಲಿ ಕಾಣುತ್ತದೆ. ಇದರ ಹಿಂದಿನ ದಿನ ಮತ್ತು ಮರುದಿನ ಕೂಡ ಶುಕ್ರಗ್ರಹವನ್ನು ಗಮನಿಸಿದರೆ ಸಾಕು. ಚುಕ್ಕೆಯೊಂದು ಸಮೀಪಿಸಿ

ಡಾ|| ಬಿ. ಎಸ್. ಶೈಲಜಾ



೨೯ರಂದು ಸಂಜೆ ಪಶ್ಚಿಮ ದಿಗಂತದ ಅಂಚಿನಲ್ಲಿ ಕೃತ್ತಿಕಾ ಗ್ರಹಣದ ಮುಕ್ತಾಯ ಹಂತ

ಮರುದಿನ ದೂರ ಸರಿಯುವುದನ್ನು ಕಾಣಬಹುದು.

ನಭಾಸಕ್ತರ ಕೋರಿಕೆಯಂತೆ ಮೇ ಮೊದಲವಾರದ ಘಟನೆಗಳೂ ಪಟ್ಟಿಯಲ್ಲಿ ಸೇರಿವೆ. ಅಂಚೆ ಮೂಲಕ 'ಹೊಸತು' ಪಡೆಯುವ ಓದುಗರಿಗೆ ಈ ಘಟನೆಗಳ ನೋಟ ತಪ್ಪಿಹೋಗದಿರಲಿ ಎಂಬುದೇ ಉದ್ದೇಶ.

**ಖಗೋಳ ದಿನಚರಿ**

೧ ಚಂದ್ರನ ಪಕ್ಕ ಕೃತ್ತಿಕಾ ಗುಚ್ಛ *
೩ ಚಂದ್ರ-ಮಂಗಳ ನಡುವೆ ಕನಿಷ್ಠ ಕೋನ (೪ ಡಿಗ್ರಿ)
ಚಾಂದ್ರಮಾಸದ ಮೊದಲ ಪಾದ
೫ ಶನಿಗ್ರಹದ ಹಿನ್ನಡೆ ಆರಂಭ
೬-೭ ಶನಿಗ್ರಹ-ಚಂದ್ರ ನಡುವೆ ಏಳು ಡಿಗ್ರಿ ಕೋನ
೮ ಬುಧಗ್ರಹದ ಗರಿಷ್ಠ ಕೋನೋನ್ನತಿ ೨೮ ಡಿಗ್ರಿ *
೯ ಚಂದ್ರ-ಭೂಮಿ ನಡುವಿನ ದೂರ ಗರಿಷ್ಠ
೧೩ ಹುಣ್ಣಿಮೆ ೨೨:೧೦ಕ್ಕೆ ಚಂದ್ರ-ಚಿತ್ರಾ ನಡುವೆ ಕನಿಷ್ಠ ಕೋನ *
ಆಚ್ಛಾದನೆ ಕಾಣುತ್ತದೆ – ಚಂದ್ರನ ಅಂಚಿನಲ್ಲಿ
೧೫ ಚಂದ್ರ-ಗುರು ನಡುವೆ ೫ ಡಿಗ್ರಿ
೧೭ ಚಂದ್ರ-ಜ್ಯೇಷ್ಠಾ ನಡುವೆ ಕನಿಷ್ಠ ಕೋನ
ಆಚ್ಛಾದನೆ ಕಾಣುವುದಿಲ್ಲ
೧೮ ಯುರೇನಸ್ ಮತ್ತು ಶುಕ್ರದ ನಡುವೆ ೦.೩ ಡಿಗ್ರಿ ಕೋನ *
೨೦ ಚಾಂದ್ರಮಾಸದ ಕೊನೆಯ ಪಾದ
೨೨ ಲಿರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ *
೨೪ ಚಂದ್ರ-ಶುಕ್ರ ನಡುವೆ ೦.೫ ಡಿಗ್ರಿ ಕೋನ *
(ಆಚ್ಛಾದನೆ ಕಾಣುವುದಿಲ್ಲ)
೨೫ ಚಂದ್ರ-ಭೂಮಿ ನಡುವೆ ಕನಿಷ್ಠ ದೂರ
೨೬ ಚಂದ್ರ-ಬುಧ ನಡುವೆ ೪ ಡಿಗ್ರಿ ಕೋನ
೨೭ ಅಮಾವಾಸ್ಯೆ ೦೧:೧೪ಕ್ಕೆ
೨೯ ಕೃತ್ತಿಕಾ ಆಚ್ಛಾದನೆಯ ಮುಕ್ತಾಯಹಂತ ಕಾಣುತ್ತದೆ *
ಮೇ ೨ ಚಂದ್ರ-ಮಂಗಳ ನಡುವೆ ೩ ೧/೨ ಡಿಗ್ರಿ ಕೋನ *
೪ ಚಂದ್ರ-ಶನಿ ನಡುವೆ ೩ ಡಿಗ್ರಿ ಕೋನ *
( * ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ)

ಡಾ॥ ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧

೫೭ ಪುಟದಿಂದ (ವಿಶ್ವವೀಕ್ಷಣೆ)

ಸುಲಭವೇನಲ್ಲ. ಅಮೆರಿಕಾಗೆ ಅದು ಈಗ ಮನವರಿಕೆ ಆಗಿದೆ. ಅದಕ್ಕೆ ಪಾಕಿಸ್ತಾನದ ಮೇಲೆ ಒತ್ತಾಯ – ತಾಲಿಬಾನ್‌ಗಳನ್ನು ಸದೆಬಡಿಯಲು. ಇದರಿಂದ ಪಾಕಿಸ್ತಾನಕ್ಕೆ ಇಕ್ಕಟ್ಟಿನ ಸ್ಥಿತಿ. ತಾಲಿಬಾನ್‌ಗಳನ್ನು ಪೂರ್ಣವಾಗಿ ಎದಿರುಹಾಕಿಕೊಳ್ಳುವಂತಿಲ್ಲ, ಅಮೆರಿಕಾದ ಆಣತಿಯನ್ನು ಮೀರುವಂತಿಲ್ಲ. ಇಸ್ಲಾಮಿಕ್ ಮೂಲವಾದಿಗಳ ಒತ್ತಡ ಒಂದು ಕಡೆ, ಪೋಷಕ ಅಮೆರಿಕಾದ ಒತ್ತಡ ಇನ್ನೊಂದೆಡೆ. ಪಾಕಿಸ್ತಾನದ ಫಜೀತಿ ಇಂಥದ್ದಾದರೆ, ಅಫ್ಘಾನಿಸ್ತಾನದ ಸರಕಾರಕ್ಕೆ ಉಸಿರುಕಟ್ಟಿಕೊಳ್ಳುವಂಥ ಸ್ಥಿತಿ, ಅಮೆರಿಕಾಗೆ ಮುಖಭಂಗ. ಈ ಕಿತಾಪತಿಯಲ್ಲಿ ಬವಣೆ ಅನುಭವಿಸುತ್ತಿರುವವರು ಅಫ್ಘಾನಿಸ್ತಾನದ ಜನತೆ.

ಅಂತಾರಾಷ್ಟ್ರೀಯ ನಿಯಮಗಳನ್ನು ಉಲ್ಲಂಘಿಸುವುದು, ಒಪ್ಪಂದಗಳನ್ನು ಮುರಿಯುವುದು ಇಸ್ರೇಲಿನ ಮಟ್ಟಿಗೆ ನೀರು ಕುಡಿದಂತೆ. ಅಮೆರಿಕಾದ ಕುಮ್ಮಕ್ಕು ಇರುವುದರಿಂದ ಇಸ್ರೇಲು ಆಡಿದ್ದೇ ಆಟ. ಪ್ಯಾಲಸ್ಟೈನ್ ಜನತೆಯ ಸ್ವಾತಂತ್ರ್ಯ ಹೋರಾಟವನ್ನು, ಸ್ವತಂತ್ರ ರಾಜ್ಯ ಸ್ಥಾಪನೆಯ ಹಂಬಲವನ್ನು, ಹತ್ತಿಕ್ಕಲು ಇಸ್ರೇಲ್ ನಡೆಸಿರುವ, ನಡೆಸುತ್ತಿರುವ ದುಷ್ಕೃತ್ಯಗಳಿಗೆ ಎಣೆಯೇ ಇಲ್ಲ. ಅಮಾಯಕರಾದ ಪ್ಯಾಲಸ್ಟೈನೀಯರ ಹತ್ಯೆಯನ್ನು ನಿರಂತರವಾಗಿ ನಡೆಸುತ್ತ ಬಂದಿರುವ ಇಸ್ರೇಲ್ ವಿಶ್ವ ಸಂಸ್ಥೆಯ ನಿರ್ಣಯಗಳನ್ನು ಉಲ್ಲಂಘಿಸಿರುವುದು, ಎಲ್ಲ ಒಪ್ಪಂದಗಳನ್ನು ಮುರಿದು ಪ್ಯಾಲಸ್ಟೈನ್ ಪ್ರದೇಶದ ಮೇಲೆ ದಾಳಿ ನಡೆಸುತ್ತ ಬಂದಿರುವುದು ಹೊಸದೇನಲ್ಲ. ಪ್ಯಾಲಸ್ಟೈನ್ ಜನತೆಗೆ ಸ್ವತಂತ್ರಾಡಳಿತ ನೀಡುವ ನಿಟ್ಟಿನಲ್ಲಿ ಆಸ್ಲೋದಲ್ಲಿ ಆದ ಒಪ್ಪಂದವನ್ನು ಪೂರ್ಣವಾಗಿ ಜಾರಿಗೆ ತರಲು ಇಷ್ಟವಿಲ್ಲದ ಇಸ್ರೇಲ್ ಅದನ್ನು ಉಲ್ಲಂಘಿಸುತ್ತಲೇ ಬಂದಿದೆ. ಪ್ಯಾಲಸ್ಟೈನ್‌ನಲ್ಲಿ ಈಚೆಗೆ ನಡೆದ ಚುನಾವಣೆಗಳಲ್ಲಿ ಇಸ್ರೇಲ್ ಮತ್ತು ಅದರ ಪೋಷಕ ಅಮೆರಿಕಾ, ಇಂಗ್ಲೆಂಡ್‌ಗಳು 'ಭಯೋತ್ಪಾದಕರು' ಎಂದು ಕರೆಯುವ ಹಮಾಸ್ ಬಹುಮತ ಗಳಿಸಿ ಅಧಿಕಾರಕ್ಕೆ ಬಂದಿರುವುದು ಇಸ್ರೇಲಿಗೆ ನುಂಗಲಾರದ ತುತ್ತಾಗಿದೆ. ಈಚೆಗೆ ಎಲ್ಲ ನಿಯಮಗಳನ್ನು ಗಾಳಿಗೆ ತೂರಿ ಇಸ್ರೇಲಿ ಪಡೆಗಳು ಪಶ್ಚಿಮ ದಂಡೆಯ ಜೆರಿಕೋ ಕಾರಾಗೃಹದ ಮೇಲೆ ಪ್ರಚೋದನಕಾರಿ ರೀತಿಯಲ್ಲಿ ದಾಳಿನಡೆಸಿ ಪ್ಯಾಲಸ್ಟೈನ್ ಜನರನ್ನು ರೊಚ್ಚಿಗೆಬ್ಬಿಸಿದೆ. ಈ ದಾಳಿ ನಡೆದ ಸಂದರ್ಭದಲ್ಲಿ ಕಾರಾಗೃಹದ ಮೇಲ್ವಿಚಾರಣೆ ನಡೆಸುತ್ತಿದ್ದ ಬ್ರಿಟಿಷ್, ಅಮೆರಿಕನ್ ವೀಕ್ಷಕರು ನಾಪತ್ತೆಯಾಗಿದ್ದುದೂ ಗಮನಿಸಬೇಕಾದ ಸಂಗತಿ. ಇದರಿಂದ ಇಸ್ರೇಲ್ ದಾಳಿಯನ್ನು ಅಮೆರಿಕಾ, ಬ್ರಿಟನ್‌ಗಳಿಗೆ ತಿಳಿಸಿಯೇ ಮಾಡಿದೆ ಎಂಬುದು ಸ್ಪಷ್ಟವಾಗಿದೆ. ಇಸ್ರೇಲ್‌ನ ದಾಳಿಯನ್ನು ಪ್ಯಾಲಸ್ಟೈನ್‌ನ ಅಧ್ಯಕ್ಷರು ತೀವ್ರವಾಗಿ ಖಂಡಿಸಿದ್ದಾರೆ. ಇದು ಇಸ್ರೇಲ್ ನಡೆಸಿರುವ ದುರಾಕ್ರಮಣ, ಒಪ್ಪಂದದ ಉಲ್ಲಂಘನೆ ಎಂದಿದ್ದಾರೆ. ಇಸ್ರೇಲ್ ನಡೆಸಿದ ಈ ದಾಳಿಯ ಬಗ್ಗೆ ಎಲ್ಲ ದೇಶಗಳೂ ಕಳವಳ ವ್ಯಕ್ತಪಡಿಸಿವೆ. ಬ್ರಿಟನ್ ಮತ್ತು ಅಮೆರಿಕಾ ಮಾತ್ರ ಪ್ರತಿಕ್ರಿಯಿಸದೆ ಇವೆ. ಇಸ್ರೇಲಿನ ಈ ದುಷ್ಕೃತ್ಯಕ್ಕೆ ಪ್ರತಿಭಟನೆ ವ್ಯಕ್ತಗೊಳಿಸಿದರಷ್ಟೇ ಸಾಲದು. ಒಪ್ಪಂದವನ್ನು ಉಲ್ಲಂಘಿಸಿರುವ ಇಸ್ರೇಲಿನ ಮೇಲೆ ವಿಶ್ವಸಂಸ್ಥೆ ಸೂಕ್ತ ಕ್ರಮ ಕೈಗೊಳ್ಳುವಂತೆ ಒತ್ತಾಯ ತರಬೇಕಾಗಿದೆ.

ಓಯಾರ್ಕೆ
'ಚೌಡೇಶ', ...., ...., ಕತ್ತಿಗುಪ್ಪೆ, ಬೆಂಗಳೂರು - ....



ಕನ್ನಡದ ಖ್ಯಾತ ವೈದ್ಯಕೀಯ ಲೇಖಕರೂ, 'ಹೊಸತು' ಸಮಾಲೋಚಕ ಮಂಡಲಿಯ ಸದಸ್ಯರೂ ಆಗಿರುವ ಡಾ॥ ಸಿ. ಆರ್. ಚಂದ್ರಶೇಖರ್ ಅವರನ್ನು ಮಂಗಳೂರಿನಲ್ಲಿ ತಾರೀಖು ೨೮.೨.೨೦೦೬ ರಂದು, ಮಾನಸಿಕ ರೋಗಿಗಳ ಕುರಿತು ಕಾಳಜಿ ಮತ್ತು ಸಂಶೋಧನೆಗಾಗಿ ವಿಶೇಷ ಸಂದೇಶ ಪ್ರಶಸ್ತಿ ನೀಡಿ ಗೌರವಿಸಲಾಯಿತು.

# ಇತಿಹಾಸಕಾರರ ಕಣ್ಣಲ್ಲಿ 'ಕಲಿಯುಗ'

ಸಮಾಜದಲ್ಲಿ ಬದಲಾವಣೆಗಳು ಕೆಲವೊಮ್ಮೆ ನಿಧಾನವಾಗಿಯೂ ಕೆಲವೊಮ್ಮೆ ವೇಗವಾಗಿಯೂ ಸಂಭವಿಸುತ್ತವೆ. ತನ್ನಲ್ಲಾಗುವ ಬದಲಾವಣೆಗೆ ಜನರು ಸ್ಪಂದಿಸುವ ರೀತಿ ವಿಚಿತ್ರವಾಗಿರುತ್ತದೆ. ಪ್ರತಿಯೊಂದು ಸಮಾಜವೂ ತನ್ನ ಭೂತಕಾಲವನ್ನು ನೆನೆಯುತ್ತಲೇ ವರ್ತಮಾನ ಮತ್ತು ಭವಿಷ್ಯವನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸುತ್ತದೆ.

ಆದರೆ ಹೆಚ್ಚಾಗಿ ಪ್ರತಿಯೊಂದು ಕಾಲಘಟ್ಟದ ಸಮಾಜವೂ ಕೂಡ ಬದಲಾವಣೆಗಳನ್ನು ಪ್ರಗತಿಯ ಸಂಕೇತವೆಂದು ಸ್ವಾಗತಿಸುವುದೇ ಕಡಿಮೆ; ನಾವೊಂದು 'ಆದರ್ಶ' ಪರಿಸ್ಥಿತಿಯಿಂದ ಕೆಳಕ್ಕೆ ಜಾರುತ್ತಾಹೋಗುತ್ತಿದ್ದೇವೆಂದು ಭಾವಿಸುತ್ತದೆ. ಈ ರೀತಿಯ ಕಲ್ಪನೆಗಳು 'ಯುಗ'ಗಳ ಕಲ್ಪನೆಗೆ ಕಾರಣವಾದವು.

ನಮ್ಮ ಪ್ರಾಚೀನ ಭಾರತೀಯರಲ್ಲಿ ಚಕ್ರಾತ್ಮಕ ಮತ್ತು ರೇಖಾತ್ಮಕ ಕಾಲಗಣನಾ ಪದ್ಧತಿ ರೂಢಿಯಲ್ಲಿದ್ದರೂ ಚಕ್ರಾತ್ಮಕ ಪದ್ಧತಿಯೇ ಪ್ರಧಾನವಾಗಿದ್ದಂತೆ ಕಾಣುತ್ತದೆ. ಏಕೆಂದರೆ ವಾರ, ಪಕ್ಷ, ಮಾಸ, ಋತು, ಸಂವತ್ಸರ, ಯುಗ, ಮನ್ವಂತರಗಳು ಸದಾ ಸುತ್ತುತ್ತಿರುತ್ತವೆ. ಈ ರೀತಿಯ ಕಾಲದ ಕಲ್ಪನೆಯಲ್ಲಿ 'ಯುಗ'ಗಳ ಕಲ್ಪನೆ ತುಂಬಾ ರೋಚಕ. ಈ ಕೃತ, ತ್ರೇತಾ, ದ್ವಾಪರ ಮತ್ತು ಕಲಿಯುಗಗಳಲ್ಲಿ ಕಲಿಯುಗದ ವರ್ಣನೆಗಳು ವಿಸ್ತಾರವಾಗಿ ಪುರಾಣಗಳಲ್ಲಿ ಮತ್ತು ಮಹಾಭಾರತದಲ್ಲಿ ದೊರೆಯುತ್ತವೆ. ಈ ಕಲಿಯುಗದ ಕೆಲವು ಲಕ್ಷಣಗಳ ಐತಿಹಾಸಿಕ ವಿಶ್ಲೇಷಣೆ ಮಾಡುವುದು ಈ ಲೇಖನದ ಉದ್ದೇಶ.

ಕಲಿಯುಗದ ಲಕ್ಷಣಗಳ ವರ್ಣನೆಗಳು ಕಂಡುಬರುವ ಪುರಾಣ ಮತ್ತು ಮಹಾಭಾರತದ ಕೆಲವು ಭಾಗಗಳು ಯಾವಾಗ ರಚಿಸಲ್ಪಟ್ಟವು ಅಥವಾ ಸಂಪಾದಿಸಲ್ಪಟ್ಟವು ಎಂದು ತಿಳಿದುಕೊಳ್ಳುವುದು ತೀರ ಅವಶ್ಯ. ಪ್ರಖ್ಯಾತ ವಿದ್ವಾಂಸರಾದ ಪಾರ್ಗಿಟರ್, ಪಿ. ವಿ. ಕಾಣೆ, ವಿ. ಎಸ್. ಸುಕ್ತಂಕರ್, ಆರ್. ಎಸ್. ಶರ್ಮ ಮುಂತಾದವರ ಅಭಿಪ್ರಾಯಗಳ ಆಧಾರದ ಮೇಲೆ ನಾವು ಪುರಾಣಗಳ ಮತ್ತು ಮಹಾಭಾರತದ ಕೆಲ ಭಾಗಗಳು ಕ್ರಿ.ಶ. ೩, ೪, ೫ನೇ ಶತಮಾನದಲ್ಲಿ (ಗುಪ್ತ-ಗುಪ್ತೋತ್ತರ ಯುಗ) ರಚಿಸಲ್ಪಟ್ಟವೆಂದು ಅಭಿಪ್ರಾಯ ಪಡಬಹುದು.

ಆ ಕಾಲದ ಬರಹಗಾರರು ತಮ್ಮ ಹಿಂದಿನ ಕಾಲವನ್ನು ನೆನೆಯುತ್ತಾ ತಮ್ಮ ವರ್ತಮಾನ ಮತ್ತು ಭವಿಷ್ಯವನ್ನು ನೋಡಿ ದುಃಖಿಸುತ್ತಾ 'ಕಾಲ' ಅಧಃಪತನದತ್ತ ಸರಿಯುತ್ತಿದೆ ಎಂದು ಅಭಿಪ್ರಾಯಪಡಲು ಕಾರಣಗಳೇನಿರಬಹುದು ? ಅವರನ್ನು ಈ ರೀತಿ ಚಿಂತಿಸಲು ಪ್ರೇರಣೆ ನೀಡಿದ ಸಾಮಾಜಿಕ ಪರಿಸ್ಥಿತಿಗಳಾವುವು ? ಇದನ್ನು ತಿಳಿಯಬೇಕಾದರೆ ನಾವು ಗುಪ್ತ ಮತ್ತು ಗುಪ್ತೋತ್ತರ ಯುಗದ ಭಾರತದ ಚರಿತ್ರೆಯನ್ನು ಕೂಲಂಕಷವಾಗಿ ಗಮನಿಸಬೇಕಾಗುತ್ತದೆ. ಕಲಿಯುಗದ ಕೆಲವು ಪ್ರಧಾನ ಲಕ್ಷಣಗಳಾದ ಶೂದ್ರರ ಏಳ್ಗೆ, ವರ್ಣಸಂಕರ, ಸಂಘರ್ಷ ಮನಃಸ್ಥಿತಿ, ಮ್ಲೇಚ್ಛ ಮತ್ತು ಶೂದ್ರ ದೊರೆಗಳ ಆಡಳಿತ, ಕರವಸೂಲಿಯಲ್ಲಿ ಶೋಷಣೆ ಇತ್ಯಾದಿ ಘಟನೆಗಳು ನಿಜವಾಗಿಯೂ ಗುಪ್ತರ ಕಾಲದಲ್ಲಿ ಸಂಭವಿಸಿದ ಸಾಮಾಜಿಕ ಬದಲಾವಣೆಗಳೇ ಆಗಿವೆ. ಈ ಬದಲಾವಣೆಗಳಿಗೆ ಸಂಪ್ರದಾಯಸ್ಥ ಮನಸ್ಸು ಸ್ಪಂದಿಸಿದ ಮತ್ತು ಅದನ್ನು ಅರ್ಥೈಸಹೊರಟ ರೀತಿಯನ್ನು ನಾವು 'ಕಲಿಯುಗ'ದ ಲಕ್ಷಣಗಳಲ್ಲಿ ಕಾಣಬಹುದು.

ಉದಾಹರಣೆಗೆ, ಶೂದ್ರರು ಗುಪ್ತರ ಕಾಲದವರೆಗೆ ಕೇವಲ ಕೃಷಿ ಕಾರ್ಮಿಕರಾಗಿದ್ದರು. ಗುಪ್ತ-ಗುಪ್ತೋತ್ತರ ಕಾಲದಲ್ಲಿ ಕೃಷಿಕರಾಗಿ, ಕುಶಲಕರ್ಮಿಗಳಾಗಿ, ಸಣ್ಣ ವ್ಯಾಪಾರಿಗಳಾಗಿ, ಸೈನಿಕರಾಗಿ ಪರಿವರ್ತಿತರಾದರು.

ಗುಪ್ತರ ಕಾಲದಲ್ಲಿ ಬ್ರಾಹ್ಮಣರಿಗೆ ದತ್ತಿ ಜಮೀನುಗಳನ್ನು ಕೊಟ್ಟಿದ್ದರಿಂದ ಬ್ರಾಹ್ಮಣರು ಮಧ್ಯ ಹಾಗೂ ದಕ್ಷಿಣ ಭಾರತದ ಪ್ರದೇಶಗಳಲ್ಲಿ ಪಸರಿಸುವಂತಾಯಿತು. ಇಂತಹ ಮೂಲ ನಿವಾಸಿಗಳು ವಾಸವಾಗಿರುವ ಪ್ರದೇಶಗಳಲ್ಲಿ ವರ್ಣಾಶ್ರಮ ವ್ಯವಸ್ಥೆ ಇನ್ನೂ ಬಂದಿರಲಿಲ್ಲ, ತಾವು ದಾನಪಡೆದ ಪ್ರದೇಶಗಳಲ್ಲಿ ನೆಲೆಸಿರುವ ಮೂಲ ನಿವಾಸಿಗಳನ್ನು ಬ್ರಾಹ್ಮಣರು ವರ್ಣಾಶ್ರಮ ವ್ಯವಸ್ಥೆಯಡಿಯಲ್ಲಿ ಶೂದ್ರರೆಂದೇ ಗುರುತಿಸಿದರು. ಹಿಂದುಳಿದ ಪ್ರದೇಶಗಳಲ್ಲಿ ಭೂದಾನ ಪಡೆದ ಬ್ರಾಹ್ಮಣರು ಮೂಲ ನಿವಾಸಿಗಳಿಗೆ ಕಬ್ಬಿಣದ ನೇಗಿಲಿನ ಬೇಸಾಯ, ಪಶು ಸಂಗೋಪನೆ, ಪಂಚಾಂಗದ ಜ್ಞಾನ, ಆಯುರ್ವೇದ ವೈದ್ಯಕೀಯ ಪದ್ಧತಿಯನ್ನು ತಿಳಿಹೇಳಿರಬೇಕು. ಇಂತಹ ಪರಿಸ್ಥಿತಿಯಲ್ಲಿ ಮೂಲ ನಿವಾಸಿಗಳು ರೈತರಾಗಿ ಅಥವಾ ಫಸಲು-ಪಾಲುದಾರರಾಗಿ ಅಸ್ತಿತ್ವಕ್ಕೆ ಬಂದರು.

ಹಿಂದಿನ ಸಾಂಪ್ರದಾಯಿಕ ಶ್ರೇಣಿ ವ್ಯವಸ್ಥೆಯ ಆರ್ಯಾವರ್ತದಲ್ಲಿ ಶೂದ್ರರು ಗುಲಾಮ ಅಥವಾ ಕೂಲಿಕಾರರಾಗಿ ದುಡಿಯುತ್ತಿದ್ದರು. ಆದರೆ ಗುಪ್ತೋತ್ತರ ಕಾಲದಲ್ಲಿ ಇವರು ನವ ಶೂದ್ರರಾಗಿ ಇಲ್ಲವೇ ಫಸಲು-ಪಾಲುದಾರರಾಗಿ ಅಸ್ತಿತ್ವಕ್ಕೆ ಬಂದರು. ಆದ್ದರಿಂದ ಗುಪ್ತರ ಮತ್ತು ಅನಂತರದ ಕಾಲದ ಪಠ್ಯಗಳಲ್ಲಿ ಶೂದ್ರರನ್ನು ಗುಲಾಮರೆಂದು ಕರೆಯದೆ ಕೃಷಿಕರೆಂದೇ ಕರೆಯಲಾಗಿದೆ (ಪೂರ್ವದಲ್ಲಿ ಕೃಷಿ ವೈಶ್ಯನ ವೃತ್ತಿ). ಫಸಲು ತೆಗೆಯಲು ಶೂದ್ರರಿಗೆ ಜಮೀನುಗಳನ್ನು ಬಾಡಿಗೆಗೆ ಬಿಡಲಾಗುತ್ತಿತ್ತು ಎಂದು ಮನುವೇ ಅಲ್ಲದೆ ವಿಷ್ಣು ಹಾಗೂ ಯಾಜ್ಞವಲ್ಕ್ಯರಿಂದಲೂ ತಿಳಿದುಬರುತ್ತದೆ. ಫಸಲು-ಪಾಲುದಾರರಾಗಿ ಬಂದ ಶೂದ್ರರು ಕಾಲಕ್ರಮೇಣ ಜಮೀನುಗಳನ್ನು ಕಾಯಂ ಆಗಿ ತಮ್ಮ ವಶಕ್ಕೆ ತೆಗೆದುಕೊಂಡಿರಲೂಬಹುದು. ಈ ಕಾಲದಲ್ಲಿ ಕೃಷಿಕರ ಸಂಖ್ಯೆ ಅಭಿವೃದ್ಧಿಯಾಯಿತು. ಜಮೀನಿನ ಮೇಲೆ ಜನಸಂಖ್ಯೆಯ ಒತ್ತಡ ಹೆಚ್ಚಾಯಿತು.

ಕ್ರಿ.ಶ. ೭ನೇ ಶತಮಾನದಲ್ಲಿ ಭಾರತಕ್ಕೆ ಭೇಟಿಕೊಟ್ಟ ಹ್ಯೂಯಾನ್ ತ್ಸಾಂಗ್ ಶೂದ್ರರು ಬೇಸಾಯಗಾರರಾಗಿದ್ದರೆಂದೇ ಹೇಳುತ್ತಾನೆ. ಈ ಕಾಲದಲ್ಲಿ ಶೂದ್ರರ ಸಂಖ್ಯಾಬಲ ವರ್ಧಿಸಿದಷ್ಟು ಹಿಂದೆಂದೂ ವರ್ಧಿಸಿರಲಿಲ್ಲ. ಈ ಕಾಲದ ಸ್ಮೃತಿಗಳು ವಿದೇಶಿ ಪಂಗಡಗಳನ್ನು, ಬುಡಕಟ್ಟು ಜನರನ್ನು ಶೂದ್ರವರ್ಗಕ್ಕೆ ಸೇರಿಸಿದ್ದೇ ಇದಕ್ಕೆ ಕಾರಣ. ಕೃಷಿಯಿಂದ ಸಂಪತ್ತು ಸಂಗ್ರಹಿಸಿದ ಶೂದ್ರ ವ್ಯಾಪಾರ ಮಾಡಿರಲೂಬಹುದು. ಶೂದ್ರನು ವ್ಯಾಪಾರ ವೃತ್ತಿಯಲ್ಲಿ ತೊಡಗಬಹುದೆಂದು ಯಾಜ್ಞವಲ್ಕ್ಯ ಹೇಳುತ್ತಾನೆ. ಕೊಳ್ಳುವುದು ಮತ್ತು ಮಾರುವುದು ಇದರಿಂದ ಬಂದ ಲಾಭದಿಂದ ಶೂದ್ರನು ಜೀವನ ಸಾಗಿಸಬಹುದೆಂದು ಮಾರ್ಕಂಡೇಯ ಮತ್ತು ವಿಷ್ಣು ಪುರಾಣಗಳು ಹೇಳುತ್ತವೆ. ಶಾಂತಿಪರ್ವ ಎಂಟು ಮಂತ್ರಿಗಳ ಮಂತ್ರಿಮಂಡಲದಲ್ಲಿ ೪ ಜನ ಬ್ರಾಹ್ಮಣರು, ಹಾಗೂ ಶಿಸ್ತಿನಿಂದ ಕೂಡಿದ ೩ ಜನ ಶೂದ್ರರು ಹಾಗೂ ಒಬ್ಬ ಸೂತನಿಗೆ ಸ್ಥಾನ ಕಲ್ಪಿಸಿದೆ. ಶಾಸನಗಳು ಕೂಡ ಶೂದ್ರರು ಕುಶಲಕರ್ಮಿಗಳಾಗಿದ್ದುದಕ್ಕೆ ಮತ್ತು ಕೈಕಸಬುಗಳ ಸಂಘದ ನೇತಾರರಾದದ್ದಕ್ಕೆ ಸಾಕ್ಷಿ ಒದಗಿಸುತ್ತವೆ. ಗುಪ್ತೋತ್ತರ ಯುಗದಲ್ಲಿ ಶೂದ್ರರಿಗೆ ಶಸ್ತ್ರಧಾರಿಗಳಾಗುವ ಹಕ್ಕನ್ನು ಕೊಡಲಾಗಿತ್ತು ಎಂದು ತೋರುತ್ತದೆ. 'ಮೃಚ್ಛಕಟಿಕ' ನಾಟಕ ಶೂದ್ರರು ಸೈನ್ಯದಲ್ಲಿ ಸೈನಿಕರಾಗಿದ್ದುದಕ್ಕೆ ಪುರಾವೆ ಒದಗಿಸುತ್ತದೆ.

ಆರ್ಥಿಕವಾಗಿ ಅಭಿವೃದ್ಧಿ ಹೊಂದುತ್ತಾಬಂದ ಶೂದ್ರರನ್ನು ತಮ್ಮೆಡೆಗೆ ಸೆಳೆಯಲು ಹಲವು ಪಂಥಗಳು ಪ್ರಯತ್ನಿಸಿದವು. ಧರ್ಮಶಾಸ್ತ್ರಗಳು ಸಣ್ಣ ಪುಟ್ಟ ಬದಲಾವಣೆಗಳೊಂದಿಗೆ ಶೂದ್ರರಿಗೂ ಕೆಲವು ಧಾರ್ಮಿಕ ವಿಧಿ ನೆರವೇರಿಸಲು ಅಧಿಕಾರ ಕೊಟ್ಟವೆ. ಈ ಹೊಸ ಶೂದ್ರರ ಅವಶ್ಯಕತೆಗಳನ್ನು ಬ್ರಾಹ್ಮಣೀಯ ಪದ್ಧತಿಯಲ್ಲಿ ಅಳವಡಿಸಿಕೊಳ್ಳುವುದಕ್ಕಾಗಿ ವೈಜವಾಪ ಗೃಹ್ಯ ಸೂತ್ರವೆಂಬ ಒಂದು ಹೊಸ ಗ್ರಂಥ ಅಸ್ತಿತ್ವಕ್ಕೆ ಬರಬೇಕಾಯಿತು. ಈ ಸೂತ್ರದ ಪ್ರಕಾರ ಶೂದ್ರರು ಪುಂಸವನ, ಸೀಮಂತೋನ್ನಯನ, ಜಾತಕರ್ಮ, ನಾಮಕರಣ, ನಿಷ್ಕಮಣ ಅನ್ನಪ್ರಾಶನ, ಚೌಲ ಹೀಗೆ ಎಲ್ಲವನ್ನೂ ಮಾಡಬಹುದು. ಆದರೆ ಅವಕ್ಕೆ ಮಂತ್ರಪ್ರಯೋಗವಿಲ್ಲ. ವೈಷ್ಣವಪಂಥ

ಕಲಿಯುಗದ ಲಕ್ಷಣಗಳ ವರ್ಣನೆಗಳು ಕಂಡುಬರುವ ಪುರಾಣ ಮತ್ತು ಮಹಾಭಾರತದ ಕೆಲವು ಭಾಗಗಳು ಯಾವಾಗ ರಚಿಸಲ್ಪಟ್ಟವು ಅಥವಾ ಸಂಪಾದಿಸಲ್ಪಟ್ಟವು ಎಂದು ತಿಳಿದುಕೊಳ್ಳುವುದು ತೀರ ಅವಶ್ಯ. ಪ್ರಖ್ಯಾತ ವಿದ್ವಾಂಸರಾದ ಪಾರ್ಗಿಟರ್, ಪಿ. ವಿ. ಕಾಣೆ, ವಿ. ಎಸ್. ಸುಕ್ತಂಕರ್, ಆರ್. ಎಸ್. ಶರ್ಮ ಮುಂತಾದವರ ಅಭಿಪ್ರಾಯಗಳ ಆಧಾರದ ಮೇಲೆ ನಾವು ಪುರಾಣಗಳ ಮತ್ತು ಮಹಾಭಾರತದ ಕೆಲ ಭಾಗಗಳು ಕ್ರಿ.ಶ. ೩, ೪, ೫ನೇ ಶತಮಾನದಲ್ಲಿ (ಗುಪ್ತ-ಗುಪ್ತೋತ್ತರ ಯುಗ) ರಚಿಸಲ್ಪಟ್ಟವೆಂದು ಅಭಿಪ್ರಾಯಪಡಬಹುದು.

ಡಾ|| ರಾಮದಾಸ ಪ್ರಭು ಸಿಂಗನಕೋಡಿ

ಗುಪ್ತರ ಕಾಲದಲ್ಲಿ ಉಚ್ಛ್ರಾಯಸ್ಥಿತಿಯನ್ನು ತಲುಪಿತ್ತು. ಇದು ಶೂದ್ರರಿಗೆ ಧಾರ್ಮಿಕ ಸಮಾನತೆಯನ್ನು ಗಳಿಸಿಕೊಡಲು ಪ್ರಯತ್ನಿಸಿತು. ಈ ಪಂಥವು ಅಸ್ಪೃಶ್ಯರನ್ನೂ ದೂರವಿಡಲಿಲ್ಲ. ನಾರಾಯಣ ಅಥವಾ ವಾಸುದೇವನಲ್ಲಿ ಭಕ್ತಿ ಇರಿಸಿದ ಸ್ತ್ರೀಯರು ಮತ್ತು ಶೂದ್ರರು ಮುಕ್ತಿ ಪಡೆಯಬಹುದೆಂದು ವೈಷ್ಣವ ಗ್ರಂಥಗಳು ಒತ್ತುಕೊಟ್ಟು ಹೇಳುತ್ತವೆ. ಈ ಕಾಲದಲ್ಲಿ ಶೂದ್ರರು ದಾನ ಕೊಡುವ ಹಕ್ಕಿಗೆ ಮಹತ್ವ ಕೊಡಲಾಯಿತು. ಶೂದ್ರರ ಆಕಾಂಕ್ಷೆಗಳೆಲ್ಲಾ ದಾನ ಕೊಡುವುದರಿಂದ ಪೂರೈಸುತ್ತವೆ ಎಂದು ಹೇಳಲಾಯಿತು.

ಗುಪ್ತ-ಗುಪ್ತೋತ್ತರ ಯುಗದಲ್ಲಿ ಶೂದ್ರರ ಸಾಮಾಜಿಕ ಪರಿಸ್ಥಿತಿಯಲ್ಲಾದ ಅಭಿವೃದ್ಧಿ ಒಂದು ಕಡೆಯಾದರೆ, ಆರ್ಯಾವರ್ತದಿಂದ ಹೊರಗೆ ವಲಸೆಹೋದ ಬ್ರಾಹ್ಮಣರು ಅನೇಕ 'ಸ್ಥಳೀಯ' ನಂಬಿಕೆ ಮತ್ತು 'ಅವೈದಿಕ' ಆಚರಣೆಗಳನ್ನು ತಮ್ಮದಾಗಿಸಿಕೊಳ್ಳುತ್ತಾಹೋದರು. ಈ ಪ್ರಕ್ರಿಯೆ ವ್ಯಾಪಕವಾಗಿ ನಡೆಯತೊಡಗಿದಾಗ ಶಾಸ್ತ್ರಕಾರರಲ್ಲಿ ಪ್ರತಿರೋಧಗಳು ವ್ಯಕ್ತವಾಗ ತೊಡಗಿದವು. ಅವೈದಿಕ ಕ್ರಿಯೆಗಳನ್ನು ನಿರ್ವಹಿಸುವ ಬ್ರಾಹ್ಮಣರನ್ನು ಪವಿತ್ರಕಾರ್ಯಗಳಿಗೆ ಆಹ್ವಾನಿಸಬಾರದೆಂದು ಮನು ಹೇಳುತ್ತಾನೆ. ಇಂತಹ ನಿಷೇಧಗಳೇ ಬ್ರಾಹ್ಮಣರು ಅವೈದಿಕ ಆಚರಣೆಗಳನ್ನು ನಿರ್ವಹಿಸುತ್ತಿದ್ದರೆಂಬುದನ್ನು ಸೂಚಿಸುತ್ತವೆ.

ಇಂತಹ ಸಂದರ್ಭದಲ್ಲಿ ಸಂಪ್ರದಾಯಸ್ಥರು ಕಾಲ 'ಆದರ್ಶ' ಸ್ಥಿತಿಯಿಂದ ಅಧಃಪತನದತ್ತ ಸಾಗುತ್ತಿದೆ ಎಂದೂ ಮುಂದೆ ಬ್ರಾಹ್ಮಣರು ಶೂದ್ರರಾಗುತ್ತಾರೆ ಹಾಗೆಯೇ ಶೂದ್ರರು ಬ್ರಾಹ್ಮಣರಾಗುತ್ತಾರೆಂದು ಕಲ್ಪಿಸಿಕೊಳ್ಳುತ್ತಾ 'ಕಲಿಯುಗ'ದ ಲಕ್ಷಣಗಳನ್ನು ವಿವರಿಸತೊಡಗಿದರು.

ಕಲಿಯುಗದ ಇನ್ನೊಂದು ಲಕ್ಷಣ ವರ್ಣಸಂಕರ ಅಥವಾ ಮಿಶ್ರಜಾತಿಗಳ ವೃದ್ಧಿ. ಕ್ರಿಸ್ತ ಶಕದ ಮೊದಲ ಶತಮಾನಗಳನ್ನು ನೋಡಿದರೆ ಯವನ, ಶಕ, ಪಹಲವ, ಕುಶಾಣ, ಹೂಣರು ಒಂದೇ ಸಮನೆ ಭಾರತದ ಮೇಲೆ ದಾಳಿ ನಡೆಸಿ, ಮುಂದೆ ಭಾರತೀಯ ಸಮಾಜದಲ್ಲಿ ಐಕ್ಯರಾದದ್ದು ಒಂದು ಪ್ರಮುಖ ಐತಿಹಾಸಿಕ ಸತ್ಯ. ಹಾಗೆಯೇ ಭೂದಾನ ಪ್ರಕ್ರಿಯೆಯಿಂದ ಬ್ರಾಹ್ಮಣರು ಆರ್ಯಾವರ್ತವನ್ನು ಬಿಟ್ಟು ದಕ್ಷಿಣ ಮತ್ತು ಪೂರ್ವ ಭಾರತದಲ್ಲಿ ಪಸರಿಸುತ್ತಾ ಹೋದದ್ದು ಇನ್ನೊಂದು ಪ್ರಮುಖ ಘಟನೆ. ಈ ಶತಮಾನಗಳಲ್ಲಿ ಮೂಲ ನಿವಾಸಿಗಳನ್ನು ಮತ್ತು ವಿದೇಶಿ ಪಂಗಡಗಳನ್ನು ಚಾತುರ್ವರ್ಣ್ಯ ವ್ಯವಸ್ಥೆಯೊಳಗೆ ಹೇಗಾದರೂ ಮಾಡಿ ಐಕ್ಯಗೊಳಿಸಬೇಕಾದ ಅನಿವಾರ್ಯತೆ ಉಂಟಾಯಿತು. ಆಗ ವರ್ಣ ಸಂಕರವೆಂಬ ಪರಿಕಲ್ಪನೆಯನ್ನು ಬಳಸಿ ಹಲವು ವಿದೇಶಿ ಮತ್ತು ಬುಡಕಟ್ಟು ಜನಾಂಗಗಳನ್ನು ವರ್ಣಸಂಕರದಿಂದ ಹುಟ್ಟಿದವರೆಂದು ಹೆಸರಿಸಿ ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಐಕ್ಯಗೊಳಿಸಲಾಯಿತು. ಇದರ ಪರಿಣಾಮವಾಗಿ ಗುಪ್ತರ ಕಾಲದಲ್ಲೇ ಮಿಶ್ರಜಾತಿಗಳ ಸಂಖ್ಯೆ ಧರ್ಮಶಾಸ್ತ್ರಗಳಲ್ಲಿ ೬೦ನ್ನೂ ಮೀರಿತ್ತು. ಇದೇ ರೀತಿ ಕಾಲ ಮುಂದುವರಿದರೆ 'ವರ್ಣಧರ್ಮ' ಮುಂದೆ ನಾಶವಾಗುತ್ತದೆಂದೂ ಅದೇ ಕಲಿಯುಗವೆಂದು ಪುರಾಣಕರ್ತರು ಭಾವಿಸಿರಬೇಕು.

ಕಲಿಯುಗದ ಇನ್ನೊಂದು ಲಕ್ಷಣ ಮ್ಲೇಚ್ಛ ಹಾಗೂ ಶೂದ್ರ ದೊರೆಗಳ ಆಡಳಿತ. ಮೊದಲೇ ಉಲ್ಲೇಖಿಸಿದಂತೆ ಕ್ರಿಸ್ತ ಶಕದ ಮೊದಲ ಶತಮಾನಗಳಲ್ಲಿ ಉತ್ತರ ಭಾರತದಲ್ಲೆಲ್ಲಾ ಯವನ, ಶಕ, ಕುಶಾಣ, ಹೂಣ ಮುಂತಾದ ವಿದೇಶಿ ರಾಜವಂಶಗಳು ಆಡಳಿತ ನಡೆಸುತ್ತಿದ್ದವು. ಹಾಗೆಯೇ ದಕ್ಷಿಣ ಮತ್ತು ಪೂರ್ವ ಭಾರತದಲ್ಲಿ ಚಿಕ್ಕ ಚಿಕ್ಕ ರಾಜ್ಯಗಳು ಕಾಣಿಸಿಕೊಂಡಿದ್ದವು. ಇವುಗಳಲ್ಲಿ ಕೆಲವನ್ನು ಅಲಹಾಬಾದ್ ಸ್ತಂಭ ಶಾಸನ 'ಅಟವಿಕರಾಜ್ಯ'ಗಳೆಂದು ಉಲ್ಲೇಖಿಸಿದೆ.

ಈ ರಾಜ್ಯಗಳು ಬುಡಕಟ್ಟು ಸಮುದಾಯಗಳಲ್ಲಿ ಕೃಷಿಕವರ್ಗ ಸಮಾಜವು ವಿಸ್ತರಿಸಿದ ಪರಿಣಾಮವಾಗಿ ಹುಟ್ಟಿಕೊಂಡವುಗಳು. ಈ ಬುಡಕಟ್ಟು ಸಮುದಾಯಗಳ ನೇತಾರರು 'ಕ್ಷತ್ರಿಯ' ಅಥವಾ 'ವ್ರಾತ್ಯಕ್ಷತ್ರಿಯ' ವರ್ಗಗಳಾಗಿ ಪರಿವರ್ತಿತವಾದವು. ಸಾಮಾನ್ಯ ಬುಡಕಟ್ಟು ಜನರು ಶೂದ್ರ ಕೃಷಿಕರಾದರು. ಪುರೋಹಿತರ ಸಹಾಯದಿಂದ ವಿದೇಶೀಯರು ಮತ್ತು ಬುಡಕಟ್ಟು ನೇತಾರರು 'ಹಿರಣ್ಯಗರ್ಭ'ವೆಂಬ ಒಂದು ಹೊಸ ಸಂಸ್ಕಾರ ಮಾಡಿಸಿ ತಮ್ಮನ್ನು 'ಕ್ಷತ್ರಿಯ'ರಾಗಿ ಪರಿವರ್ತಿಸಿಕೊಂಡರು. ಈ ಹೊಸ ಕ್ಷತ್ರಿಯರು (ಬುಡಕಟ್ಟು ನೇತಾರ ರಾಗಿದ್ದವರು) ಈಗ ಸಮುದಾಯ ಬಂಧನಗಳನ್ನು ಕಿತ್ತುಹಾಕಿ ಹೊಸ ಹೊಸ ರಾಜ್ಯಗಳನ್ನು ನಿರ್ಮಿಸಿದರು. ಗುಪ್ತರ ಕಾಲದಲ್ಲಿ ಜೀವಿಸಿದ್ದ ಪುರಾಣಕರ್ತರಿಗೆ ಭಾರತದಲ್ಲೆಲ್ಲಾ ಮ್ಲೇಚ್ಛ ಹಾಗೂ ಶೂದ್ರ ರಾಜರ ಆಡಳಿತ ನಡೆಸುತ್ತಿದ್ದಂತೆ ಕಾಣಿಸಿದ್ದು ಸಹಜವೇ. ಪ್ರತಿಷ್ಠಿತ ಕ್ಷತ್ರಿಯ ವಂಶಗಳ ಅಧಃಪತನ ಹಾಗೂ ವ್ರಾತ್ಯಕ್ಷತ್ರಿಯ (ಕೆಳದರ್ಜೆಯ ಕ್ಷತ್ರಿಯ)ರ ಆಡಳಿತ ನೋಡಿ ಕಾಲ ಅಧಃಪತನದತ್ತ ಸಾಗುತ್ತಿದೆ, ಇದು ಕಲಿಯುಗದ ಲಕ್ಷಣ ಎಂದು ಪುರಾಣಕರ್ತರು ಭಾವಿಸಿರಬೇಕು.

ಪುರಾಣಗಳಲ್ಲಿ ವರ್ಣಿಸಲ್ಪಟ್ಟ ಕಲಿಯುಗದ ಲಕ್ಷಣಗಳಲ್ಲಿ ಕೆಲವು ವಾಸ್ತವಿಕವೂ, ಕೆಲವು ಊಹಿಸಿದಂತಹವೂ, ಇನ್ನು ಕೆಲವು ಅತಿಶಯೋಕ್ತಿಯಿಂದ ಕೂಡಿದವುಗಳೂ ಆಗಿವೆ. ಗುಪ್ತರ ಕಾಲದಲ್ಲಿ ನಡೆದ ತೀವ್ರ ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗೆ ಸಂಪ್ರದಾಯಸ್ಥ ಮನಸ್ಸು ಸ್ಪಂದಿಸಿದ, ಪ್ರತಿಕ್ರಿಯಿಸಿದ ಮತ್ತು ಅರ್ಥೈಸಿಕೊಳ್ಳಲು ನಡೆಸಿದ ಪ್ರಯತ್ನವನ್ನು ನಾವು 'ಕಲಿಯುಗ'ದ ಕಲ್ಪನೆಯಲ್ಲಿ ಕಾಣಬಹುದು ಎಂಬುದು ಇತಿಹಾಸಜ್ಞರ ಅಭಿಪ್ರಾಯ.

ಡಾ|| ರಾಮದಾಸ ಪ್ರಭು ಸಿಂಗನಕೋಡಿ
ಉಪನ್ಯಾಸಕರು, ಆಳ್ವಾಸ್ ಕಾಲೇಜು, ಮೂಡಬಿದರೆ

## ಸಾದರ ಸ್ವೀಕಾರ

**ಕಥಾಕುಂಜ** (ಹೊಸತು ವಾಚಿಕೆ – ಸಣ್ಣ ಕಥೆಗಳು)
ಸಂ. : ರವಿಕುಮಾರ್ ಅಜ್ಜೀಪುರ
ಪುಟ : ೧೯೬ ಬೆಲೆ : ರೂ. ೭೫

**ಪರಿಮಳದ ಸುಗ್ಗಿ** (ಹೊಸತು ವಾಚಿಕೆ – ಕವಿತೆಗಳು)
ಸಂ. : ಬಿ. ಶ್ರೀನಿವಾಸರಾಜು
ಪುಟ : ೧೭೬ ಬೆಲೆ : ರೂ. ೭೫
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ., ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಪುಟ್ಟ ಪುಟ್ಟ ಹೆಜ್ಜೆಗಳು** (ಮಿನಿ ಕಥಾ ಸಂಕಲನ)
ಪದ್ಮಾ ಕೃಷ್ಣಮೂರ್ತಿ
ಪುಟ : ೧೦ + ೫೪ ಬೆಲೆ : ರೂ. ೨೫

**ಹೂದೋಟ** (ಹನಿಹನಿ ಕಾವ್ಯ) ಪದ್ಮಾ ಕೃಷ್ಣಮೂರ್ತಿ
ಪುಟ : ೧೪ + ೪೨ ಬೆಲೆ : ರೂ. ೨೫
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಕೃಷ್ಣ ಪ್ರಕಾಶನ, 'ಲಕ್ಷ್ಮೀ ಕೃಪಾ', ೪ನೇ ಅಡ್ಡರಸ್ತೆ, ೨ನೇ ಮುಖ್ಯ ರಸ್ತೆ, ಹನುಮಂತಪುರ ಅಂಚೆ, ಕುವೆಂಪುನಗರ, ತುಮಕೂರು

**ವೈಜ್ಞಾನಿಕತೆ ಮತ್ತು ತಾಂತ್ರಿಕತೆ – ಒಂದು ತಾತ್ವಿಕ ವಿವೇಚನೆ**
ಪ್ರೊ|| ಕೆ. ಶ್ರೀನಿವಾಸನ್
ಪುಟ : ೯೨ ಬೆಲೆ : ರೂ. ೩೫
ಭಾರತೀ ಪ್ರಕಾಶನ, ಸರಸ್ವತಿಪುರಂ, ಮೈಸೂರು-೯

**ಹನಿಚಿಲುಮೆ** (ಹನಿಗವನಗಳು) ಶಿವಕುಮಾರ ಬ. ಜಮದಂಡಿ
ಪುಟ : ೮೮ + ೪ ಬೆಲೆ : ರೂ. ೩೫
ಶ್ರೀ ಸಂತೋಷ್ ಎಸ್. ಲಾಡ್, ಎಮ್‌ಎಲ್‌ಎ, ಸಂಡೂರು

**ಡಾ|| ಯು. ಆರ್. ಅನಂತಮೂರ್ತಿ** (ವ್ಯಕ್ತಿಚಿತ್ರ)
ಡಾ|| ಗವಿಸಿದ್ಧಪ್ಪ ಎಚ್. ಪಾಟೀಲ
ಪುಟ : ೫೬ ಬೆಲೆ : ರೂ. ೧೨

**ಸಾಹಿತ್ಯ ಸಂಕಥನ** (ಲೇಖನಗಳ ಸಂಪುಟ)
ಡಾ|| ಗವಿಸಿದ್ಧಪ್ಪ ಎಚ್. ಪಾಟೀಲ
ಪುಟ : ೮ + ೧೮೬ ಬೆಲೆ : ರೂ. ೧೨೫
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಸರಸ್ವತಿ ಗೋದಾಮ, ಗುಲಬರ್ಗಾ - ೫೮೫ ೧೦೧

**ಚಿಂತನಾಂಜಲಿ** ಡಾ|| ರಾಜಶೇಖರ ಜಮದಂಡಿ
ಪುಟ : ೧೪ + ೧೧೪ ಬೆಲೆ : ರೂ. ೫೦
ಪರಮಪೂಜ್ಯ ಶ್ರೀ ಬೋಳಬಸವ ಮಹಾಸ್ವಾಮಿಗಳು, ಅಧ್ಯಕ್ಷರು, ಶ್ರೀ ಬೋಳಬಸವೇಶ್ವರ ಆಧ್ಯಾತ್ಮಿಕ ಮತ್ತು ಶಿಕ್ಷಣ ಸಂಸ್ಥೆ, ಕಲ್ಲುಮಠ, ಮಂಡಗಿರಿ, ಆದವಾನಿ - ೫೧೮ ೩೦೧

**ನಿಂತ ನೀರ ಕಲಕಬೇಡಿ ಕಲ್ಲುಗಳೇ...**
(ಪ್ರೀತಿ-ಪ್ರಣಯಗಳ ಬರೆಹಗಳು) ಅಂಬ್ರಯ್ಯ ಮಠ
ಪುಟ : ೧೩೨ ಬೆಲೆ : ರೂ. ೪೦
ಪುಸ್ತಕನಿಧಿ, ಹಳ್ನಾಡಿ-ಹರ್ಕಾಡಿ ಅಂಚೆ, ಗಾವಳಿ, ಕುಂದಾಪುರ - ೫೭೬ ೨೧೦

**ಉತ್ತರವಿರದ ಪ್ರಶ್ನೆಗಳು** (ಕವನಗಳು) ಡಿ. ಸಿ. ಗೀತಾ
ಪುಟ : ೬೪ ಬೆಲೆ : ರೂ. ೩೦
ಸುಮುಖ ಪ್ರಕಾಶನ, ನಂ. ೧೭೪೩/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿರಸ್ತೆ ಟೋಲ್‌ಗೇಟ್, ಬೆಂಗಳೂರು - ೫೬೦ ೦೨೩

**ಮಳೆಬಿಸಿಲು** (ಹನಿಗವನಗಳು) ರವಿಶಂಕರ ಒಡ್ಡಂಬೆಟ್ಟು
ಪುಟ : ೧೦ + ೭೪ ಬೆಲೆ : ರೂ. ೫೦
ಕಲ್ಲೂರ ಪ್ರಕಾಶನ, ಶ್ರೀ ಕೃಷ್ಣ ಕಾಂಪ್ಲೆಕ್ಸ್, ಎಂ.ಜಿ. ರಸ್ತೆ, ಕೊಡಿಯಾಲ್‌ಬೈಲ್, ಮಂಗಳೂರು - ೩

**ಲೆಕ್ಕವಿಲ್ಲದವರು** (ಕವನ ಸಂಕಲನ) ನಾಗೇಶದೇವ
ಪುಟ : ೬೦ + ೪ ಬೆಲೆ : ರೂ. ೩೫
ಶ್ರೀ ರಾಘವೇಂದ್ರ ಪ್ರಕಾಶನ, ಅಂಬರಕೊಡ್ಲ, ಅಂಕೋಲಾ - ೫೮೧ ೩೧೪

**ಕಲಬುರ್ಗಿ ಜಿಲ್ಲಾ ದರ್ಶನ** (ಬೆಳ್ಳಿಬೆಳಕು ಮಾಲೆ – ಜಿಲ್ಲಾ ದರ್ಶನ ಸಂಪುಟ) ಸಂ. : ಡಾ|| ಟಿ. ಎಂ. ಭಾಸ್ಕರ್
ಶ್ರೀ ರಾಜಶೇಖರ ಹತಗುಂದಿ
ಪುಟ : ೧೦ + ೨೯೦ ಬೆಲೆ : ರೂ. ೮೦

**ಪುರಸ್ಕೃತ ಕೃತಿಗಳ ಸಮೀಕ್ಷೆ** (ಬೆಳ್ಳಿಬೆಳಕು ಮಾಲೆ – ಪ್ರಾತಿನಿಧಿಕ ಸಂಕಲನ) ಸಂ. : ಡಾ|| ಗವಿಸಿದ್ಧಪ್ಪ ಎಚ್. ಪಾಟೀಲ
ಪುಟ : ೧೬ + ೨೨೬ ಬೆಲೆ : ರೂ. ೭೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ನಿರ್ದೇಶಕರು, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ - ೫೮೫ ೧೦೬

# ದಿನಚರಿ



೧

ಪ್ರತಿ ಬೆಳಗೂ ಹೊಸ ಆಸೆಯಿಂದ
ಅಕ್ಷರಗಳ ತಬ್ಬುತ್ತೇನೆ
ಹೇಳುತ್ತೇನೆ ಆ ಹಕ್ಕಿಯಷ್ಟೇ ನಯವಾಗಿ
'ಹಾಡೆಂದರೆ ಮಗು, ಅದು ಬರಿಯ ದನಿಯಲ್ಲ
ಎದೆಯ ಉರಿ'
ಬಣ್ಣವೆಂದರೆ ಅದು ರಂಗಲ್ಲ, ರಾಗನದಿ
ಹಸಿರಿಗೋ ಹತ್ತಾರು ಹೊಸರೂಪ – ನಿತ್ಯ ನಿಯತಿ

೨

ಮೂಲೆಯಿಂದೆಲ್ಲೋ ತೂರುವ
ತಲೆಯಿಲ್ಲದ ದನಿ –
ಹಸಿರಿನ ಬಗ್ಗೆ ಮಾಡುವಿರಾ ಪಾಠ ?
ಹಸಿರೆಂದರೆ... ಹಸಿರೆಂದರೆ... ಆ ಧ್ವಜ
ಸಂಜೆ ಕೂಟು ಕೂಟುಗಳಲಿ ಅದೇ ಚರ್ಚೆ
ಬುದ್ಧಿವಂತರ ಉವಾಚ
'ಕಿತ್ತಿರಿ ಆ ಧ್ವಜ'

೩

ಸೂರ್ಯನಿಗೆ ನೆತ್ತರುಂಡ ಬವಳಿ
ಎಷ್ಟೆಲ್ಲಕ್ಕೂ ಸಾಕ್ಷಿಯಾದವನಿಗೆ
ಕಟಕಟೆಯಲಿ ನಿಲ್ಲಲನುವಿಲ್ಲ
ದನಿಯಿಲ್ಲ
ತನ್ನ ಮಾತ ಮುಟ್ಟಿಸಲು
ಚಿತ್ತಾರ ಬರೆಯುತ್ತಲೇ ಇರುವ ಮೂಗ
ಲಕ್ಷ ಹಕ್ಕಿಗಳ ಕೊರಳಲ್ಲಿ ಹಾಡು ಹೊಸೆವ
ಅವನ ಭಾಷೆಯೋ
ಒಂದೊಂದು ಕಿರಣಕ್ಕೆ ಒಂದೊಂದು
ರಂಗೋಲಿ
ಒಂದೊಂದು ಉಸಿರಿಗೆ ಒಂದೊಂದು
ಹೂ
ಬಣ್ಣದಲಿ ಹಕ್ಕಿಯಲಿ ಹೂವಿನಲಿ ನೆರಳಲ್ಲಿ
ಮಾತಾಡುತ್ತಲೇ ಇರುವ ಸಂಯಮಿ
ನನಗೆ ಸೂರ್ಯನಲಿ ಭರವಸೆಯಿದೆ.

೪

ಏನಾದರಾಗಬೇಕು ದಿಢೀರನೆ
ಎಂದು ಹೊರಟ ಹಿಂಡಿನಲಿ
ಹಾಡಿಲ್ಲ ಕೊಳಲಿಲ್ಲ ಇಲ್ಲ ಬಣ್ಣ
ಆ ಪಂಪನೆಂಬ ಮುತ್ತಜ್ಜನ
ಒಂದು ಪಂಕ್ತಿ ನನ್ನ ಜೋಳಿಗೆಯಲ್ಲಿ
ಬನವಾಸಿಯ ಬಕುಲದ ಗಂಧ
ಕದಳಿಯ ಬನವ
ಮಿಥಿಲೆಯ ಮಣ್ಣ
ಬಣ್ಣಿಸಲೀಗ ಅನುವಿಲ್ಲ,

೫

ಕಣ್ಣ ಬೋರ್ಡಿನಲ್ಲೊಂದು ಪ್ರಶ್ನೆ
ಅನವರತ –
ಈ ಮಾತಿಗೆ ಎಷ್ಟು ಮಾರ್ಕು ?
ಇದು ಉತ್ತರದ ಎಷ್ಟನೇ ಪಾಯಿಂಟು ?
ಎಷ್ಟೆಲ್ಲ ಹೇಳುತ್ತೀರಿ
ಪಾಪ, ದಣಿಯುತ್ತೀರಿ
ಕೊಡಬಾರದೇ, ಪ್ರತಿ ಇಪ್ಪತ್ತು ನಿಮಿಷಕ್ಕೆ
ಒಂದಿಷ್ಟು ಮನರಂಜನೆ
ಒಗ್ಗಿಹೋಗಿದೆ ನಮಗೆ
ಸುಮಸುಮ್ಮನೆ ಪ್ರಶ್ನೆ ಕೇಳಬೇಡಿ
ಕಲಕಬೇಡಿ ನೆಮ್ಮದಿಯ
ಗೌರವವಿದೆ ನಿಮ್ಮ ಬಗ್ಗೆ –
ಈ ಸ್ಪರ್ಧೆಯ ಕಾಲದಲ್ಲೂ
ಅನ್ನಕ್ಕೊಂದು ದಾರಿ ಕಂಡಿದ್ದಕ್ಕೆ
ಒಂದು ಗಂಟೆಯ ನಿಮ್ಮ ಮಾತ
ನಮ್ಮ ಆಯುಷ್ಯದಿಂದ ವಜಾ ಮಾಡುತ್ತೇವೆ.
ಉದ್ದಾನ ಉದ್ದನ ಆಯುಷ್ಯದ
ಗಂಟೆಗಳ ಬೇರೀಜಿನಲ್ಲಿ
ನೀವು ಕಳೆಯುವುದೇನು ಮಹಾ ?
ನಿಮ್ಮ ಹರಿದ ಚಪ್ಪಲಿಗೆ ಲೊಚಗುಡುತ್ತ
ಮಾರ್ಕೆಟ್ ವ್ಯಾಲ್ಯೂ ಬಗ್ಗೆ ಮಾತಾಡಿಕೊಳ್ಳುತ್ತೇವೆ.

೬

ನಾ ನೆತ್ತರು ಮಿಂದಂತೆ ಬೆಪ್ಪ
ಎಲ್ಲ ಅದಲು ಬದಲು
ಕಂಚೀ ಕದಲು
ಉಸುಕಿನ ಉರುಬಿನಲಿ
ಪಾದ ಪೂರಾ ಹಚ್ಚಿ
ನಡೆ ಪಂಚೇಂದ್ರಿಯಗಳಿಗೆ
ವೇದ್ಯವಾದಂತೆ ನಡೆದಿದ್ದೆವಲ್ಲ
ಗಂಟಲೊತ್ತುವ ನೆನಪು.

೭

ಮಾತೆಂಬುದು ಜ್ಯೋತಿರ್ಲಿಂಗ
ಎಂದ ಅಣ್ಣನೇ ತೋರು ಮುಂಬೆಳಗ
ಕ್ಷಮಿಸು ಸೂರ್ಯನೇ,
ನಾ ನಿನ್ನಷ್ಟು ಕುಶಲಕರ್ಮಿಯಲ್ಲ.

ಡಾ|| ವಿನಯಾ
ಶ್ರೀ ಸಿದ್ಧೇಶ್ವರ ಸರ್ಕಾರಿ ಪದವಿ ಕಾಲೇಜು
ನರಗುಂದ, ಜಿಲ್ಲೆ: ಗದಗ



# ಪ್ರಸ್ತುತವಿದೆ
# ಹಿಂದೆಂದಿಗಿಂತಲೂ
# ಉತ್ತಮವಾದ ಹೊಸ
# ಸಂತೂರ್

ಇದೀಗ ಹೊಸ ಸಂತೂರ್ ಬಳಸಲು ಇನ್ನಷ್ಟು ಕಾರಣಗಳು

**ನ್ಯಾಚುರಲ್ ಸ್ಕಿನ್ ಸಾಫ್ಟನರ್ಸ್**
ನೀಡುವುದು ಕೋಮಲ
ಹಾಗೂ ನುಣುಪಾದ ತ್ವಚೆ

ಮೈಮರೆಸುವ **ಹೊಸ ಪರಿಮಳ**
ನೀಡುವುದು, ಆಹ್ಲಾದಕರ
ಸ್ನಾನದ ಅನುಭವ

**ಚಂದನ ಮತ್ತು ಅರಿಸಿನದ**
**ಅಡ್ವಾನ್ಸ್ಡ್ ಎಕ್ಸ್‌ಟ್ರಾಕ್ಟ್ಸ್**
ನೀಡುವುದು
ತಾರುಣ್ಯ ಭರಿತ ತ್ವಚೆ




ಹೊಸ **ಸಂತೂರ್**

ನಿಮಗೆಂದೇ ವಿಶೇಷವಾಗಿ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001; Editor : Dr. G. Ramakrishna

**HOSATHU** Kannada Monthly / April 2006 Rs. 12
Registered CPMG / KA / BGE – 7 / 2006-08. Posted at Bangalore PSO on the 3rd of every month
WPP No. 14. Licenced to post without prepayment. RNI Regn. No. KARKAN/1999/614.



ಗಣಪತಿ

# ಅಪೂರ್ವ ಕಲಾವಿದ ಜಯಂತ್ ಹುಬ್ಳಿ

ಮೈಸೂರಿನ ರಂಗಾಯಣ ಕಲಾಸಕ್ತರನ್ನು ತನ್ನೆಡೆಗೆ ಸೆಳೆಯಲು ಖ್ಯಾತ ಚಿತ್ರ, ಶಿಲ್ಪ ಕಲಾವಿದರ ಕಲಾಕೃತಿಗಳನ್ನು ಆಗಾಗ ಪ್ರದರ್ಶಿಸುವುದು ರೂಢಿ. 'ಬಹುರೂಪಿ' ಎಂಬ ಹೆಸರಿನ ರಾಷ್ಟ್ರೀಯ ನಾಟಕೋತ್ಸವದ ಸಂದರ್ಭದಲ್ಲಿ ಯುವ ಕಲಾವಿದ ಜಯಂತ್ ಹುಬ್ಳಿ ಅವರ ಗ್ರೈನ್ಸ್ ಕಲಾಪ್ರದರ್ಶನವನ್ನು ಆಯೋಜಿಸಿ ಕಲಾಸಕ್ತರ ಕಣ್ತಣಿಸಿತು.

ಜಯಂತ್ ಮೂಲತಃ ಬೆಳಗಾಂನವರು. ಮೈಸೂರಿನ 'ಕಾವಾ'ದಲ್ಲಿ ಕಲಾಭ್ಯಾಸ ನಡೆಸಿರುವ ಇವರು ವಿಶ್ವದಲ್ಲೇ ನೂತನ ಎನ್ನಬಹುದಾದ ಕಲಾಪ್ರಕಾರವೊಂದನ್ನು ಹುಟ್ಟುಹಾಕಿದ್ದಾರೆ. ಆ ಕಲೆಗೆ 'ಗ್ರೈನ್ಸ್' ಎಂಬ ಹೆಸರನ್ನು ಅವರೇ ಇಟ್ಟಿದ್ದಾರೆ. 'ಸಿಲ್ವರ್‌ವುಡ್' ಬಳಸಿ ಕಲಾಕೃತಿಗಳನ್ನು ರೂಪಿಸುವ ಜಯಂತ್ ಸತತ ಹತ್ತು ವರ್ಷಗಳಿಂದ ಈ ಕಲೆಯಲ್ಲಿ ತೊಡಗಿಕೊಂಡಿದ್ದಾರೆ.

ಮಂಜುನಾಥ್ ಹೆಚ್.
'ಮುಂದಲಹಟ್ಟಿ', ಸಿದ್ಧರಾಮನಹುಂಡಿ, ಯಡಕೊಳ ಅಂಚೆ, ಮೈಸೂರು



ಏಸುಕ್ರಿಸ್ತ



ಸ್ನಾನಗೃಹದಲ್ಲಿ ಸ್ತ್ರೀ



ಕೋಳಿಮರಿಗಳು



ಕುದುರೆ